|| ಓಂ ||

ಶ್ರೀವಾದಿರಾಜವಿರಚಿತಾ

# ಹರಿಭಕ್ತಿಲತಾ

ದ್ವೈತವೇದಾಂತವಿಶಾರದ, ವಿದ್ಯಾವಾಚಸ್ಪತಿ, ಸಚ್ಛಾಸ್ತ್ರ ಪ್ರವಚನರತ್ನ,

ಶಾಸ್ತ್ರನಿಧಿ, ಮಾಧ್ವಭೂಷಣ, ರಾವ್‌ಬಹದ್ದೂರ್

ಬಿ. ವೆಂಕಟೇಶಾಚಾರ್ಯರ

ಸರಳ ಕನ್ನಡ ಅನುವಾದ ಸಹಿತ

ಪ್ರೊಫೆಸರ್ ಬಿ. ವೆಂಕಟೇಶಾಚಾರ್ಯ ಮೆಮೋರಿಯಲ್ ಟ್ರಸ್ಟ್

88/62, ಈಸ್ಟ್ ಎಂಡ್ 'ಬಿ' ಮೈನ್ ರೋಡ್

9ನೇ ಬ್ಲಾಕ್, ಜಯನಗರ, ಬೆಂಗಳೂರು-69



ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।

ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥

## FOREWORD

Amongst the papers of my father, Late Prof. B. Venkatesachar, we found a manuscript of his translation of the first 152 slokas of Sri Vadiraja's Haribhaktilata, published in the year 1953 by the Sode Vadiraja Mutt. This was on the same lines as his two earlier translations of Sri Vadiraja's Sarasabharathivilasa and Srutitatvaprakasika, already published. During one of my visits to Mantralaya, I met Vidyavisarada Pandit M. S. Ranganathachar and requested him to complete the translation of the remaining slokas so that the same could be published by us. The learned Acharya readily agreed to my request and completed the assignment. In addition, he has written a masterly introduction. Grateful thanks of the publishers are due to the Acharya for his effort. It is worth mentioning that he has preferred to remain incognito by refusing to be identified as a co-author of this work.

Sri Vadiraja's Haribhaktilata is believed to be a verbatim record of the debate between him and the Raj Guru of Arasappa Nayaka, the ruler of Sode. That Sri Vadiraja was victorious in this debate is a historical fact. As evidence of this, one can mention the Basava Nagāri and the Basavana Ghante used even

now during Pooja by the Swamijees of Sri Vadiraja Mutt. While reading this work one must keep in mind this background.

Professor B. Venkatesachar Memorial Trust has purposely delayed the publication of this work so that it might coincide with the 110th Birth Anniversary of the Author which falls on the 18th of June 1989.

Thanks are due to Sri D. S. Krishnachar of Prabha Printing House for the characteristic personal interest shown by him in getting up this neat looking publication.

Bangalore
18-6-1989

B. V. RAGHAVENDRA RAO
*Chairman*
Board of Trustees of
Prof. B. Venkatesachar Memorial Trust

ಶ್ರೀಃ

ಶ್ರೀಲಕ್ಷ್ಮೀಹಯಗ್ರೀವಾಯ ನಮಃ

# ಪೀಠಿಕಾ

ಋಜುಗಣಪ್ರವಿಷ್ಟರಾದ ಶ್ರೀವಾದಿರಾಜಗುರುವರೇಣ್ಯರು 'ಶ್ರೀಹರಿಭಕ್ತಿಲತಾ' ಎಂಬ ಗ್ರಂಥವನ್ನು ರಚಿಸಿ ಮುಕ್ತಿಯೋಗ್ಯಜೀವರಿಗೆ ಸ್ಫೂರ್ತಿಯನ್ನುಂಟುಮಾಡುವ ಮಹೋಪಕಾರವನ್ನು ಮಾಡಿರುತ್ತಾರೆ. ಶ್ರೀಮದಾನಂದತೀರ್ಥ ಭಗವತ್ಪಾದರು ಯತಿಪ್ರಣವಕಲ್ಪದಲ್ಲಿ ಅಂತಿಮವಾಗಿ ಪರಮಹಂಸಾಶ್ರಮಿಗಳಿಗೆ "ವಿಷ್ಣೋಃ ಸರ್ವೋತ್ತಮತ್ವಂ ಚ ಸರ್ವದಾ ಪ್ರತಿಪಾದಯ" ಎಂಬ ಯಾವ ದಿವ್ಯಸಂದೇಶವನ್ನು ಉಪದೇಶ ಮಾಡಿರುತ್ತಾರೆಯೋ, ಅದರಂತೆ (ಅದನ್ನನುಸರಿಸಿ) ಬಹಳ ರಮಣೀಯ ವಾದ ಸರಣಿಯಲ್ಲಿ ವೇದವಾಣಿಯಲ್ಲಿನ ನಿರೂಪಣೆಗಳನ್ನು ವಿವರಿಸಿ, ಪುರಾಣರಾಜ ವೆನಿಸಿದ ಶ್ರೀಮದ್ಭಾಗವತದಲ್ಲಿನ ಕಥಾಂಶಗಳನ್ನೂ ಉದಾಹರಿಸಿ, ಎಂತಹ ಮಂದಮತಿಗೂ ಶ್ರೀಹರಿಯ ಹಿರಿಮೆಯು ಮನದಟ್ಟಾಗುವಂತೆ ಪ್ರತಿಪಾದಿಸಿರು ತ್ತಾರೆ. ಪ್ರಧಾನವಾಗಿ ಋಗ್ವೇದದಲ್ಲಿನ 2, 3, 5ನೇ ಮಂಡಲಗಳಲ್ಲಿರುವ ವೇದವಾಕ್ಯಗಳನ್ನೂ ಅದರಲ್ಲೂ ರುದ್ರಸೂಕ್ತವನ್ನೇ ಉಲ್ಲೇಖಿಸಿ, ಅದರ ನಿಜವಾದ ಅರ್ಥವನ್ನು ತೋರಿಸಿ ರುದ್ರದೇವರು ಶ್ರೀಹರಿಯ ಪರಮಭಕ್ತರೆಂಬುದನ್ನು ಸ್ಪಷ್ಟ ಪಡಿಸಿದ್ದಾರೆ. "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಎಂಬಂತೆ ಅಪೌರುಷೇಯವೇದದ ಅರ್ಥಗಳ ವಿವರಣೆಗಾಗಿಯೇ, ದೃಷ್ಟಾಂತಗಳ ಮೂಲಕವಾಗಿ ತೋರಿಸುವುದಕ್ಕಾಗಿಯೇ ಹೊರಟಿರುವ ಪೌರಾಣಿಕ ಕಥಾ ಭಾಗಗಳನ್ನು ಅಲ್ಲಲ್ಲಿ ಯೋಗ್ಯಚೇತನರ ಗಮನವು ಕೇಂದ್ರೀಕೃತವಾಗುವಂತೆ ಉದಾಹರಿಸಿರುತ್ತಾರೆ. ಅಬೋಧಕತ್ವ, ವಿಪರೀತಬೋಧಕತ್ವಾದಿ ಶಬ್ದದೋಷಗಳಿಗೆ ಸ್ವಲ್ಪವೂ ಅವಕಾಶವಿಲ್ಲದಿರುವ, ಯಾರಿಂದಲೂ ಯಾವ ಕಾಲದೇಶಗಳಲ್ಲಿಯೂ ರಚಿತವಾಗದಿರುವ, ಆದ್ದರಿಂದಲೇ ಅಪೌರುಷೇಯಗಳೆಂದು ಶಾಸ್ತ್ರಪ್ರಸಿದ್ಧವಾದ ವೇದವಾಣಿಗೆ ವ್ಯಾಖ್ಯಾನರೂಪವಾಗಿಯೇ ಸಕಲ ಸ್ಮೃತಿಗಳೂ ಹೊರಟಿವೆ. ಆದರೆ ಅಜ್ಞಜನಮೋಹನಾರ್ಥವಾಗಿ ಪ್ರವೃತ್ತವಾಗಿರುವ, ಪರಮಾತ್ಮನ ಆಜ್ಞೆಯಂತೆ ಇತರರಿಂದ ರಚಿತಗಳಾಗಿರುವ ಅನೇಕ ಸ್ಮೃತಿಗಳು ಹೊರಟಿರುವುದರಿಂದ ಅವುಗಳಲ್ಲಿನ

ಕಥಾಭಾಗಗಳು ಅಂದರೆ 'ಲಿಂಗಮೂಲಾನ್ವೇಷಣ ಕಥೆಯೇ' ಮೊದಲಾದವು, ವೇದಕ್ಕೆ ವಿರುದ್ಧಗಳಾದುದರಿಂದ ಅವುಗಳು ಪ್ರಮಾಣಗಳೆನಿಸಿರುವುದಿಲ್ಲ. ವೇದಾನುಸಾರಿಯಾದ ಸ್ಮೃತಿಗಳು ಮಾತ್ರ ಪ್ರಮಾಣಗಳಾಗಿವೆ. ಹೀಗಿರುವಲ್ಲಿ ವೇದಗಳಿಗೆ ಅನನುಗುಣಗಳಾದ ಪೌರುಷೇಯ ವಾಕ್ಯಗಳು ವೇದಕ್ಕಿಂತಲೂ ಪ್ರಬಲಗಳೆಂದು ಒಪ್ಪಿದರೆ "ತದಾ ಸ್ಯಾದ್ವಧಿ ಹರ್ಯಕ್ಷಸದೃಶಃ ಮೃಗೀಶಿಶುಃ" ಎಂದು ಹಂಗಿಸಿರುತ್ತಾರೆ. ಅದರ ಅರ್ಥವು ಹೀಗಿದೆ. "ದುರ್ಬಲವಾದ ಜಿಂಕೆಯ ಮರಿಯು ಮೃಗರಾಜನಿಗೆ (ಸಿಂಹಕ್ಕೆ) ಸಮಾನವೆನಿಸೀತು" ಎಂದು ಅಲ್ಪಮತಿಗೂ ಕೂಡ ಮನಮುಟ್ಟುವಂತೆ ನುಡಿದಿದ್ದಾರೆ.

ಈ ಹರಿಭಕ್ತಿಲತಾ ಗ್ರಂಥವು ಆರಂಭದಲ್ಲಿಯೂ, ಮಧ್ಯದಲ್ಲಿಯೂ, ಕಡೆಯಲ್ಲಿಯೂ ಸಹ ಬ್ರಹ್ಮರುದ್ರಾದಿ ದೇವತೆಗಳಿಗಿಂತಲೂ ಸರ್ವೋತ್ತಮನಾದ ಜಗಜ್ಜನ್ಮಾದಿಕಾರಣನಾದ, ಸರ್ವತಂತ್ರ ಸ್ವತಂತ್ರನಾದ ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಯ ಪತಿಯಾದ ಶ್ರೀಮನ್ನಾರಾಯಣನ ಸರ್ವೋತ್ತಮತ್ವವನ್ನು ಪ್ರಧಾನವಾಗಿ ಪ್ರತಿಪಾದಿಸಲು ರಚಿತವಾಗಿದೆ.

ಶಿವನನ್ನುದ್ದೇಶಿಸಿ, ತಪಸ್ಸನ್ನಾಚರಿಸಿ, ಸುಲಭವಾಗಿ ವರಗಳನ್ನು ಪಡೆದು, ದೇವತೆಗಳಿಗೆ, ಸಜ್ಜನರಿಗೆ ಹಿಂಸೆಮಾಡಿ, ಲೋಕಕಂಟಕರಾಗಿ ಮೆರೆದು ಕಡೆಗೆ ದೇವತೆಗಳಿಂದ ಪ್ರಾರ್ಥಿತನಾದ ಶ್ರೀಹರಿಯಿಂದ ನಿಗ್ರಹಿಸಲ್ಪಟ್ಟಿರುವ ವಿಚಾರವು ವೇದದಲ್ಲೂ, ಪುರಾಣಗಳಲ್ಲೂ, ಇತಿಹಾಸಾದಿ ಗ್ರಂಥಗಳಲ್ಲೂ ಹೇರಳವಾಗಿ ಕಥಾರೂಪವಾಗಿ ದೃಷ್ಟಾಂತರೂಪವಾಗಿ ಪ್ರತಿಪಾದಿಸಲ್ಪಟ್ಟಿದೆ. ಶಿವನ ಉಪಾಸನೆ ಮಾಡಿ ತಾತ್ಕಾಲಿಕವಾದ ಐಶ್ವರ್ಯವನ್ನೂ ಬಲವನ್ನೂ ಪಡೆದು, ನಶ್ವರವಾದ ಸಂಪತ್ತಿನಿಂದ ಕೆಲವುಕಾಲ ಮೆರೆದಾಗ್ಯೂ ಕಡೆಗೆ ಅವರಿಗೆಲ್ಲಾ ಅಧೋಗತಿಯೇ ಆಗಿರುವುದನ್ನು ಪುರಾಣಗಳು ಹೇಳುತ್ತಲಿವೆ.

ಆದ್ದರಿಂದ ಮುಮುಕ್ಷುಗಳಾದ ಸಾತ್ವಿಕ ಜೀವರಿಗೆ ಸಂದೇಹಗಳಾಗಲಿ, ಭ್ರಾಂತಿಗಳಾಗಲಿ ಉಂಟಾಗದಿರಲೆಂದು ಸರ್ವಸದಾಗಮಗಳ ಮುಖ್ಯ ತಾತ್ಪರ್ಯ-ವಿಷಯವಾದ "ಶ್ರೀಹರಿಸರ್ವೋತ್ತಮತ್ವದ" ನಿಶ್ಚಯಕ್ಕಾಗಿ ಶ್ರೀವಾದಿರಾಜ ಗುರುವರೇಣ್ಯರು ಈ ಹರಿಭಕ್ತಿಲತಾ ಗ್ರಂಥವನ್ನು ಆರಂಭಿಸಿರುತ್ತಾರೆ.

ಋಗ್ವೇದದ ಎರಡನೇ ಮಂಡಲದ ಏಳನೇ ಅನುವಾಕದ ಹದಿನೆಂಟನೆಯ ಮಂತ್ರವು ರುದ್ರಸೂಕ್ತವಾಗಿದೆ.

ಅದರಲ್ಲಿ ರುದ್ರನನ್ನು ಕುರಿತು ಭಕ್ತನ ಪ್ರಾರ್ಥನೆಯು ಈ ರೀತಿ ಇದೆ. ಎಲೈ ರುದ್ರನೇ ನೀನು ಶ್ರೀನರಹರಿಯ ಭಕ್ತನಾಗಿದ್ದೀಯೆ, ನಿನ್ನ ಹೃದಯ ಗುಹಾದಲ್ಲಿರುವ ಶ್ರೀಮನ್ನೃಸಿಂಹನನ್ನು ಸ್ತೋತ್ರಮಾಡುತ್ತಿರುತ್ತೀಯೇ. ನರಹರಿ ಯನ್ನು ಸರ್ವದಾ ಚಿಂತಿಸುತ್ತಿರುವ ನಿನ್ನನ್ನು ಸ್ತೋತ್ರ ಮಾಡುವ ನನ್ನನ್ನು, ಸುಖಿಯನ್ನಾಗಿ ಮಾಡು. ನಿನ್ನ ಪರಿವಾರಗಳಾದ ಭೂತಗಣಗಳು ನನ್ನ ಶತ್ರು ಗಳನ್ನು ನಾಶಗೊಳಿಸಲಿ" ಎಂದಿದೆ. ಇದರಿಂದ ಶಿವನು ಪರಮವೈಷ್ಣವಾಗ್ರಣಿ ಯಾಗಿರುವನೆಂದು ತಿಳಿದುಬರುವುದರಿಂದ ಅಂತಹ ವಿಷ್ಣುಭಕ್ತನಾದ ಶಿವನು ಸರ್ವೋತ್ತಮ ದೇವತೆಯೋ, ಶಿವನಿಂದ ಸ್ತುತ್ಯನಾದ ನರಹರಿಯು ಸರ್ವೋ ತ್ತಮನೋ ಎಂಬುದಕ್ಕೆ ತಕ್ಕ ಸಮಾಧಾನವನ್ನು ಪ್ರತಿವಾದಿಗಳೇ ಹೇಳಲಿ ಎಂದು ಶ್ರೀವಾದಿರಾಜರು ಒಂದು ಸವಾಲನ್ನು ಹಾಕಿರುತ್ತಾರೆ.

ಋಗ್ವೇದದಲ್ಲಿ ಮಂಡಲ 2, ಸೂಕ್ತ 7, ಮಂತ್ರ 18ನೇ ರುದ್ರ ಸೂಕ್ತದಲ್ಲಿ "ಕುಮಾರಶ್ಚಿತ್ ಪಿತರಂ" ಎಂದು ಪ್ರಾರಂಭವಾಗಿರುವ ಮಂತ್ರದಲ್ಲಿ ಶ್ರೀಕೃಷ್ಣಾ-ವತಾರ ಕಾಲದಲ್ಲಿ "ಕೈಲಾಸಯಾತ್ರೆ ಕೈಗೊಂಡ ಶ್ರೀಕೃಷ್ಣಪರಮಾತ್ಮನಿಂದ ವಂದಿಸಲ್ಪಟ್ಟ ಎಲೈ ರುದ್ರನೇ ನೀನು, ನಮ್ಮ ಸಂಸಾರವ್ಯಾಧಿಯನ್ನು ನಾಶಗೊಳಿಸಿ ದಿವ್ಯತತ್ವ ಜ್ಞಾನವನ್ನು ಕೊಡು" ಎಂದಿದೆ.

ಮುಕ್ತಿಗೆ ಅನರ್ಹರಾಗಿರುವವರಿಗೆ ಅನ್ಯಥಾ ಜ್ಞಾನವನ್ನು ಹುಟ್ಟಿಸುವುದ ಕ್ಕಾಗಿ, "ಎಲೈ ರುದ್ರನೇ ನಾನು ನಿನ್ನನ್ನು ಕುರಿತು ನಮಸ್ಕಾರ ಮಾಡುತ್ತೇನೆ. ಪೂಜಿಸುತ್ತೇನೆ. ಸ್ತೋತ್ರ ಮಾಡುತ್ತೇನೆ" ಇದೆಲ್ಲಾ ವಿಚಿತ್ರ ವ್ಯಾಪಾರವು ತಾಮಸಜೀವರ ವ್ಯಾಮೋಹಕ್ಕೆಂದು ತಿಳಿ ಎಂದು ಪರಮಾತ್ಮನೇ ಸಾಕ್ಷಾತ್ತಾಗಿ ರುದ್ರನನ್ನು ಕುರಿತು ಹೇಳಿರುವ ಪಾದ್ಮಪುರಾಣದ ವಚನವು ಈ ರೀತಿ ಇದೆ.

"ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ ।
ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇಯುಗೇ"

ಎಂದು ಪದ್ಮಪುರಾಣದ "ತಾರಕಬ್ರಹ್ಮರಾಜಸಂಹಿತಾ" ಭಾಗದಲ್ಲಿ ಶ್ರೀವಿಷ್ಣುವು ರುದ್ರನಿಗೆ ಹೇಳಿರುತ್ತಾನೆ.

ಋಗ್ವೇದದ ಮಂಡಲ 3, ಸೂಕ್ತ 8, ಮಂತ್ರ 16ರಲ್ಲಿ "ತವ ಶ್ರಿಯೇ ಮರುತೋ" ಎಂದು ಪ್ರಾರಂಭವಾಗಿರುವುದರಲ್ಲಿ ಶ್ರೀವಿಷ್ಣುವಿನ ಪಾದೋದಕದಿಂದ ರುದ್ರನಿಗೆ ಪವಿತ್ರತೆಯು ಉಕ್ತವಾಗಿದೆ.

ದೇವತೆಗಳಿಗೂ ದೈತ್ಯರಿಗೂ ಉಂಟಾದ ಯುದ್ಧಗಳಲ್ಲೆಲ್ಲಾ ಭಕ್ತರ ರಕ್ಷಕನಾದ ಶ್ರೀವಿಷ್ಣುವು ದೇವತೆಗಳಲ್ಲಿ ಸನ್ನಿಹಿತನಾಗಿ ದೈತ್ಯರನ್ನು ಸಂಹರಿಸಿದ ವಿಚಾರವು ಸುಪ್ರಸಿದ್ಧವಾಗಿದೆ.

ಈ ಹರಿಭಕ್ತಿಲತೆಯಲ್ಲಿ ಶ್ರೀವಾದಿರಾಜರು ಋಗ್ವೇದದ 2, 3, 5, 8ನೇ ಮಂಡಲಗಳಲ್ಲಿನ ಮಂತ್ರಗಳನ್ನು ಉದಾಹರಿಸಿ ವಿವರಿಸಿರುವುದಲ್ಲದೆ, ಶ್ರೀಮದ್ಭಾಗವತದ 3, 4, 8, 9, 10ನೇ ಸ್ಕಂಧಗಳಲ್ಲಿನ ಕಥಾಭಾಗಗಳನ್ನೂ ಉದಾಹರಿಸಿರುತ್ತಾರೆ. ಇವುಗಳನ್ನೆಲ್ಲಾ ಕೂಲಂಕಷವಾಗಿ ಪರಿಶೀಲಿಸಿದಾಗ ಸಾತ್ವಿಕ ಜೀವರಿಗೆ ಶ್ರೀಹರಿಯ ಸರ್ವೋತ್ತಮತ್ವದ ವಿಷಯದಲ್ಲಿ ಸಂದೇಹ ಭ್ರಾಂತಿಗಳಿಗೆ ಲೇಶವೂ ಅವಕಾಶವಿಲ್ಲದೆ ತತ್ವನಿಶ್ಚಯವು ಉಂಟಾಗುವುದೆಂಬುದನ್ನು ನಿಸ್ಸಂಕೋಚವಾಗಿ ಹೇಳಬಹುದು.

ಕಡೆಯದಾಗಿ ಶ್ರೀವಾದಿರಾಜರು ಶ್ರೀಹರಿಯ ಸರ್ವೋತ್ತಮತ್ವವನ್ನು ಸರ್ವದಾ ಜಪಿಸು ಎಂದು ಆಡಿರುವ ನುಡಿಯು ಸಾತ್ವಿಕಜನತೆಗೆ ಸ್ಫೂರ್ತಿದಾಯಕವಾಗಿದೆ. ಜಗತ್ತಿನ ಆಗುಹೋಗುಗಳಲ್ಲಿ ಕಂಗಾಲಾದ ಮಾನವನ ಮನಸ್ಸಿಗೆ ಏನೋ ಒಂದು ಬಗೆಯಾದ ಶ್ರೀಹರಿಕೃಪೆಯು ನೆಮ್ಮದಿಗೆ ನಮ್ಮನ್ನು ಒಯ್ದಂತೆ ಭಾಸವಾಗುತ್ತದೆ. ಆ ಮಾತು ಈ ರೀತಿ ಇದೆ.

ಪ್ರಮಾಣಶತಸಿದ್ಧತ್ವಾತ್ ಪುನಃಪುನಃ ಇದಂ ವದ ।
ವಿಷ್ಣೋಃ ಸರ್ವೋತ್ತಮತ್ವಂ ಯತ್ತದೇವಾನುದಿನಂ ವದ ॥

ಅಭಿಪ್ರಾಯ :—ಶ್ರೀಹರಿಯ ಸರ್ವೋತ್ಕೃಷ್ಟತೆಯು ಅನಂತಪ್ರಮಾಣಗಳಿಂದ ಸಿದ್ಧವಾದ ವಿಷಯವಾಗಿದೆ. ಆದಕಾರಣ ಆ ಶ್ರೀಹರಿಯ ಕೃಪೆಗೆ ಪಾತ್ರನಾಗಬೇಕಾದರೆ ವೇದೈಕವೇದ್ಯನಾದ ಅವನ ದಯೆಗಾಗಿ ನಿರಂತರವೂ ಅವನ ಹಿರಿಮೆಯನ್ನು ಹೇಳು, ಚಿಂತಿಸು ಎಂಬುದೇ ದಿವ್ಯಸಂದೇಶ. ಇಂತಹ ಪ್ರಧಾನ ತತ್ವೋಪದೇಶವನ್ನಿತ್ತಿರುವ ಈ ಗ್ರಂಥಕಾರರ ಈ ಕವಿತಾಮೃತವು ಶಿವಾದಿಗಳ ಅನುಗ್ರಹ ಬಲದಿಂದಲೇ ಆಗಿದೆಯೆಂಬುದನ್ನು ಸ್ಮರಿಸಿದ್ದಾರೆ.

ಶಿವಾಜ್ಞಯಾ ವಾದಿರಾಜಃ ಶಿವಾದೀನಾಮನುಗ್ರಹಾತ್ ।
ಹರಿಭಕ್ತಿಲತಾಪುಷ್ಟ್ಯೈ ಚಕಾರ ಕವಿತಾಮಿಮಾಮ್ ॥

ಎಂದು ಅಂದಿದ್ದಾರೆ. ಶ್ರೀ ವಾದಿರಾಜರ ಭಕ್ತಿಜಲದಿಂದ ತುಂಬಿ ತುಳುಕಾಡು

ತ್ತಲಿರುವ ಅವರ ಹೃದಯವೆಂಬ ಭಾವಿಯಲ್ಲಿ ಮೊಳಕೆಯೊಡೆದ ಹರಿಭಕ್ತಿಲತೆಯು (ಬಳ್ಳಿಯು) ಶ್ರೀಕೃಷ್ಣಪರಮಾತ್ಮನ ಪಾದಾರವಿಂದವೆಂಬ ವೃಕ್ಷದ ಬುಡಕ್ಕೆ ಹಬ್ಬಿ ಬೆಳೆದು ಆ ಭಾವಿಯನ್ನು ಪ್ರಾರಂಭಿಸಿ ಅಚ್ಯುತನ ಶಿರಪರ್ಯಂತವಾಗಿ, ವೈಕುಂಠದ ವರೆವಿಗೆ ವ್ಯಾಪಿಸಿರುವುದಾಗಿರುವ ಅದರ ಹಣ್ಣನ್ನು (ಫಲವನ್ನು) ಸಜ್ಜನರು ಚೆನ್ನಾಗಿ ಸವಿಯಲಿ. ಆ ಬಳ್ಳಿಯ ಅವಲಂಬನದಿಂದ ಶ್ರೀಹರಿಯ ಪುರವಾದ ವೈಕುಂಠವನ್ನು ಏರಿ ಸೇರಲೆಂದು ಅನುಗ್ರಹದ ಸವಿಯ ನುಡಿಯನ್ನಾಡಿ ಹಾರೈಸಿರುತ್ತಾರೆ. ಇದರ ರಚನೆಯಿಂದ ಶ್ರೀಶನೂ, ವಾಣಿಯೂ, ಉಮಾಪತಿಯೂ, ಪತ್ನಿ ಸಹಿತರಾದ ದೇವತೆಗಳೂ ತೃಪ್ತರಾಗಿ ಅನುಗ್ರಹಿಸಲೆಂದು ನುಡಿದು ಕೋರಿರುತ್ತಾರೆ. ಮುಮುಕ್ಷುಗಳಾದ ಯೋಗ್ಯಜೀವರು ಮಾಡಬೇಕಾದ ಸಾಧನ ಸಂಪತ್ತುಗಳಲ್ಲಿ ಭಕ್ತಿಯೇ ಅತಿಮುಖ್ಯವಾದ ಸಾಧನವೆಂಬುದನ್ನು ಶ್ರೀ ಬಾದರಾಯಣರೂಪಿಯಾದ ಶ್ರೀಹರಿಯು ಬ್ರಹ್ಮಮೀಮಾಂಸಾಶಾಸ್ತ್ರದ ಸಾಧನಾಧ್ಯಾಯದ ಎರಡನೆಯ ಪಾದವಾದ ಭಕ್ತಿಪಾದದಲ್ಲಿ ಹನ್ನೊಂದನೆಯ ಅಧಿಕರಣವೆನಿಸಿದ ಅಂಬುವದಧಿಕರಣದಲ್ಲಿ ನಿರ್ಣಯಿಸಿದ್ದಾನೆ.

ದಾನತೀರ್ಥತಪೋಯಜ್ಞಪೂರ್ವಾಸ್ಸರ್ವೇऽಪಿ ಸರ್ವದಾ ।
ಅಂಗಾನಿ ಹರಿಸೇವಾಯಾಂ ಭಕ್ತಿಸ್ತ್ವೇಕಾ ವಿಮುಕ್ತಯೇ ॥

ಎಂಬ ನಿರ್ಣಯಾಚಾರ್ಯರ ವಚನವೂ ಸಹ ಇದೇ ಅಭಿಪ್ರಾಯದಿಂದ ಕೂಡಿದೆ.

ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಮೇವಂ ವಿಧೋऽರ್ಜುನ ।
ಜ್ಞಾತುಂ ದ್ರಷ್ಟುಂ ಚ ತತ್ವೇನ ಪ್ರವೇಷ್ಟುಂ ಚ ಪರಂತಪ ॥

ಎಂಬುದಾಗಿರುವ ಗೀತೆಯಲ್ಲಿನ ಭಗವಂತನ ವಚನವು ಎಲ್ಲ ಹಂತಗಳಲ್ಲೂ ಶ್ರೀಹರಿಭಕ್ತಿಯ ಅವಶ್ಯಕತೆಯನ್ನೇ ಎತ್ತಿ ತಿಳಿಸುತ್ತಲಿದೆ. ಶ್ರೀರಾಮಾವತಾರ ಕಾಲದಲ್ಲಿ, ಆ ಶ್ರೀರಾಮನ ಭಕ್ತರ ವೃಂದದಲ್ಲಿ ಏಕಾಂತ ಭಕ್ತೋತ್ತಮನಾದ ಶ್ರೀ ಆಂಜನೇಯನು ಕಟ್ಟಕಡೆಯದಾಗಿ ಶ್ರೀರಾಮಚಂದ್ರನನ್ನು ಪ್ರಾರ್ಥಿಸಿದುದೂ ಸಹ ಅಚಲವಾದ ಭಕ್ತಿಯನ್ನೇ ಹೊರತು ಮತ್ತೇನನ್ನೂ ಬೇಡಲಿಲ್ಲ. ಹನುಮಂತನ ಪ್ರಾರ್ಥನಾ ವಚನವು ಈ ಕೆಳಗೆ ಕಂಡಂತಿದೆ.

"ಪ್ರವರ್ಧತಾಂ ಭಕ್ತಿರಲಂ ಕ್ಷಣೇ ಕ್ಷಣೇ
ತ್ವಯೀಶ ಮೇ ಹ್ರಾಸವಿವರ್ಜಿತಾ ಸದಾ"

ಆದಕಾರಣ ಶ್ರೀಹರಿಭಕ್ತಿಯು ಮುಕ್ತಿಗೆ ಪ್ರಧಾನಸೋಪಾನ. ಇದು ಸಕಲ ಪ್ರಮಾಣ ಪ್ರಮಿತ. ಈ ದೃಷ್ಟಿಯಿಂದಲೇ ಪರಮಾತ್ಮನ ಶ್ರವಣ, ಮನನ, ಧ್ಯಾನಗಳೆಂಬ ಸಾಧನಗಳೆಲ್ಲವೂ ಭಕ್ತಿಪೂರ್ವಕವಾಗಿರಬೇಕೆಂಬ ಅಭಿಪ್ರಾಯದಿಂದ ಟೀಕಾಕಾರರು ಗೀತಾ ತಾತ್ಪರ್ಯ ಟೀಕೆಯಲ್ಲಿ ಭಕ್ತಿಪೂರ್ವಕ ಶ್ರವಣ, ಪಕ್ವಭಕ್ತಿ ಪೂರ್ವಕ ಮನನ, ಪರಿಪಕ್ವ ಭಕ್ತಿಪೂರ್ವಕ ಧ್ಯಾನ, ಅದರಿಂದ ತೃಪ್ತನಾದ ಬಿಂಬರೂಪಿಯಾದ ಪರಮಾತ್ಮನ ಸಾಕ್ಷಾತ್ಕಾರ, ಅನಂತರದಲ್ಲಿ ಅತಿಪರಿಪಕ್ವ ಭಕ್ತಿಪೂರ್ವಕವಾಗಿ ಆಗತಕ್ಕ ಪರಮಾತ್ಮನ ಅತ್ಯರ್ಥಪ್ರಸಾದ, ಅದರಿಂದ ಲಿಂಗ ಭಂಗಪೂರ್ವಕವಾಗಿ ಯಥಾಯೋಗ್ಯವಾಗಿ ಸ್ವಸ್ವರೂಪಾನಂದಾನುಭವವೆಂಬ ಮೋಕ್ಷಗಳ ಕ್ರಮವನ್ನು ವಿವರಿಸುತ್ತಾ, ಎಲ್ಲ ಘಟ್ಟಗಳಲ್ಲೂ ಶ್ರೀಹರಿಯ ಭಕ್ತಿಯ ಅತ್ಯಾವಶ್ಯಕತೆಯನ್ನು ಒತ್ತಿಹೇಳಿದ್ದಾರೆ. ಗೀತಾತಾತ್ಪರ್ಯ ಗ್ರಂಥದಲ್ಲಿ ಇಡೀ ಗೀತೆಯಿಂದ ಪ್ರತಿಪಾದ್ಯವಾದ ಪ್ರಮೇಯ ವಿಶೇಷವು ಏನೆಂಬುದನ್ನು ವಿವರಿಸು ವಾಗ ಶ್ರೀಮದಾಚಾರ್ಯರು "ಸ್ವವಿಹಿತವೃತ್ತ್ಯಾ ಭಕ್ತ್ಯಾ ಭಗವದಾರಾಧನಮೇವ ಪರಮೋ ಧರ್ಮಃ, ತದ್ವಿರುದ್ಧಃ ಸರ್ವೋಽಪ್ಯಧರ್ಮ ಇತಿ ಬೋಧಯತಿ ಭಗವಾನ್ ಬಾದರಾಯಣಃ" ಎಂದು ಭಕ್ತಿಯಿಂದ ಭಗವದಾರಾಧನೆಯೂ ಸಹ ಗೀತಾ ಪ್ರತಿಪಾದ್ಯವಾದ ವಿಷಯಗಳಲ್ಲಿ ಪ್ರಧಾನವಾಗಿರುವುದಾಗಿದೆಯೆಂಬುದನ್ನು ಸಂಗ್ರಹಿಸಿ ತಿಳಿಸಿದ್ದಾರೆ. ಆದಕಾರಣ ಮೋಕ್ಷಫಲ ಪರ್ಯಂತವಾದ ಸಕಲ ಸಿದ್ಧಿಗಳಿಗೂ ಶ್ರೀಹರಿಭಕ್ತಿಯು ಬೇಕೇ ಬೇಕು. ಶ್ರೀಹರಿಯು ಭಕ್ತಿಗೆ ಒಲಿಯ ತಕ್ಕವನೇ ಹೊರತು ಕೇವಲ ಪ್ರವಚನದಿಂದಾಗಲಿ, ಕೇವಲ ಮೇಧಾಶಕ್ತಿ ಯಿಂದಾಗಲಿ, ಕೇವಲ ಬಹುಶ್ರವಣದಿಂದಾಗಲಿ ಲಭ್ಯನಲ್ಲವೆಂಬುದನ್ನು ಕಾಠಕೋಪ-ನಿಷತ್ತಿನಲ್ಲಿ "ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ, ನ ಬಹುನಾ ಶ್ರುತೇನ" ಎಂಬಲ್ಲಿ ಹೇಳಿ ಯಾರನ್ನು ಭಕ್ತನನ್ನಾಗಿ ಬಿಂಬರೂಪಿಯಾದ ಪರಮಾತ್ಮನು ಸ್ವೀಕರಿಸುವನೋ ಅವನಿಗೆ ಮಾತ್ರ ತನ್ನ ದರ್ಶನವಿನ್ನಿತ್ತು, ಅವರ ಸ್ವರೂಪಾನಂದಾನುಭವವೆಂಬ ಮೋಕ್ಷವನ್ನು ಕರುಣಿಸುತ್ತಾನೆಂದು

"ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ"

ಎಂಬ ವಾಕ್ಯದಲ್ಲಿ ಯಮಧರ್ಮರಾಜನು ನಚಿಕೇತನನಿಗೆ ಉಪದೇಶವಿತ್ತಿದ್ದಾನೆ.

ಹೇಗೆ ಶ್ರೀಹರಿಭಕ್ತಿಯು ಮುಮುಕ್ಷುಯೋಗ್ಯ ಜೀವನಿಗೆ ಅತ್ಯಾವಶ್ಯಕವೋ

ಅದರಂತೆ ಯೋಗ್ಯತಾನುಗುಣವಾಗಿ ಗುರುಭಕ್ತಿಯೂ ಬೇಕೆಂಬ ಅಂಶವು ಶ್ವೇತಾಶ್ವತರೋಪನಿಷತ್ತಿನಲ್ಲಿ ಉಕ್ತವಾಗಿದೆ.

" ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ ।
ತಸ್ಯೈತೇಽಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ
ಪ್ರಕಾಶಂತೇ ಮಹಾತ್ಮನಃ " ಇತಿ ಶ್ವೇತಾಶ್ವತರೋಪನಿಷತ್ ॥

ಆದುದರಿಂದ ಶ್ರೀಹರಿಭಕ್ತಿಯಿಲ್ಲದ ಪೂಜೆ ವ್ಯರ್ಥ. ಭಕ್ತಿರಹಿತವಾದ ನಮನ ಕೇವಲ ಆಡಂಬರ. ಭಕ್ತಿಪೂರ್ವಕವಲ್ಲದ ದಾನವಾಗಲಿ, ಸ್ನಾನವಾಗಲಿ, ತಪಸ್ಸಾಗಲಿ, ಪ್ರವಚನವಾಗಲಿ, ಚಿಂತನವಾಗಲಿ, ಎಲ್ಲವೂ ನಿರರ್ಥಕ, ಹರಿಭಕ್ತಿಯಿಲ್ಲದ ಧ್ಯಾನ ಬಕಧ್ಯಾನ. ಎಂತಹ ಪ್ರೌಢವಾದ ಪ್ರವಚನಶೀಲನೇ ಆಗಲಿ, ಲೋಕೋತ್ತರವಾದ ಪ್ರತಿಭಾವಂತನೇ ಆಗಿರಲಿ, ಇಡೀ ಜನ್ಮಪರ್ಯಂತವಾಗಿ ಪದೇಪದೇ ಪುರಾಣಶ್ರವಣ ಮಾಡಿದವನೇ ಆಗಿರಲಿ, ಅವನಿಗೆ ಶ್ರೀಹರಿ ಗುರು ಭಕ್ತಿಯಿಲ್ಲದಿದ್ದರೆ, ಅವನ ಕೃತಿಗಳೆಲ್ಲಾ ಜಲಹೋಮಕ್ಕೆ ಸಮಾನ. ತನ್ನ ಸಮಾನರಿಲ್ಲವೆಂದು, ತಾನೇ ಸರ್ವನಿಯಾಮಕನೆಂದು ಮೆರೆಯುವ ದುರಹಂಕಾರಿಯಾದ ಮಾನವನನ್ನು ಸುರಾಪಾನಮಾಡಿದ ಮಹಾಪಾಪಿಯೆಂದು ಪ್ರಮಾಣವಾಕ್ಯಗಳು ನಿಂದಿಸುತ್ತಲಿವೆ.

ಸುರಾಃ ಹರೇಃ ಗುಣಾಃ ಪ್ರೋಕ್ತಾಃ ತೇ ಮೇ ಸ್ಯುರಿತಿ ಚಿಂತನಂ ।
ಸುರಾಪಾನಮಿತಿ ಪ್ರೋಕ್ತಂ ತನ್ನ ಕುರ್ಯಾತ್ ಕಥಂಚನ ॥ ಇತಿ

ಶ್ರೀ ಹರಿಗುರುಭಕ್ತಿಭರಿತರಾದ ಸಜ್ಜನರು ಎಂದೆಂದಿಗೂ ಹಿರಿಯರಿಗೆ, ಜ್ಞಾನಿಗಳಿಗೆ, ಗುರುಗಳಿಗೆ, ದೇವತೆಗಳಿಗೆ, ಪರಮಾತ್ಮನಿಗೆ ತಗ್ಗಿ ನಡೆಯುವವರೇ ಹೊರತು, ಹೀಹಿರಿಹಿಗ್ಗಿ ಇತರರನ್ನು ಹೀಯಾಳಿಸಿ ಗುರುಹಿರಿಯರ ಹಿಡಿಶಾಪಕ್ಕೆ ಗುರಿಯಾಗುವರಂತೆ ನರಕಭಾಗಿಗಳಾಗುವುದಿಲ್ಲ. ಆದರೆ ಅಂತಹ ಸಜ್ಜನರು ಈ ಘೋರ ಕಲಿಕಾಲದಲ್ಲಿ ಬಹಳ ವಿರಳ.

ಬ್ರಹ್ಮಮೀಮಾಂಸಾಶಾಸ್ತ್ರಾಧ್ಯಯನಕ್ಕೆ ತಕ್ಕ ಅಧಿಕಾರವೇನೆಂಬುದನ್ನು ಶಾಸ್ತ್ರಕಾರರು ನಿಶ್ಚಯಿಸುವಾಗ ಈ ಕೆಳಗೆ ಕಂಡಂತೆ ಪ್ರಮಾಣವಾಕ್ಯಗಳನ್ನು ಉದಾಹರಿಸಿದ್ದಾರೆ. ಮನುಷ್ಯೋತ್ತಮತ್ವ, ಋಜುತ್ವ, ಗಂಧರ್ವತ್ವ, ದೇವತ್ವಗಳೆಂಬ ಜಾತಿಕೃತವಾದ ಅಧಿಕಾರ ಪ್ರಭೇದಗಳನ್ನು ಹೇಳಿ ಅದರಲ್ಲಿ ಮನುಷ್ಯೋತ್ತಮತ್ವಕ್ಕೆ ಸಚ್ಛೂದ್ರನಲ್ಲಿ ಅತಿವ್ಯಾಪ್ತಿದೋಷವನ್ನು ತೋರಿಸಿ, ಗುಣಕೃತವಾದ

ಅಧಿಕಾರವನ್ನು ವಿವರಿಸುವಾಗ "ಭಕ್ತಿಮಾನ್ ಪರಮೋ ವಿಷ್ಣೌ ಯಸ್ತ್ವಧ್ಯಯನವಾನ್ ನರಃ ಇತ್ಯಾದಿಯಾಗಿ ಹೇಳಿದ್ದಾರೆ. ಆ ಗುಣಗಳಲ್ಲಿ ಪ್ರಪ್ರಥಮವಾದ ಗುಣವು "ಹರಿಭಕ್ತಿಪೂರ್ವಕವಾದ ಅಧ್ಯಯನವೆಂದು ಪರಿಗಣಿಸಿದ್ದಾರೆ. ಅಂದರೆ ಮುಖ್ಯವಾಗಿ ಹರಿಭಕ್ತಿಗೆ ಪ್ರಾಧಾನ್ಯವನ್ನೀಯಲಾಗಿದೆ.

ಶ್ರೀಹರಿಭಕ್ತಿಯು ಸಕಲ ಸಚ್ಚೇತನರಿಗೂ ಅತ್ಯಂತ ಆವಶ್ಯಕವಾದುದರಿಂದ ಅಂತಹ ಭಕ್ತಿಯನ್ನು (ಮಾಹಾತ್ಮ್ಯಜ್ಞಾನಪೂರ್ವಕವಾದ ಸುದೃಢ ಸ್ನೇಹವನ್ನು) ಉಂಟುಮಾಡುವ ಪ್ರಮಾಣಪುಂಜದಿಂದ ಸಿದ್ಧವಾದ ರಮಣೀಯವಾದ ಈ ಹರಿಭಕ್ತಿಲತಾ ಗ್ರಂಥವನ್ನು ರಚಿಸಿ ಸಾತ್ವಿಕ ಜನತೆಗೆ ಚಿರಸ್ಮರಣೀಯವಾದ ಅಮೋಘವಾದ ಉಪಕಾರವನ್ನು ಮಾಡಿರುವ ಸ್ವತಃ ತಾವು ಅಂತಹ ಭಕ್ತಿಯನ್ನು ಮಾಡಿ ಶ್ರೀಹಯಗ್ರೀವದೇವರ ಪರಮಾನುಗ್ರಹಕ್ಕೆ ಪಾತ್ರರಾದ ಶ್ರೀವಾದಿರಾಜ ಗುರುವರೇಣ್ಯರನ್ನು ಭೂಯೋಭೂಯಃ ಭಕ್ತಿಪೂರ್ವಕವಾಗಿ ನಮಿಸಿ ಈ ಮುನ್ನುಡಿಯನ್ನು ಮುಗಿಸುತ್ತಿದ್ದೇನೆ.

ಇತಿ

ಶ್ರೀಹಯಗ್ರೀವ ಪ್ರಸಾದಾಭಿಲಾಷೀ

**ಮಾಗಡಿ ರಂಗನಾಥಾಚಾರ್ಯ**

|| ಶ್ರೀಃ ||

ಶ್ರೀ ಲಕ್ಷ್ಮೀಹಯಗ್ರೀವಾಯ ನಮಃ

ಶ್ರೀ ಗುರುಭ್ಯೋ ನಮಃ

|| ಹರಿಃ ಓಂ ||

ಶ್ರೀಮದ್ಭಾವಿಸಮೀರಶ್ರೀವಾದಿರಾಜವಿರಚಿತಾ

# ಹರಿಭಕ್ತಿಲತಾ

**ರಮಾರಮಣಮಾನಮ್ಯ ಕ್ರಮಾನ್ನತ್ವಾ ಗುರೂನಪಿ ।**
**ಕರೋಮಿ ವಾದಿರಾಜೋಽಹಂ ಹರೇಸ್ಸುಗುಣದರ್ಪಣಮ್ || ೧ ||**

ಅರ್ಥ :—ರಮಾರಮಣಂ – ಶ್ರೀಲಕ್ಷ್ಮೀಪತಿಯನ್ನು, ಆನಮ್ಯ – ಭಕ್ತಿಶ್ರದ್ಧಾ ಪೂರ್ವಕವಾಗಿ ನಮಸ್ಕಾರಮಾಡಿ, ಅನಂತರದಲ್ಲಿ, ಕ್ರಮಾತ್ – ಕ್ರಮವಾಗಿ, ಗುರೂನಪಿ–ಗುರುಗಳನ್ನೂ ಕೂಡ, ನತ್ವಾ–ನಮಸ್ಕರಿಸಿ, ವಾದಿರಾಜೋಽಹಂ–ವಾದಿರಾಜನೆಂಬ ನಾನು, ಹರೇಃ–ಹರಿಯ, ಸುಗುಣದರ್ಪಣಂ–ಉತ್ತಮವಾದ ಗುಣಗಳಿಗೆ ಕನ್ನಡಿಯಂತಿರುವ, ಈ ಗ್ರಂಥವನ್ನು, ಕರೋಮಿ–ಮಾಡುತ್ತೇನೆ (ರಚಿಸುತ್ತೇನೆ).

ತಾತ್ಪರ್ಯ :—ಸರ್ವೋತ್ತಮನಾದ ರಮಾರಮಣನಾದ ಶ್ರೀಮನ್ನಾರಾಯಣ ನನ್ನು, ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕರಿಸಿ, ತಾರತಮ್ಯಕ್ರಮದಿಂದ ಗುರು ಗಳನ್ನೂ, ನಮಿಸಿ, ವಾದಿರಾಜನೆಂಬ ನಾನು ನಿರ್ಮಲವಾದ ಕನ್ನಡಿಯು ಪ್ರತಿಬಿಂಬ ವನ್ನು ಹೇಗೆ ತೋರಿಸುತ್ತದೆಯೋ, ಹಾಗೆ ಶ್ರೀಹರಿಯ ಅನಂತಕಲ್ಯಾಣ ಗುಣ ಗಳನ್ನು ಪ್ರತಿಪಾದಿಸುವ "ಹರಿಭಕ್ತಿಲತಾ" ಎಂಬ ಹೆಸರಿನ ಗ್ರಂಥವನ್ನು ರಚಿಸುತ್ತೇನೆ.

**ಹರಿಭಕ್ತಿಲತಾಮೇತಾಂ ತುರಂಗವದನಪ್ರಿಯಾಮ್ ।**
**ಕರೋತಿ ವಾದಿರಾಜೇಂದ್ರಃ ಸತಾಂ ಮುಕ್ತಿಫಲಾಪ್ತಯೇ || ೨ ||**

ತುರಂಗವದನಪ್ರಿಯಾಂ–ಶ್ರೀಹಯಗ್ರೀವದೇವರಿಗೆ ಪ್ರೀತಿಕರವಾದ, ಏತಾಂ– ಈ, ಹರಿಭಕ್ತಿಲತಾಂ – ಹರಿಭಕ್ತಿಲತೆಯನ್ನು, ಸತಾಂ – ಸಜ್ಜನರಿಗೆ, ಮುಕ್ತಿ ಫಲಾಪ್ತಯೇ – ಮೋಕ್ಷನೆಂಬ ಫಲವು ದೊರಕಲೆಂದು, ವಾದಿರಾಜೇಂದ್ರಃ – ವಾದಿರಾಜೇಂದ್ರನು, ಕರೋತಿ–ಮಾಡುತ್ತಾನೆ.

ಈ ಹರಿಭಕ್ತಿಲತೆಯು ಶ್ರೀಹಯವದನದೇವರಿಗೆ ಪ್ರೀತಿಯನ್ನುಂಟುಮಾಡುವುದಾಗಿದೆ. ಇದರಲ್ಲಿ ಉಕ್ತವಾಗಿರುವ ಗುಣಗಳಿಂದ ಪರಮಾತ್ಮನನ್ನು ಧ್ಯಾನ ಮಾಡಿದರೆ ಆ ಪರಮಾತ್ಮನು ಪ್ರಸನ್ನನಾಗಿ ಮೋಕ್ಷಫಲವನ್ನು ಕರುಣಿಸುತ್ತಾನೆ. ಇಂತಹ ಗ್ರಂಥವನ್ನು ವಾದಿರಾಜೇಂದ್ರನು ರಚಿಸುತ್ತಾನೆ.

**ಕರ್ಮಣಾ ವರ್ಧತೇ ಯೋ ನ ನ ಕನೀಯಾಂಶ್ಚ ಕರ್ಮಣಾ ।**
**ನಿರನಿಷ್ಟಃ ಸ ನಃ ಪಾತು ನಿರವದ್ಯೋ ಹಯಾನನಃ ॥ ೩ ॥**

ಯಃ-ಯಾರು, ಕರ್ಮಣಾ-ಕರ್ಮದಿಂದ, ನ ವರ್ಧತೇ-ವೃದ್ಧಿಯನ್ನು, ಹಿಂದಿನ ಸ್ಥಿತಿಗಿಂತಲೂ ಹೆಚ್ಚಾದ ಮೇಲ್ಮೆಯನ್ನು, ಹೊಂದುವುದಿಲ್ಲವೋ, ಕರ್ಮಣಾ-ಕರ್ಮದಿಂದ, ನ ಕನೀಯಾನ್-ಕೀಳುಭಾವವನ್ನು ಪಡೆಯತಕ್ಕವನೂ ಆಗುವುದಿಲ್ಲವೋ, ಸಃ-ಅಂತಹ, ನಿರನಿಷ್ಟಃ-ಅನಿಷ್ಟ ಇಲ್ಲದವನೂ, ನಿರವದ್ಯಃ-ದೋಷದೂರನೂ, ಆದ, ಹಯಾನನಃ - ಹಯವದನನು, ನಃ - ನಮ್ಮನ್ನು, ಪಾತು-ಕಾಪಾಡಲಿ.

ಕರ್ಮದಿಂದ ಯಾವನು ವೃದ್ಧಿಯನ್ನು ಹೊಂದುವುದಿಲ್ಲವೋ ಮತ್ತು ಕರ್ಮದಿಂದ ಯಾವನು ಕೀಳಾಗುವುದಿಲ್ಲವೋ, ಅಂತಹ ಅನಿಷ್ಟವಿಲ್ಲದವನೂ, ಸಕಲದೋಷದೂರನೂ ಆದ ಶ್ರೀಹಯವದನ ಪರಮಾತ್ಮನು ನಮ್ಮನ್ನು ಕಾಪಾಡಲಿ.

ಕರ್ಮಾಧಿಪತಿ, ಜೀವರ ಸಕಲಕರ್ಮ ಪ್ರೇರಕ ಪರಮಾತ್ಮ. ಕರ್ಮಪಾಶ ಬದ್ಧರು ಜೀವರು. ಜೀವರು ಸಂಸಾರದಶೆಯಲ್ಲಿ ಶುಭಕರ್ಮ ಮಾಡುವುದರಿಂದ ಉತ್ತಮ ಲೋಕಗಳಿಗೆ ಹೋಗುವರು. ಪಾಪಕರ್ಮ ಮಾಡುವುದರಿಂದ ಅಧೋಗತಿಯನ್ನು ಹೊಂದಿ ದುಃಖವನ್ನು ಪಡೆಯುವರು.

ಸಕಲ ಜೀವವಿಲಕ್ಷಣನಾದ ಪರಮಾತ್ಮನಾದರೋ ಸದಾ ಕರ್ಮಲೇಪವಿಲ್ಲದವನು. ನಿತ್ಯಮುಕ್ತನು. ರಮಾದೇವಿಯೂ ಸಹ ನಿತ್ಯಮುಕ್ತಳು. ಅವಳಿಗೂ ಕರ್ಮಲೇಪವಿರುವುದಿಲ್ಲ. ಆದರೆ ಪರಮಾತ್ಮನ ಅಧೀನಳು. ಪರಮಾತ್ಮನೊಬ್ಬನೇ ಸ್ವತಂತ್ರ, ಮಿಕ್ಕ ಎಲ್ಲರೂ ಅಸ್ವತಂತ್ರರು. ಮುಕ್ತ ಜೀವರೂ ಸಹ ಕರ್ಮಬದ್ಧರಲ್ಲ. ಆದರೆ ಅವರು ಮುಕ್ತರಾಗುವುದಕ್ಕೆ ಮುಂಚೆ ಕರ್ಮಬದ್ಧರಾಗಿದ್ದು ಪರಮಾತ್ಮನ ಅನುಗ್ರಹದಿಂದ ಸಕಲಬಂಧಗಳನ್ನೂ ಕಳೆದುಕೊಂಡವರಾಗಿ ಮೋಕ್ಷದಲ್ಲಿ ಎಲ್ಲ ಬಗೆಯಿಂದಲೂ ಪರಮಾತ್ಮನ ಅಧೀನರಾಗಿಯೇ ತಮ್ಮ ತಮ್ಮ ಸ್ವರೂಪಸುಖವನ್ನು ಅನುಭವಿಸುತ್ತಾರೆ.

ನಿತ್ಯಮುಕ್ತನಾದ ಪರಮಾತ್ಮನು 'ನಿರನಿಷ್ಟಃ' ಅಂದರೆ ಅವನಿಗೆ ಅನಿಷ್ಟವಾದುದು ಯಾವುದೂ ಇರುವುದಿಲ್ಲ. ಇಷ್ಟವಾದುದೆಲ್ಲವೂ ಇದೆ. ಪೂರ್ಣಾಗಣ್ಯಗುಣ, ಸರ್ವತಂತ್ರ ಸ್ವತಂತ್ರ, ಜಗಜ್ಜನ್ಮಾದಿ ಕಾರಣ, ವೇದಾದಿಸಚ್ಛಾಸ್ತ್ರಜ್ಞೇಯ, ಗಮ್ಯ, ಮುಕ್ತ ಅಮುಕ್ತ ಸಕಲಚೇತನ ನಿಯಾಮಕ, ರಮಾಬ್ರಹ್ಮಾದಿ ದೇವತಾವೃಂದ ವಂದ್ಯ, ನಿರವದ್ಯಃ=ಪಾರತಂತ್ರ್ಯ, ದುಃಖಿತ್ವಾದಿ ಸಕಲದೋಷ ರಹಿತನು ಎಂದು ಅಭಿಪ್ರಾಯ.

ಪರಮಾತ್ಮನು ಜೀವರಂತೆ ಕರ್ಮಬದ್ಧನಲ್ಲವೆಂಬಲ್ಲಿ ಪ್ರಮಾಣ.

"ಸ ವಾ ಏಷ ಮಹಾನ್ ಅಜ ಆತ್ಮಾ ಯೋಽಯಂ ವಿಜ್ಞಾನಮಯಃ, ಪ್ರಾಣೇಷು ಯ ಏಷೋಽನ್ತರ್ಹೃದಯೇ ಆಕಾಶಃ ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ, ಸರ್ವಸ್ಯಾಧಿಪತಿಃ, ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನೇಷಃ ಸರ್ವೇಶ್ವರಃ, ಏಷ ಭೂತಾಧಿಪತಿಃ, ಏಷ ಭೂತ-ಪಾಲಃ, ಏಷ ಸೇತುರ್ವಿಧರಣ ಏಷಾಂ ಲೋಕಾನಾಂ ಅಸಂಭೇದಾಯ" ಇತ್ಯಾದಿ (ಬೃಹದಾರಣ್ಯಕ, ೪-೪-೨೨).

ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।
ಉದಾಸೀನವದಾಸೀನಂ ಅಸಕ್ತಂ ತೇಷು ಕರ್ಮಸು ॥

(ಭ. ಗೀತಾ, ಅಧ್ಯಾಯ ೯. ಶ್ಲೋ. ೯)

ನಾನಾವಿಧವಾದ ಸೃಷ್ಟಿಯನ್ನು ಮಾಡುತ್ತಿರುವ ಪರಮಾತ್ಮನಿಗೆ ಜೀವನಂತೆ ಕರ್ಮಬಂಧವಿರುತ್ತದೆಯೋ ? ಎಂದರೆ ಇಲ್ಲವೆಂದು ಭಗವಂತನಾದ ಶ್ರೀಕೃಷ್ಣನು ಹೇಳುತ್ತಾನೆ. ಎಲೈ ಧನಂಜಯನೇ ! ಹೀಗೆ ನಾನು ನಾನಾವಿಧವಾಗಿ ಸೃಷ್ಟ್ಯಾದಿಗಳನ್ನು ಮಾಡುತ್ತಿದ್ದರೂ ಆ ಕರ್ಮಗಳು ನನ್ನನ್ನು ಬಂಧಿಸುವುದಿಲ್ಲ. ಏಕೆಂದರೆ—ನಾನು ವಸ್ತುತಃ ಉದಾಸೀನನಲ್ಲದಿದ್ದರೂ ಉದಾಸೀನ ಪುರುಷನಂತೆ ಇರುತ್ತೇನೆ. ಆ ಸೃಷ್ಟ್ಯಾದಿ ಕರ್ಮಗಳಿಂದ ಯಾವ ಪ್ರಯೋಜನಾಪೇಕ್ಷೆಯೂ ಇಲ್ಲದೆ ನಾನು ಅನಾಯಾಸವಾಗಿ ಪ್ರವೃತ್ತನಾಗಿರುತ್ತೇನೆ.

**ಅಭಿಪ್ರಾಯ**—ಪರಮಾತ್ಮನು ಸ್ವಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳನ್ನು ಮಾಡುವುದಿಲ್ಲ. ಆತನು ಆಪ್ತಸಮಸ್ತಕಾಮ, ಪೂರ್ಣಾನಂದ, ಆತನೇ ಸರ್ವತಂತ್ರ ಸ್ವತಂತ್ರ, ಸೃಷ್ಟ್ಯಾದಿ ವ್ಯಾಪಾರಗಳೆಲ್ಲವೂ ಆತನ ಲೀಲೆ. ಆದರಿಂದ

ಯಾವ ಆಯಾಸವೂ ಇಲ್ಲ. ಆದಕಾರಣ ಅವನು ನಿರ್ಲಿಪ್ತ. ಕರ್ಮಬಂಧ ಶೂನ್ಯ.

**ಇದಕ್ಕೆ ಪ್ರಮಾಣ—**

ಸೃಷ್ಟ್ಯಾದಿಕಂ ಹರಿರ್ನೈವ ಪ್ರಯೋಜನಮಪೇಕ್ಷ್ಯ ತು ।
ಕುರುತೇ ಕೇವಲಾನಂದಾತ್ ಯಥಾ ಮತ್ತಸ್ಯ ನರ್ತನಮ್ ॥

(ಇತಿ ನಾರಾಯಣ ಸಂಹಿತಾ)

ಪೂರ್ಣಾನಂದಸ್ಯ ತಸ್ಯೇಹ ಪ್ರಯೋಜನಮತಿಃ ಕುತಃ ।
ಮುಕ್ತಾ ಅಪಿ ಆಪ್ತಕಾಮಾಃ ಸ್ಯುಃ ಕಿಮುತಸ್ಯಾಖಿಲಾತ್ಮನಃ ॥ ಇತಿ ॥
ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ॥

(ಮಾ. ೨-೯)

**ಅಖರ್ವಸರ್ವದುರ್ವಾದಿ ಗರ್ವನಿರ್ವಾಪಣೋ ಹರಿಃ ।**
**ಕುರ್ವೀತೋರ್ವೀಂ ಶ್ರಿಯಂ ಶರ್ವಪೂರ್ವಗೀರ್ವಾಣರಾಣ್ಮಮ ॥ ೪ ॥**

ಅಖರ್ವಸರ್ವದುರ್ವಾದಿಗರ್ವನಿರ್ವಾಪಣಃ – ಸರ್ವದುರ್ವಾದಿಗಳ ಅಧಿಕವಾದ ಅಹಂಕಾರವನ್ನು ನಾಶಮಾಡುವವನಾದ, ಶರ್ವಪೂರ್ವಗೀರ್ವಾಣರಾಟ್– ರುದ್ರನೇ ಮೊದಲಾದ ದೇವತೆಗಳಿಗೆ ರಾಜನಾದ, ಹರಿಃ–ಹರಿಯು, ಮಮ–ನನಗೆ, ಉರ್ವೀಂ–ಉತ್ಕೃಷ್ಟವಾದ ಅಧಿಕವಾದ, ಶ್ರಿಯಂ–ಸಂಪತ್ತನ್ನು (ಜ್ಞಾನ, ಭಕ್ತಿ, ವೈರಾಗ್ಯಾದಿಭಾಗ್ಯಗಳನ್ನು), ಕುರ್ವೀತ–ಉಂಟುಮಾಡಲಿ.

ಸರ್ವದುರ್ವಾದಿಗಳ ಅತಿಯಾದ ಗರ್ವವನ್ನು ನಾಶಮಾಡುವ ಮತ್ತು ರುದ್ರನೇ ಮೊದಲಾದ ದೇವತೆಗಳಿಗೆ ಪ್ರಭುವಾದ ಶ್ರೀಹರಿಯು ನನಗೆ ಉತ್ತಮವಾದ ಐಶ್ವರ್ಯವನ್ನು ಮತ್ತು ಜ್ಞಾನಭಕ್ತಿ ವೈರಾಗ್ಯಾದಿ ಸಂಪತ್ತನ್ನೂ, ವಾಕ್ಚಾತುರ್ಯವೇ ಮೊದಲಾದವುಗಳನ್ನು ನೀಡಲಿ ಎಂದು ಶ್ರೀವಾದಿರಾಜರು ಪ್ರಾರ್ಥಿಸಿರುತ್ತಾರೆ.

ಇಲ್ಲಿ ಶ್ರೀಶಬ್ದಕ್ಕೆ ಅನೇಕಾರ್ಥಗಳಿವೆ. ಪ್ರಕೃತದಲ್ಲಿ ಶ್ರೀವಾದಿರಾಜರು ಸರ್ವದುರ್ವಾದಿಗಳ ವಾದಗಳನ್ನೆಲ್ಲಾ ನಿರಾಕರಿಸಲು ಉದ್ಯುಕ್ತರಾಗಿರುವುದರಿಂದ ಮತಿ ಅಥವಾ ವಾಕ್ಚಾತುರ್ಯ ಎಂದು ಅರ್ಥಮಾಡುವುದೂ ಉಚಿತವೆಂದು ತೋರುತ್ತದೆ.

" ಶ್ರೀರ್ವೇಷರಚನಾ ಶೋಭಾ ಭಾರತೀ ಸರಲದ್ರುಮೇ ।
ಲಕ್ಷ್ಮ್ಯಾಂ ತ್ರಿವರ್ಗಸಂಪತ್ತೌ ವೇಷೋಪಕರಣೇ ಮತೌ ॥"

(ಇತಿ ವಿಶ್ವಮೇದಿನ್ಯೌ)

ಮೊದಲನೆಯ ಶ್ಲೋಕದಲ್ಲಿ ವಾದಿರಾಜನೆಂಬ ನಾನು ಗ್ರಂಥವನ್ನು ಮಾಡುತ್ತೇನೆಂದು ಹೇಳಿ ಎರಡನೆಯ ಶ್ಲೋಕದಲ್ಲಿ " ವಾದಿರಾಜೇಂದ್ರನು ಹರಿಭಕ್ತಿ ಲತೆಯನ್ನು ಮಾಡುತ್ತಾನೆ" ಎಂದು ಹೇಳಿದ್ದಾರೆ. ಈ ರೀತಿ ಹೇಳುವುದರ ಅಭಿಪ್ರಾಯವು ಹೀಗಿರಬಹುದೆಂದು ಹೇಳಬಹುದು : ಸರ್ವೇಂದ್ರಿಯಗಳ ಸ್ವಾಮಿಯೂ ಮತ್ತು ಸರ್ವಮನೋವೃತ್ತಿ ಪ್ರೇರಕನೂ ಆದ ಹೃಷೀಕೇಶನು ಜೀವರ ಎಲ್ಲ ಕರ್ಮಗಳಿಗೂ ಪ್ರವರ್ತಕನಾಗಿರುತ್ತಾನೆ. ಜೀವನು ಅವನ ಪ್ರೇರಣೆಯಿಂದ ವರ್ತಿಸುತ್ತಾನಾದುದರಿಂದ ಪರಾಧೀನಕರ್ತಾ ಅಥವಾ ಅಸ್ವತಂತ್ರಕರ್ತಾ. ಆದ್ದರಿಂದಲೇ ಎಲ್ಲಾ ನಾಮಗಳೂ ತತ್ತದಂತರ್ಯಾಮಿಯಲ್ಲಿ ಮುಖ್ಯವಾಗಿರುವುದರಿಂದ, " ವಾದಿರಾಜೇಂದ್ರನೆಂದರೆ ವಾದಿರಾಜರ (ನನ್ನ) ಅಂತರ್ಯಾಮಿಯಾದ ಪರಮಾತ್ಮನು ನನ್ನ ದ್ವಾರಾ ಈ ಗ್ರಂಥವನ್ನು ಮಾಡುತ್ತಿದ್ದಾನೆ" ಎಂಬ ಅನುಸಂಧಾನದಿಂದ ಶ್ರೀವಾದಿರಾಜರು ಎರಡನೆಯ ಶ್ಲೋಕವನ್ನು ರಚಿಸಿರುತ್ತಾರೆ.

ಏಷ ಸರ್ವಭೂತಾಂತರಾತ್ಮಾ, ಅಪಹತಪಾಪ್ಮಾ, ದಿವ್ಯೋ ದೇವ ಏಕೋ ನಾರಾಯಣಃ (ಇತಿ ಶ್ರುತಿಃ)

" ಹರಿಭಕ್ತಿಲತಾಮೇತಾಂ ತುರಂಗವದನಪ್ರಿಯಾಂ" ಎಂದು ಹೇಳಿರುವುದರಲ್ಲಿ ಒಂದು ನಿಗೂಢವಾದ ಅಭಿಪ್ರಾಯವು ಇದೆ. " ಲತೆಯು (ಬಳ್ಳಿಯು) ಕುದುರೆಯ ಬಾಯಿಗೆ ಹಿತಕರವಾದುದಷ್ಟೆ" ಎಂಬ ಧ್ವನ್ಯರ್ಥವು ಭಾಸವಾಗುತ್ತದೆ. ಲೋಕದಲ್ಲಿ ಪ್ರಸಿದ್ಧ ಬಳ್ಳಿಗಳಲ್ಲಿ ಹಣ್ಣುಗಳು ಬಿಡುತ್ತವೆ. ಅವು ಬಹು ರುಚಿಕರವಾಗಿರುತ್ತವೆ. ತಿನ್ನಲು ಬಾಯಿಗೆ ತುಂಬಾ ಹಿತವಾಗಿರುವುವು. ಪ್ರಕೃತದಲ್ಲಿ ಹರಿಭಕ್ತಿ ಲತೆಯೆಂಬ ಈ ಗ್ರಂಥವು ಬಿಡುವ ಫಲವು ಯಾವುದು ಎಂದರೆ ಲೋಕವಿಲಕ್ಷಣವಾದ ಶಾಶ್ವತವಾದ ಮೋಕ್ಷವೆಂಬ ಫಲವನ್ನೇ ಕೊಡತಕ್ಕದ್ದಾಗಿರುವುದರಿಂದ " ಸತಾಂ ಮುಕ್ತಿ-ಫಲಾಪ್ತಯೇ" ಎಂದು ಈ ಬಳ್ಳಿಯ ಪ್ರಯೋಜನವನ್ನು ತಿಳಿಸಿರುತ್ತಾರೆ. ಅಂದರೆ ಈ ಬಳ್ಳಿಯ ಆಶ್ರಯದಿಂದ ಇದರಲ್ಲಿ ಉಕ್ತವಾಗಿರುವ ಪರಮಾತ್ಮನ ಗುಣಗಳನ್ನು ಅನುಸಂಧಾನಮಾಡಿ ಸರ್ವೋತ್ತಮ ದೇವತೆಯನ್ನು ಧ್ಯಾನಾದಿಗಳಿಂದ ತೃಪ್ತಿಪಡಿಸಿ,

ಆವನ ಪರಮಾನುಗ್ರಹಕ್ಕೆ ಪಾತ್ರನಾಗತಕ್ಕ ಭಕ್ತನಿಗೆ ಅವನವನ ಭಕ್ತಿಗೆ ತಕ್ಕಂತೆ ಮೋಕ್ಷಫಲವನ್ನು ಪರಮಾತ್ಮನು ಕರುಣಿಸುತ್ತಾನೆಂಬ ಅಭಿಪ್ರಾಯವು ಸೂಚಿತ ವಾಗಿದೆ.

ಇನ್ನುಮುಂದೆ ಐದನೆಯ ಶ್ಲೋಕದಿಂದ ಹದಿನೈದನೆಯ ಶ್ಲೋಕವು ಪೂರ್ತಿಯಾಗಿ "ಶಿವನೇ ಸರ್ವೋತ್ತಮದೇವತೆಯು" ಎಂದು ವಾದಿಸುವ ಶೈವರ ಮತವನ್ನು ನಿರಾಕರಿಸುತ್ತಾರೆ.

ಯೇ ಜಂಗಮಾಂಘ್ರಿತೋಯೇನ ಶಿವಲಿಂಗಂ ದಿನೇ ದಿನೇ ।
ಮಜ್ಜಯಂತಿ ತದುಚ್ಛಿಷ್ಟಂ ಅಭೋಜ್ಯಂ ಭೋಜಯಂತಿ ಚ ॥ ೫ ॥

ಶೈವಂ ಲಿಂಗಂ ಮೋಹನಾದೌ ಯೇ ಗಲೇ ಧಾರಯಂತಿ ಚ ।
ನ ಮಾನಯಂತಿ ಯೇ ಪುಣ್ಯಸ್ಥಲೇ ಪೂಜ್ಯತಯಾ ಸ್ಥಿತಮ್ ॥ ೬ ॥

ಶಿವಸ್ಯ ಲಿಂಗಮೇವಾಹೋ ನಾರ್ಚಯಂತ್ಯವಜಾನತೇ ।
ಇತ್ಥಂ ಶಿವಸ್ಯ ಶೈವಾಸ್ತೇ ನೀಚಾದಪಿ ಚ ನೀಚತಾಮ್ ॥ ೭ ॥

ಅಂಗೀಕೃತ್ಯ ಸ್ವರೀತ್ಯೈವ ಪುನಸ್ತಸ್ಯಾಖಿಲೇಶತಾಮ್ ।
ಕಥಂ ಬ್ರೂಯುಃ ಸಭಾಮಧ್ಯೇ ವದಂತು ಪ್ರತಿವಾದಿನಃ ॥ ೮ ॥

ಶಿವಸ್ಯೋಚ್ಛಿಷ್ಟದಾನೇನ ಕಿಂ ದೋಷೋಽಸ್ತಿ ನ ವಿದ್ಯತೇ ।
ಇತಿ ಪ್ರಶ್ನಸ್ಯೋತ್ತರಂ ತೇ ವದಂತು ಪ್ರತಿವಾದಿನಃ ॥ ೯ ॥

ದೋಷೋಽಸ್ತಿ ಚೇತ್ ಸ್ವಯಂ ದೋಷೀ
ನ ಚೇತ್ ಸ್ವೋಚ್ಛಿಷ್ಟದಾಯಕಃ ।
ಅನ್ಯೋಽಪಿ ದೋಷವಾನ್ ನ ಸ್ಯಾತ್
ವದಂತು ಪ್ರತಿವಾದಿನಃ ॥ ೧೦ ॥

ಯತ್ಸ್ಪೃಷ್ಟ್ವಾ ಕ್ಷಾಲಯೇದ್ಧಸ್ತಂ
ಯಚ್ಚ ಕಾಕಶುನೋಃ ಪ್ರಿಯಂ ।
ತದುಚ್ಛಿಷ್ಟಂ ಶಿವೋಽದ್ಯಾತ್ಕಿಂ
ವದಂತು ಪ್ರತಿವಾದಿನಃ ॥ ೧೧ ॥

ಅಶುದ್ಧಮಖಿಲಸ್ಯಾಪಿ ಯದಶುದ್ಧಂ ತದೀಶಿತುಃ ।
ಶೂದ್ರೋಚ್ಛಿಷ್ಟಂ ಅಥಂ ಶುದ್ಧಂ ವದಂತು ಪ್ರತಿವಾದಿನಃ ॥ ೧೨ ॥

ಗೃಹಾಣಿ ಪರಿತೋ ವಹ್ನಿಃ ದಹನ್ಯದಿ ನಿಜಂ ಗೃಹಮ್ ।
ನ ದಹೇತ್ ತರ್ಹಿ ಶೈವಾನಾಂ ಪ್ರಕ್ರಿಯಾ ಸ್ಯಾನ್ನ ಚೇನ್ನ ಚ ॥ ೧೩ ॥

ಅಮೇಧ್ಯಮನ್ಯಗೇಹೇಷು ಯದಾ ಶುದ್ಧಂ ನಿಜೇ ಗೃಹೇ ।
ಶುದ್ಧಂ ಸ್ಯಾತ್ತರ್ಹಿ ಶೈವಾನಾಂ ಪ್ರಕ್ರಿಯಾ ಸ್ಯಾನ್ನ ಚೇನ್ನ ಚ ॥ ೧೪ ॥

ಬಂದೀಕುರ್ಯಾತ್ ಇಯಂ ಸರ್ವಾನ್ ಪ್ರತಿಬಂದೀ ದುರತ್ಯಯಾ ।
ಅಸ್ಯಾಃ ಕಃ ಪರಿಹಾರಃ ಸ್ಯಾತ್ ವದಂತು ಪ್ರತಿವಾದಿನಃ ॥ ೧೫ ॥

ಈ ರೀತಿ ಶಿವ ಸರ್ವೋತ್ತಮತ್ವವಾದಿಗಳ ಪ್ರಾಯಶಃ ಆಗಿನ ಕಾಲದಲ್ಲಿದ್ದ ಆಚಾರಗಳ ದೋಷಗಳನ್ನು ವಿವರಿಸಿ ಹೇಳಿ ಮುಂದಿನ ಭಾಗದಲ್ಲಿ ಶ್ರೀ ಪಾರ್ವತೀ ಪತಿಯಾದ ರುದ್ರದೇವರು ಮಹಾ ವಿಷ್ಣುಭಕ್ತನೆಂಬುದನ್ನು ಋಗ್ವೇದದ ಋಕ್ಕಿನಿಂದಲೇ ಸಮರ್ಥಿಸುತ್ತಾರೆ

ಸ್ತುಹಿ ಶ್ರುತಂ ಗರ್ತಸದಂ ಯುವಾನಂ
ಮೃಗಂ ನ ಭೀಮಮುಪಹನ್ತುಮುಗ್ರಂ ।
ಮೃಳಾ ಜರಿತ್ರೇ ರುದ್ರ ಸ್ತವಾನೋಽ
ನ್ಯಂ ತೇ ಅಸ್ಮನ್ನಿ ವಪನ್ತು ಸೇನಾಃ ॥

(ಋಗ್ವೇದ ಮಂಡಲ ೨, ಸೂಕ್ತ ೭, ಮಂತ್ರ ೧೧.)

ಪದವಿಭಾಗ :—ಸ್ತುಹಿ, ಶ್ರುತಮ್, ಗರ್ತಸದಮ್, ಯುವಾನಮ್, ಮೃಗಂ, ನ, ಭೀಮಮ್, ಉಪಹನ್ತುಮ್, ಉಗ್ರಮ್, ಮೃಳ, ಜರಿತ್ರೇ, ರುದ್ರ, ಸ್ತುವಾನಃ, ಅನ್ಯಮ್, ತೇ, ಅಸ್ಮತ್, ನಿ, ವಪನ್ತು, ಸೇನಾಃ.

ಈ ಮಂತ್ರಕ್ಕೆ ಸಾಯಣಭಾಷ್ಯಕಾರರು ಓರ್ವಭಕ್ತನು ರುದ್ರನನ್ನು ಮಾತ್ರ ಸ್ತೋತ್ರ ಮಾಡಿರುವಂತೆ ವ್ಯಾಖ್ಯಾನಮಾಡಿರುತ್ತಾರೆ. ರುದ್ರಾಂತರ್ಯಾಮಿಯಾದ ನರಸಿಂಹನ ಪರವಾದ ಅರ್ಥವು ಅವರಿಗೆ ಹೊಳೆದಿಲ್ಲ. ಅವರು ಬರೆದಿಲ್ಲ.

(ಜರಿತ್ರೇ-ನಿನ್ನ ಸ್ತೋತ್ರವನ್ನು ಮಾಡುವ ನನಗೆ), ಹೇ ಮೃಡ-ಎಲೈ ರಕ್ಷಕನೇ, ರಕ್ಷಣ ಗುಣಸಂಪನ್ನನಾದ ಹೇ ರುದ್ರ-ಎಲೈ ರುದ್ರನೇ, ಗರ್ತಸದಂ-ನಿನ್ನ ಹೃದಯವೆಂಬ ಗುಹೆಯ ಮಧ್ಯದಲ್ಲಿ, ಸದಾ ಸಾಕ್ಷಿಯಾಗಿ ನಿಯಾಮಕನಾಗಿ ನೆಲಸಿರುವ, ಶ್ರುತಂ-ಪ್ರಸಿದ್ಧನಾದ, ಯುವಾನಂ-ಹದಿನಾರು ವರುಷ ವಯಸ್ಸಿನ (ಸದಾ ಮುದಿತನವಿಲ್ಲದವನಾದ), ಮೃಗಂ ನ-ಸಿಂಹದಂತೆ, ಭೀಮಂ-ದ್ವೇಷಿ ಜನರಿಗೆ ಭಯಂಕರನಾದ, ಉಪ-ಸ್ವಭಕ್ತನಾದ ಪ್ರಹ್ಲಾದನಿಗೆ ಉಪದ್ರವವನ್ನು ಉಂಟುಮಾಡುವ ರಿಪುವಾದ ಹಿರಣ್ಯಕಶಿಪುವನ್ನು, ಹನ್ತುಂ-ಸಂಹಾರಮಾಡುವ ಸ್ವಭಾವವುಳ್ಳ, ಮತ್ತು ತನ್ನನ್ನು ಆಶ್ರಯಿಸಿದ ಜನರ ವೈರಿಗಳ ವಿಷಯದಲ್ಲಿ, ಉಗ್ರಂ-ಕ್ರೂರನಾದ, ಮಹಾತ್ಮನಾದ ನರಹರಿಯನ್ನು, ಸದಾ, ಸ್ತುಹಿ-ಯಾವಾಗಲೂ ಸ್ತೋತ್ರಮಾಡು, ಎಂದೆಂದಿಗೂ ಅವನನ್ನು ಮರೆಯಬೇಡ. ಜರಿತ್ರೇ-ನಿನ್ನನ್ನು ಸ್ತೋತ್ರಮಾಡುವ, ನನ್ನನ್ನು ಮೃಳ-ಮೃಡಯ-ಸುಖಿಯನ್ನಾಗಿ ಮಾಡು, ಸುಖಿಸು. ಸೇನಾ-ನಿನ್ನ ಪರಿವಾರವಾದ ಭೂತಗಣಗಳು, ಅಸ್ಮದನ್ಯಂ-ನಮ್ಮ ಶತ್ರುಗಳನ್ನು, ನಿವಪಂತು - ಸಂಹರಿಸಲಿ. ಅಥವಾ-ಹೇ ರುದ್ರ - ಎಲೈ ರುದ್ರನೇ, ನೀನು, ಶ್ರುತಂ-ವೇದವಾಣಿಯಲ್ಲಿ ಸುಪ್ರಸಿದ್ಧನಾದ, ಗರ್ತಸದಂ-ನಿನ್ನ ಹೃದಯಗುಹಾದಲ್ಲಿ ವಾಸಮಾಡುವ, ಯುವಾನಂ-ಸದಾ ಹದಿನಾರುವರ್ಷದವನಂತೆ ಯೌವ್ವನವನ್ನುಳ್ಳ, ಮೃಗಂ ನ ಭೀಮಂ-ಸಿಂಹದಂತೆ ಭಯಂಕರನಾದ, ಉಗ್ರಂ-ಉಗ್ರಾಣಾಂ ಉಗ್ರರಾದ, ದೈತ್ಯರನ್ನೂ, ಉಪಹಂತುಂ-ಉಪಹಂತಾರಂ-ಸಂಹರಿಸತಕ್ಕ, ನರಹರಿಯನ್ನು, ಸ್ತುತಿಃ-ಸ್ತೋತ್ರಮಾಡು ಅಥವಾ ಸ್ತೋತ್ರ ಮಾಡುತ್ತೀಯೇ. ಸ್ತುವಾನಃ-ಹೀಗೆ ಯಾವಾಗಲೂ ಹೃದಯಗುಹೆಯಲ್ಲಿ ನಿಯಾಮಕನಾಗಿರುವ ನರಹರಿಯನ್ನು ಸದಾ ಸ್ತೋತ್ರಮಾಡುವ ನೀನು, ಜರಿತ್ರೇ-ನಿನ್ನನ್ನು ಸ್ತೋತ್ರಮಾಡುವ ನನ್ನನ್ನು, ಮೃಳ-ಮೃಡಯ-ಸುಖಿಸು, ಸೇನಾಃ-ನಿನ್ನ ಪರಿವಾರವಾದ ಭೂತಗಣಗಳು, ಅಸ್ಮದನ್ಯಂ-ನಮ್ಮ ಶತ್ರುಗಳನ್ನೂ, ನಿವಪಂತು-ಸಂಹರಿಸಲಿ.

**ರುದ್ರಸೂಕ್ತಗತಾ ಸೇಯಂ ವಾಣೀ ರುದ್ರಾಶ್ರಯಂ ಹರಿಮ್ ।**
**ಯದ್ವಕ್ತಿ ತತ್ಸಮಃ ಕಃ ಸ್ಯಾತ್ ವದಂತು ಪ್ರತಿವಾದಿನಃ ॥೧೭॥**

ಋಗ್ವೇದದ ಎರಡನೇ ಮಂಡಲದ ಏಳನೇ ಸೂಕ್ತದ ಹದಿನೆಂಟನೆಯ ಈ ಮಂತ್ರವು ರುದ್ರಸೂಕ್ತದಲ್ಲಿದೆ. ಈ ವಾಣಿಯು ರುದ್ರನಿಂದ ಆಶ್ರಯಿಸಲ್ಪಟ್ಟ ರುದ್ರಾಂತರ್ಯಾಮಿಯಾದ ನರಹರಿಯನ್ನು ಹೇಳುತ್ತಿದೆ ಆದಕಾರಣ ರುದ್ರನಿಗೂ ಆಶ್ರಯನಾದ ಶ್ರೀಮನ್ನೃಸಿಂಹನಿಗೆ ಸಮರಾರು ? ಪ್ರತಿವಾದಿಗಳು ಹೇಳಲಿ.

**ಜರಿತ್ರೆ ತೇ ಸ್ತುತಿಂ ಕರ್ತ್ರೇ ಮಹ್ಯಂ ಹೇ ಮೃಡ ರಕ್ಷಕ ।**
**ಜರಿತಾ ಗರಿತೇತ್ಯುಕ್ತೇಃ ಮೃಡ ರಕ್ಷಣ ಇತ್ಯಪಿ ॥ ೧೮ ॥**

**ಧಾತೋಃ ಖ್ಯಾತೋಽಯಮರ್ಥೋ ಮೇ ನ ಕಪೋಲೇನ ಕಲ್ಪಿತಃ ।**

ಸ್ತುಹಿ ಶ್ರುತಂ ಎಂಬ ಮಂತ್ರದಲ್ಲಿ ಜರಿತ್ರೇ ಎಂಬುದಕ್ಕೆ ಸ್ತುತಿಂ ಕರ್ತ್ರೇ ಎಂದು ಅರ್ಥಮಾಡಿರುವುದೂ, ಮೃಲ (ಡ) ಎಂಬ ಪದಕ್ಕೆ ರಕ್ಷಕ ಎಂಬ ಅರ್ಥ ವನ್ನು ಹೇಳಿರುವುದೂ ಸಹ ಇದು ನಮ್ಮ ಸ್ವಕಪೋಲಕಲ್ಪಿತವಾದ ಅರ್ಥಗಳಲ್ಲ. ಜರಿತಾ, ಗರಿತಾ, ಮೃಡರಕ್ಷಣ, ಎಂಬುದಾಗಿ ಧಾತುವಿನ ಅರ್ಥಗಳು ಸುಪ್ರಸಿದ್ಧ ಗಳೇ ಆಗಿವೆ. ಮೃಳ ಎಂಬುದಕ್ಕೆ ಸುಖಿಸು ಎಂದು ಅರ್ಥವು ಇರುವಂತೆ ರಕ್ಷಣಾರ್ಥ ದಲ್ಲಿಯೂ ಉಂಟು ಮತ್ತು ಜರಿತಾ, ಗರಿತಾ ಎಂಬ ಪದವು ಸ್ತೋತ್ರಮಾಡುವ ವನೂ ಎಂಬ ಅರ್ಥದಲ್ಲೂ ಉಂಟು. (ಸಾಯಣಭಾಷ್ಯದಲ್ಲಿಯೂ ಸಹ ಜರಿತ್ರೇ-ಸ್ತೋತ್ರೇ ಎಂಬ ಅರ್ಥವನ್ನೂ, ಮೃಳ-ಸುಖಯ ಎಂಬುದಾಗಿ ಅರ್ಥವನ್ನೂ ಕಾಣಬಹುದಾಗಿದೆ.)

(ಮೃಗಂ ನ ಭೀಮಂ-ಸಿಂಹಮಿವ ಭಯಂಕರಂ ಎಂದೂ ಸಾಯಣ ಭಾಷ್ಯ ದಲ್ಲಿಯೂ ಅರ್ಥವಿದೆ.)

ಆ ವೇದವಾಕ್ಯದಲ್ಲಿರುವ ಮೃಗಂ ನ ಎಂಬಲ್ಲಿನ ನ-ಎಂಬ ಅವ್ಯಯಕ್ಕೆ ಇವ ಎಂದು ಸಾದೃಶ್ಯಾರ್ಥವೂ (ಉಪಮಾರ್ಥವೂ) ಉಂಟು. ಆದಕಾರಣ ಮೃಗಂ ನ-ಎಂಬುದಕ್ಕೆ ಮೃಗಮಿವ-ಸಿಂಹದಂತೆ ಎಂದು ಅರ್ಥ ಮಾಡಿದೆ.

ಈದೃಗ್ಗುಣಾನ್ವಿತೋಽಪಿ ತ್ವಂ ರುದ್ರ ಗರ್ತಸದಂ ತವ ॥ ೧೯ ॥
ಹೃದಯಾಖ್ಯಗುಹಾಮಧ್ಯೇ ಸದಾ ಸಾಕ್ಷಿತಯಾ ಸ್ಥಿತಮ್ ।
ಯುವಾನಂ ಷೋಡಶವಯಸ್ಕಂ ಚ ನಿತ್ಯಂ ಜರೋಜ್ಝಿತಮ್
॥ ೨೦ ॥

ಮೃಗಂ ನ ಸಿಂಹವದ್ಭೀಮಂ ದ್ವಿಷಜ್ಜನಭಯಂಕರಮ್ ।
ಉಪಮಾರ್ಥಂ ಚ ನೇತ್ಯೇತತ್ಪದಂ ಆಹುರ್ಹಿ ವೈದಿಕಾಃ ॥೨೧॥
ಸ್ವಭಕ್ತೋಪದ್ರವಕರಂ ಹಿರಣ್ಯಕಶಿಪುಂ ರಿಪುಮ್ ।
ಹನ್ತುಂ ಹನನಶೀಲಂ ಚಾಪ್ಯುಗ್ರಂ ಸ್ವಾಶ್ರಿತವೈರಿಣಾಮ್ ॥೨೨॥
ಪ್ರಾಚಾರ್ಯ ಇತ್ಯಾದಿ ವಾಕ್ಯೇಷು ಉಪಸರ್ಗೋಽಪಿ
ಕೇವಲಮ್ ।
ಸ್ವಯೋಗ್ಯಧಾತೋರರ್ಥಂ ಚ ವದೇದಿತ್ಯಾಹ ಪಾಣಿನಿಃ ॥೨೩॥
ತದುಪೇತ್ಯುಪಸರ್ಗೋಽಪಿ ಹ್ಯುಪದ್ರವಕೃತಂ ವದೇತ್ ।
ಈದೃಶಂ ನರಸಿಂಹಾಖ್ಯಂ ವೇಷರೂಪಧರಸ್ಯ ತೇ ॥ ೨೪ ॥
ರಕ್ಷಣಾದಕ್ಷತಬಲಂ ಗೌರೀಸೌಭಾಗ್ಯದಾಯಕಮ್ ।
ಸದಾ ಸ್ತುಹಿ ಮಹಾತ್ಮಾನಂ ನ ವಿಸ್ಮರ ಕದಾಚನ ॥ ೨೫ ॥

ಋಗ್ವೇದ ಮಂತ್ರದಲ್ಲಿನ ಮೃಗಂ ನ ಭೀಮಂ—ಎಂಬುದಕ್ಕೆ ಸಿಂಹವದ್ಭೀಮಂ—ಸಿಂಹದಂತೆ ಭಯಂಕರನು ಎಂದು ಅರ್ಥ. ಅಂದರೆ ಶತ್ರುಜನರಿಗೆ ಭಯಂಕರನು ಎಂದು ಅಭಿಪ್ರಾಯ. " ನ " ಎಂಬುದಕ್ಕೆ " ಇವ " ಅಂತೆ ಎಂಬ ಉಪಮಾರ್ಥವು ಹೇಗೆಂದರೆ 'ನ' ಎಂಬುದಕ್ಕೆ ವೈದಿಕರೇ ಉಪಮಾರ್ಥವನ್ನು ಹೇಳಿದ್ದಾರೆ ಎಂದು ಅಭಿಪ್ರಾಯ. ಆ ಮಂತ್ರದಲ್ಲಿ ಉಪಹನ್ತುಂ ಎಂದಿದೆ. ಅಲ್ಲಿರುವ ಉಗ್ರಂ ಎಂಬುದಕ್ಕೆ ಉಗ್ರಾಣಾಂ—ಕ್ರೂರರಾದ ದೈತ್ಯರನ್ನು, ಉಪಹಂತುಂ ಸಂಹರಿಸತಕ್ಕವನು ಎಂಬ ಅರ್ಥವು ಇರುವಂತೆ ಮತ್ತೊಂದು ಅರ್ಥವನ್ನೂ ಇಲ್ಲಿ ಉಪಸರ್ಗವಾದ ಉಪ ಎಂಬುದಕ್ಕೆ ತೋರಿಸುತ್ತಾರೆ. ಉಪ = ಉಪದ್ರವಕರ—ಸ್ವಭಕ್ತನಿಗೆ, ಉಪದ್ರವಕರ—ತನ್ನ ಭಕ್ತನಾದ ಪ್ರಹ್ಲಾದರಾಜನಿಗೆ ಉಪದ್ರವವನ್ನು ಉಂಟುಮಾಡಿದ ಹಿರಣ್ಯಕಶಿಪು ಎಂಬ ವೈರಿಯನ್ನು, ಹನ್ತುಂ—ಕೊಲ್ಲತಕ್ಕ ಸ್ವಭಾವದವನಾದ ಎಂಬ ಅರ್ಥವನ್ನುಳ್ಳ ಹನನಶೀಲಂ ಎಂಬ ಪದವನ್ನು ತೋರಿಸಿರುತ್ತಾರೆ.

ಉಗ್ರಂ–ತನ್ನನ್ನು ಆಶ್ರಯಿಸಿರತಕ್ಕ ಭಕ್ತವರ್ಗದ ವೈರಿಗಳಿಗೆ, ಉಗ್ರಂ–ಭಯಂಕರನು ಎಂದು ಅರ್ಥೈಸಲಾಗಿದೆ. ಇಲ್ಲಿ ಉಪ ಎಂಬುದಕ್ಕೆ ಉಪದ್ರವಕರ ಎಂಬ ಅರ್ಥವನ್ನು ಹೇಳಿದುದಕ್ಕೆ ಪಾಣಿನ್ಯಾಚಾರ್ಯರ ಸಮ್ಮತಿಯನ್ನು ದೃಷ್ಟಾಂತ ಮೂಲಕವಾಗಿ ತೋರಿಸುತ್ತಿದ್ದಾರೆ. ಒಟ್ಟನಲ್ಲಿ ಈ ಋಕ್ಕಿನ ಅಭಿಪ್ರಾಯವು ಹೀಗಿದೆ.

ರುದ್ರನನ್ನು ಕುರಿತು ಭಕ್ತನು ಹೀಗೆ ಪ್ರಾರ್ಥಿಸಿದ್ದಾನೆ.

ಎಲೈ ರುದ್ರನೇ! ನಿನ್ನನ್ನು ಸ್ತೋತ್ರಮಾಡುವವರಿಗೆ ನೀನು ರಕ್ಷಕನಾಗಿ ರುತ್ತೀಯೋ ಹೀಗೆ ಭಕ್ತರಕ್ಷಕನಾದ ಓ ರುದ್ರನೇ! ನೀನು ನಿನ್ನ ಹೃದಯ ಗುಹಾದಲ್ಲಿ ಸದಾ ನೆಲಸಿರುವ ನರಹರಿಯನ್ನ ನಿರಂತರ ಸ್ತೋತ್ರ ಮಾಡು. ಅವನ ಮಹಿಮೆಯನ್ನು ಎಷ್ಟೆಂದು ಹೇಳಲಿ! ಆ ನರಹರಿಯು ಸರ್ವವೇದ ಪುರಾಣಗಳಲ್ಲಿ ಸರ್ವೋತ್ತಮನೆಂದು ಸುಪ್ರಸಿದ್ಧನಾಗಿದ್ದಾನೆ. ಮುದಿತನವಿಲ್ಲದೆ ನಿತ್ಯಯೌವನ ವುಳ್ಳವನು. ತನ್ನ ಭಕ್ತನಾದ ಪ್ರಹ್ಲಾದರಾಜನಿಗೆ ಉಪದ್ರವಕಾರಕನಾದ ಹಿರಣ್ಯಕಶಿಪುವನ್ನು ಸಂಹರಿಸಿದವನು. ಶತ್ರುಗಳಿಗೆ ಸಿಂಹದಂತೆ ಭಯಂಕರನು. ಇಂತಹ ಮಹಾಮಹಿಮೋಪೇತನಾದ ಶ್ರೀಮನ್ನೃಸಿಂಹನನ್ನು ಸದಾ ಧ್ಯಾನಿಸುವ ವೈಷ್ಣವಾಗ್ರೇಸರನಾದ ನಿನ್ನನ್ನು ನಾನು ಸ್ತೋತ್ರ ಮಾಡುತ್ತೇನೆ. ಇಂತಹ ನಿನ್ನ ಭಕ್ತನಾದ ನನಗೆ ಶತ್ರುಗಳಾದವರನ್ನು, ಜನಗಳಿಗೆ ಭಯಂಕರರಾದ ನಿನ್ನ ಪರಿವಾರಗಳಾದ ಭೂತಪ್ರೇತ ಪಿಶಾಚಗಳು ಸಂಹರಿಸಲಿ. ಅಥವಾ ನೀನು ನರಹರಿ ಯನ್ನು ಸ್ತುತಿಸುತ್ತಿರುವೆ. ನಿನ್ನ ಶಿಕ್ಷೆಯಿಂದ ಯಾವ ವೈಷ್ಣವನು ನರಸಿಂಹನನ್ನು ಸ್ತೋತ್ರ ಮಾಡುತ್ತಾನೆಯೋ ಅವನಿಂದ ಅನ್ಯರಾದ ಪರಮಾತ್ಮನ ವೈಭವವನ್ನು ಅಲ್ಲಗಳೆಯುವ ಐಕ್ಯವಾದಿಗಳಾದ ಮಾಯಾವಾದಿಗಳೆಂದು ಕರೆಯಲ್ಪಡತಕ್ಕ ಅವೈಷ್ಣವರನ್ನು ಲೋಕಭಯಂಕರವಾದ ನಿನ್ನ ಸೇನೆಯು ಸಂಹರಿಸಲಿ. ವೈಷ್ಣವರ ಗೋಜಿಗೆ ಹೋಗದೇ ಇರಲಿ. ಎಂದು ವೇದವಾಣಿಯು ರುದ್ರನಿಗೂ ಸ್ವಾಮಿಯಾದ ಶ್ರೀ ನರಹರಿಯ ಹಿರಿಮೆಯನ್ನೇ ತಿಳಿಸುತ್ತಲಿದೆ. ಇದಕ್ಕೆ ಉಪಪಾದಕವಾದ ರೀತಿಯಲ್ಲಿಯೇ ಶ್ರೀವಾದಿರಾಜರ ವ್ಯಾಖ್ಯಾನವು ಪ್ರವೃತ್ತವಾಗಿದೆ.

ಪ್ರಾಚಾರ್ಯ ಎಂಬಲ್ಲಿ 'ಪ್ರ' ಎಂಬ ಉಪಸರ್ಗವು (ಕೇವಲ 'ಪ್ರ' ಎಂಬ ಉಪಸರ್ಗವು) ತನ್ನ ಮುಂದಿನ ಧಾತುವಿಗೆ ಅನುಗುಣವಾದ ಅರ್ಥವನ್ನು ಹೇಳುತ್ತದೆ ಯೆಂದು ಪಾಣಿನ್ಯಾಚಾರ್ಯರೇ ಒಪ್ಪಿರುವುದರಿಂದ ಈ ವೇದವಾಕ್ಯದಲ್ಲಿನ ಉಪ

ಎಂಬ ಉಪಸರ್ಗಕ್ಕೆ ಉಪ-ಉಪದ್ರವಕರ ಎಂದು ಅರ್ಥಮಾಡಿರುವುದೂ ಸಹ ಯುಕ್ತವಾಗಿದೆ ಎಂದು ಅಭಿಪ್ರಾಯ. ಇಂತಹ ಗರ್ತಸದಂ-ಹೃದಯಗುಹೆಯಲ್ಲಿ ಅಂತರ್ಯಾಮಿಯಾಗಿ ವಾಸಮಾಡುವವನಾದ ಸದಾ ಸಾಕ್ಷಿಭೂತನಾದ, ಎಂದು ಅರ್ಥ.

(ಸಾಯಣಭಾಷ್ಯಕಾರರು ಗರ್ತೋ–ರಥಃ, ತತ್ರ ಸೀದಂತಂ–ಎಂದು ಅರ್ಥ ಮಾಡಿದ್ದಾರೆ.) ಆದರೆ ರುದ್ರದೇವರ ಅಂತರ್ಯಾಮಿಯಾಗಿರುವ ಅವರ ಹೃದಯ ಗುಹಾಗತನಾದ ಎಂಬ ಅರ್ಥವೇ ಪ್ರಕೃತಕ್ಕೆ ಹೊಂದಿಕೆಯಾಗಿದೆಯೆಂದು ಅರ್ಥ ವನ್ನು ಹೇಳಿರುವುದು ಯೋಗ್ಯವಾಗಿದೆ.

ಇಂತಹ ನರಸಿಂಹಾಖ್ಯನಾದ ಮಹಾತ್ಮನಾದ ಪರಮಾತ್ಮನನ್ನು ಸದಾ–ಯಾವಾಗಲೂ, ಸ್ತುಹಿ–ಸ್ತೋತ್ರಮಾಡು, ಕದಾಚನ–ಯಾವಾಗಲೂ, ನ ವಿಸ್ಮರ–ಮರೆಯಬೇಡ ಎಂಬ ಅರ್ಥದ ಜೊತೆಗೆ ಹಿಂದೆ ರುದ್ರದೇವರಿಗೆ ಬಂದಿದ್ದ ವಿಪತ್ತನ್ನು ನರಸಿಂಹದೇವರು ಪರಿಹಾರಮಾಡಿ ಗೌರೀಸೌಭಾಗ್ಯವನ್ನು ಉಳಿಸಿದ ಕಥಾ ಭಾಗ ವನ್ನು ಇಲ್ಲಿ ಸ್ಮರಿಸಿರುತ್ತಾರೆ.

"ಮೇಷರೂಪಧರಸ್ಯ ತೇ ರಕ್ಷಣಾದಕ್ಷತಬಲಂ ಗೌರೀಸೌಭಾಗ್ಯದಾಯಕಂ" ಎಂಬ ಭಾಗದಿಂದ ಸೂಚಿತವಾದ ಕಥಾ ಭಾಗವು ಈ ರೀತಿ ಇದೆ.

ಹಿಂದೊಮ್ಮೆ ಯೋಗಿನೀ ಎಂಬ ದುಷ್ಟಶಕ್ತಿಯು ರುದ್ರದೇವರನ್ನು ನುಂಗಲು ಬಂದಾಗ ರುದ್ರನು ತನ್ನ ನಿಜವಾದ ವೇಷವನ್ನು ಮರೆಮಾಚಿ ಮೇಷರೂಪಧಾರಿ ಯಾಗಿದ್ದಾಗ, ಭಕ್ತ ಸಂರಕ್ಷಕನಾದ ನರಹರಿಯು ತನ್ನ ಭಕ್ತನಾದ ರುದ್ರನನ್ನು ಪ್ರಬಲವಾದ ಆ ಶಕ್ತಿಯ ಭಯದಿಂದ ರಕ್ಷಿಸಲು ಆ ಶಕ್ತಿಯನ್ನು ಸಂಹರಿಸಿ ರುದ್ರನನ್ನು ರಕ್ಷಿಸಿ ಗೌರೀಸೌಭಾಗ್ಯವನ್ನು ಕಾಪಾಡಿದನು.

ಇಂತಹ ಸರ್ವದಾ ರಕ್ಷಕನಾದ ಅಪರಿಮಿತವಾದ ಸ್ಥಿರವಾದ ಬಲವನ್ನುಳ್ಳ ಶ್ರೀನೃಸಿಂಹನನ್ನು ಸದಾ ಧ್ಯಾನಮಾಡುತ್ತಲಿರುವ ನೀನು (ರುದ್ರನಾದ ನೀನು) ನನ್ನನ್ನು ಕಾಪಾಡು ಎಂದು ಮುಂದಿನ ಶ್ಲೋಕಗಳಲ್ಲಿ ಭಕ್ತನ ಪ್ರಾರ್ಥನೆಯು ಕಂಡುಬಂದಿದೆ.

**ಯೋಽಹಂ ಹರೇಃ ಸ್ತುತಿಕೃತಂ ತ್ವಾಂ ವೈಷ್ಣವಧುರಂಧರಮ್ ।**
**ಸ್ತುವಾನೋಽಸ್ಮ್ಯಸ್ಮದಸ್ಮತ್ತೋ ಯೋಽನ್ಯಸ್ತಂ ನಿವಹಂತು ತೇ**
**॥ ೨೬ ॥**

**ಸೇನಾ ಭೂತಪಿಶಾಚಾದ್ಯಾಃ ಸರ್ವಲೋಕಭಯಂಕರಾಃ ।**
**ನ ತು ಮಾಂ ಆಶ್ರಿತಂ ಭಕ್ತಂ ನಾಶಯಂತು ಕದಾಚನ ॥ ೨೭ ॥**

**ವಪಿರ್ಧಾತುರ್ಮರ್ದನಾರ್ಥೋ ವಪನಂ ನಾಶ ಏವ ಹಿ ।**

ಹಿಂದೆ ಹೇಳಿದ ರೀತಿಯಲ್ಲಿ ಹೃದಯಗುಹಾಗತನಾದ ಶ್ರೀನೃಸಿಂಹ ದೇವರನ್ನು ಸರ್ವದಾ ಧ್ಯಾನಮಾಡುತ್ತಲಿರುವ ವೈಷ್ಣವಧುರಂಧರನಾದ ನಿನ್ನನ್ನು ಸ್ತೋತ್ರಮಾಡುವ ನಮಗೆ ಯಾರು ಶತ್ರುಗಳೋ ಅವರನ್ನು ಸರ್ವಲೋಕ ಭಯಂಕರರಾದ ನಿನ್ನ ಭೃತ್ಯರಾದ ನಿನ್ನ ಸೈನಿಕರಾದ ಭೂತಪಿಶಾಚಾದಿಗಳು ನಾಶಗೊಳಿಸಲಿ, ನನ್ನನ್ನು ರಕ್ಷಿಸಲಿ.

ನಿವಪಂತು-ಎಂಬುದಕ್ಕೆ ನಾಶಪಡಿಸಲಿ ಎಂದು ಅರ್ಥವನ್ನು ಹೇಳಿದುದನ್ನು ಸಮರ್ಥಿಸುತ್ತಾರೆ.

"ವಪಿರ್ಧಾತುಃ ಮರ್ದನಾರ್ಥಃ ವಪನಂ ನಾಶ ಏ ವಹಿ" ಎಂದು ಹೇಳಿದ್ದಾರೆ. ವಪಿಧಾತುವು ಧಾತುಪಾಠದಲ್ಲಿ ಡು-ವಪ-ಬೀಜಸನ್ತಾನೇ-ಬೀಜಸಂತಾನಂ ಕ್ಷೇತ್ರೇ ವಿಕಿರಣಮ್-ಗರ್ಭಾದಾನಂ ಚ-ಅಯಂ ಛೇದನೇಪಿ-ಕೇಶಾನ್‌ವಪತಿ ॥ ಸಕರ್ಮಕ-ಸೇಟ್-ಉಭಯಪದೀ । "ವಪತಿ-ವಪತೇ-ವಪನಂ-ಈ ಅರ್ಥವು ಸುಪ್ರಸಿದ್ಧವಾಗಿದೆ ಎಂಬುದನ್ನು ಹಿ ಶಬ್ದದಿಂದ ಸೂಚಿಸಿರುತ್ತಾರೆ.

**ಯದ್ವಾ ಈದೃಶಂ ನೃಸಿಂಹಂ ತೇ ಭಯಹರ್ತಾರಮೀಶ್ವರಮ್ ॥ ೨೮ ॥**

**ತ್ವದ್ವತ್ ಸ್ತುವಾನೋ ಯೋ ಲೋಕೇ ಮರ್ತ್ಯಸ್ತ್ವಚ್ಛಿಕ್ಷಯಾ ನ್ವಹಮ್ ।**
**ಅಸ್ಮದಸ್ಮಾದ್ಧರೇರ್ಭಕ್ತಾದನ್ಯಂ ಮಾಯಾವಿನಂ ಜನಮ್ ॥ ೨೯ ॥**

**ತೇ ಸೇನಾ ಭಯದಾ ನೃಣಾಂ ನಿವಪಂತು ಹರಿದ್ವಿಷಮ್ ।**
**ನತು ವಿಷ್ಣೋಃ ಪ್ರಿಯಂ ಭಕ್ತಮಿತಿವಾಗಾಹ ವೈದಿಕೀ ॥ ೩೦ ॥**

ಎಲೈ ರಕ್ಷಕನಾದ ರುದ್ರನೇ-ಇಂತಹ ಶತ್ರು ಭಯಂಕರನಾದ ನೃಸಿಂಹ ದೇವರನ್ನು ನೀನು ಸ್ತೋತ್ರಮಾಡುತ್ತಿರುತ್ತೀಯೆ. ನಿನ್ನ ಭಕ್ತರಾದ ನಾವೂ ಸಹ ನಿನ್ನಿಂದ ಶಿಕ್ಷಣವನ್ನು ಪಡೆದು ನಿನ್ನ ಅಂತರ್ಯಾಮಿಯಾದ ಶ್ರೀ ನರಹರಿ

ಯನ್ನು ಭಜಿಸುತ್ತೇನೆ. ನರಹರಿ ಭಕ್ತನಾದ ನಿನ್ನನ್ನು ಸ್ತೋತ್ರ ಮಾಡುತ್ತೇವೆ. ಹೀಗೆ ನಿನ್ನನ್ನು ಸ್ತೋತ್ರ ಮಾಡುವ ನಿನ್ನ ಭಕ್ತರಾದ ನಮ್ಮನ್ನು ಭಯಂಕರಗಳಾದ ನಿನ್ನ ಸೈನ್ಯಗಳು ಕಾಪಾಡಲಿ. ಹರಿದ್ವೇಷಿಗಳಾದ, ಪರಮಾತ್ಮನನ್ನು ನಿರ್ಗುಣನೆಂದು ದ್ವೇಷಿಸುವವರಾದ ಮಾಯಾವಿಗಳನ್ನು ನಾಶಗೊಳಿಸಲಿ. ವಿಷ್ಣು ಭಕ್ತರಾದ ನಮ್ಮ ತಂಟೆಗೆ ಬರದಿರಲಿ—ಎಂದು ವೈದಿಕವಚನವು ಹೇಳುತ್ತಿದೆ.

**ಇತ್ಥಂ ರುದ್ರಸ್ಯ ಸೂಕ್ತಸ್ಥಾ ಶ್ರುತಿರೇಷಾ ಸ್ತುಹೀತಿ ಯಾ ।**
**ಲೋಟ್ಯಾಽನುಶಾಸ್ತಿ ರುದ್ರೋಽಸೌ ಕಥಂ**
**ಸರ್ವೇಶ್ವರೋ ವದ ॥ ೩೧ ॥**

ಹೀಗೆ ವೇದವಾಣಿಯು, ರುದ್ರಸೂಕ್ತದಲ್ಲಿನ ವೈದಿಕವಚನವು "ಸ್ತುಹಿ" ಎಂದು ಲೋಟ್‌ಲಕಾರದಿಂದ ರುದ್ರನಿಗೆ ಅಪ್ಪಣೆ ಮಾಡುತ್ತಿರುವ ಪ್ರಯುಕ್ತ ವೇದಪುರುಷನ ಅಜ್ಞೆಗೆ ಒಳಪಡತಕ್ಕ ರುದ್ರನು ಹೇಗೆ ತಾನೇ ಸರ್ವೇಶ್ವರನು? ಹೇಳು.

**ರುದ್ರಸ್ತುತ್ಯತಯಾ ತಸ್ಯ ಹೃದಿ ಸ್ಥಿತತಯಾ ಚ ಯಮ್ ।**
**ಸೇಯಂ ಜಗೌ ನೃಸಿಂಹಂ ತಂ ಸದಾ ಸರ್ವೇಶ್ವರಂ ವದ ॥ ೩೨ ॥**

ರುದ್ರನ ಹೃದಯಗುಹಾದಲ್ಲಿ ರುದ್ರನಿಗೆ ಪ್ರೇರಕನಾಗಿ, ರುದ್ರನಿಂದ ಯಾವಾಗಲೂ ಸ್ತೋತ್ರ ಮಾಡಲ್ಪಡತಕ್ಕ ನರಸಿಂಹನನ್ನು ಶ್ರುತಿಯು ಹೊಗಳುತ್ತಿರುವುದರಿಂದ (ನೀನು) ಎಲೈ ಪ್ರತಿವಾದಿಯೇ ನರಸಿಂಹನನ್ನು ಸರ್ವೇಶ್ವರನೆಂದು ಸರ್ವದಾ ಹೇಳು.

**ಅನಾಶಂಕಿತದೋಷತ್ವಾತ್ ಶ್ರುತಿರೇಷಾ ಪುರಾತನೀ ।**
**ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ**
**ತುಷೋಪಮಮ್ ॥ ೩೩ ॥**
**ಕಿಂ ಕುರ್ಯಾತ್ ಪೌರುಷಂ ವಾಕ್ಯಂ ವದಂತು ಪ್ರತಿವಾದಿನಃ ।**

ಪುರಾತನವಾದ ಅಂದರೆ ಅನಾದಿನಿತ್ಯವಾದ ಅಪೌರುಷೇಯವಾದ ದೋಷ ಶಂಕಾಲೇಶರಹಿತವಾದ ಯಾವ ವೇದವೇ ವಿದ್ವಾಂಸರಿಗೆ ಬಲವಾಗಿದೆಯೋ ಅಂತಹ ದೋಷರಹಿತವಾದ ವೇದದ ಮುಂದೆ, ಹೊಟ್ಟಿನಂತೆ ದುರ್ಬಲವಾದ ದೋಷ ಭೂಯಿಷ್ಠವಾದ ಪೌರುಷೇಯ ವಾಕ್ಯವು ವೇದಕ್ಕೆ ವಿರುದ್ಧವಾಗಿ ಏನನ್ನುತಾನೇ

ಸಾಧಿಸೀತು! ಪ್ರತಿವಾದಿಗಳು ಹೇಳಲಿ. ವೇದದ ಬೆಂಬಲವಿಲ್ಲದ ಪೌರುಷೇಯ ವಾಕ್ಯದಿಂದ ಏನನ್ನೂ ಸಾಧಿಸಲು ಸಾಧ್ಯವಿಲ್ಲವೆಂದು ಪರಮಾಭಿಪ್ರಾಯ.

**ವಿರೋಧೇತ್ವನಪೇಕ್ಷಂ ಸ್ಯಾತ್ ಅಸತಿಹ್ಯನುಮಾಪಕಂ ॥ ೩೪ ॥**

**ಇತ್ಯಾಹ ಜೈಮಿನಿಃ ಸಾಕ್ಷಾತ್ ವ್ಯಾಸಶಿಷ್ಯೋ ಮಹಾಮತಿಃ ।**
**ಅಪೌರುಷೇಯವೇದಸ್ಯ ವಿರೋಧೇ ಪೌರುಷಂ ವಚಃ ॥ ೩೫ ॥**

**ಅನಪೇಕ್ಷಂ ಅಮಾನಂ ಸ್ಯಾತ್ತದಭಾವೇ ತು ತದ್ವಚಃ ।**
**ಸ್ವಮೂಲಭೂತವೇದಸ್ಯ ಸ್ಯಾತ್ಕಿಲ ಹ್ಯನುಮಾಪಕಮ್ ॥ ೩೬ ॥**

ತಾ॥ ಮಹಾಮತಿಯುಕ್ತರಾದ ಜ್ಞಾನಿವರೇಣ್ಯರಾದ ಶ್ರೀ ವೇದವ್ಯಾಸರ ಶಿಷ್ಯರಾದ ಜೈಮಿನ್ಯಾಚಾರ್ಯರು ಪೂರ್ವಮೀಮಾಂಸಾಸೂತ್ರಗಳನ್ನು ರಚಿಸಿದವರು. ಅವರು ಪೂರ್ವಮೀಮಾಂಸಾಶಾಸ್ತ್ರದಲ್ಲಿ ಅಧ್ಯಾಯ ೧–ಪಾದ–೩. ಅಧಿ–ಶ್ರುತಿ ಪ್ರಾಬಲ್ಯಾಧಿಕರಣದಲ್ಲಿ " ವಿರೋಧೇತ್ವನಪೇಕ್ಷಂ ಸ್ಯಾತ್ ಅಸತಿಹ್ಯನುಮಾನಮ್ ॥ ಎಂಬ ಸೂತ್ರವನ್ನು ರಚಿಸಿದ್ದಾರೆ. ಅದರ ಅರ್ಥವು ಈ ರೀತಿ ಇದೆ.

ಶ್ರುತಿಸ್ಮೃತಿಗಳಿಗೆ ಪರಸ್ಪರ ವಿರೋಧವು ಕಂಡುಬಂದಾಗ ಸ್ಮೃತಿಯು ಮೂಲ ಪ್ರಮಾಣಾನಪೇಕ್ಷವಾಗಿ ಅಪ್ರಮಾಣವೆನಿಸುತ್ತದೆ. ಅಸತಿಹಿವಿರೋಧೇ ಸ್ಮೃತಿಯು ಶ್ರುತಿಗೆ ವಿರೋಧವಿಲ್ಲವಾದರೆ ಅನುಮಾನಂ = ಮೂಲಶ್ರುತಿಗೆ ಅನುಮಾಪಕವಾಗುತ್ತದೆ ಎಂದು ಸೂತ್ರಾರ್ಥವು.

ಈ ಅರ್ಥವನ್ನೇ ಶ್ರೀವಾದಿರಾಜರು ಅಪೌರುಷೇಯವೇದಸ್ಯ ಇತ್ಯಾದಿ ಶ್ಲೋಕದಲ್ಲಿ ವಿವರಿಸಿರುತ್ತಾರೆ.

ತಾ॥ ಪೌರುಷೇಯವಾಕ್ಯವು ಅಪೌರುಷೇಯವಾದವೇದಕ್ಕೆ ವಿರುದ್ಧವಾದಲ್ಲಿ ಅಂತಹ ಪೌರುಷೇಯವಾಕ್ಯವು ಅಪ್ರಮಾಣವಾಗುತ್ತದೆ. ಹಾಗೆ ವಿರೋಧವಿಲ್ಲದ ಪಕ್ಷದಲ್ಲಿ ಪೌರುಷೇಯವಾಕ್ಯವು ಮೂಲಭೂತವಾದ ಯಾವುದೋ ಒಂದು ವೇದ ವಾಕ್ಯವು ಇರಬೇಕೆಂದು ಅನುಮಾಪಕವಾಗುತ್ತದೆ. ಅಂದರೆ ಅಂತಹ ಅರ್ಥವನ್ನು ಹೇಳುವ ವೇದವಾಕ್ಯವು ಉಂಟೆಂದು ಊಹಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ತದಾನುಕೂಲ್ಯಬಲತಃ ಸ್ವಯಂ ಮಾನಂ ನ ಚೇನ್ನ ಚ ।**

ವೇದದ ಬೆಂಬಲವಿರುವ ಪೌರುಷೇಯವಾಕ್ಯವು ವೇದಾನುಕೂಲ್ಯದ ಬಲ ದಿಂದ ಸ್ವಯಂಪ್ರಮಾಣವಾಗುತ್ತದೆ. ವೇದದ ಸಹಾಯವಿಲ್ಲವಾದರೆ ಪೌರುಷೇಯ ವಾಕ್ಯವು ಪ್ರಮಾಣವಾಗಲಾರದು.

**ಈದೃಶಂ ಪೌರುಷಂ ವಾಕ್ಯಂ ವೇದೋಕ್ತಾರ್ಥಸ್ಯ ಬಾಧಕಮ್ ॥೩೭॥**

**ತದಾ ಸ್ಯಾತ್ ಯದಿ ಹರ್ಯಕ್ಷಸದೃಶಃ ಸ್ಯಾತ್ ಮೃಗೀಶಿಶುಃ ।**
**ಅತೋಽಸ್ಮದಗ್ರೇ ಕೋ ವಕ್ತಾ ವದಂತು ಪ್ರತಿವಾದಿನಃ ॥ ೩೮ ॥**

ಯಾವ ವೇದವಾಕ್ಯದ ಬೆಂಬಲವೂ ಇಲ್ಲದಿರುವ ದೈತ್ಯರ ವ್ಯಾಮೋಹ ಕ್ಕಾಗಿಯೇ ರಚಿತಗಳಾಗಿರುವ ಪೌರುಷೇಯ ವಾಕ್ಯಗಳು ವೇದದಲ್ಲಿ ಹೇಳಿರತಕ್ಕ ಅರ್ಥಕ್ಕೆ ಬಾಧಕವಾಗುವುದಾದರೆ ಆಗ ಹೆಣ್ಣುಜಿಂಕೆಯ ಚಿಕ್ಕಮರಿಯು ಸಿಂಹಕ್ಕೆ ಸಮಾನವಾದೀತು. ಇದು ಹೇಗೆ ಅಸಂಭವವೋ ಅದರಂತೆ ಅಪೌರುಷೇಯವಾದ ವೇದಾರ್ಥಕ್ಕೆ ಬಾಧಕವಾಗಿ ಎಂದೆಂದಿಗೂ ಕೇವಲ ಪೌರುಷೇಯ ವಾಕ್ಯವು ಆಗಲಾರದು.

**ಅತೋಽಸ್ಮದಗ್ರೇ ಕೋ ವಕ್ತಾ ವದಂತು ಪ್ರತಿವಾದಿನಃ ॥ ೩೯ ॥**

ಆದ್ದರಿಂದ ವೇದೋಕ್ತವಾದ ಅರ್ಥವನ್ನು ಸಾಧಿಸುತ್ತಿರುವ ನಮ್ಮೆದು ರಿಗೆ ನಿಂತು ಪ್ರತಿಯಾಗಿ ಆಡುವವನು ಯಾರಿರುತ್ತಾನೆ? ಪ್ರತಿವಾದಿಗಳು ಹೇಳಲಿ.

ಅವತಾರಿಕಾ :—ಈ ರುದ್ರಸೂಕ್ತಗತ ಮಂತ್ರಕ್ಕೂ ಸಹ ಸಾಯಣಭಾಷ್ಯ ದಲ್ಲಿ ರುದ್ರನ ತಂದೆಯಾದ ಕೃಷ್ಣನ ಪರವಾದ ಅರ್ಥವನ್ನು ಬರೆದಿಲ್ಲ. ಅಧ್ಯಾತ್ಮ ಪರವಾದ ಅರ್ಥದ ಸ್ಫೂರ್ತಿಯು ಆ ವ್ಯಾಖ್ಯಾನದಿಂದ ಆಗುತ್ತಿಲ್ಲ. ಅದರ ಸರಿಯಾದ ಅರ್ಥವನ್ನು ಶ್ರೀವಾದಿರಾಜರು ವಿವರಿಸಿದ್ದಾರೆ.

ಶ್ರೀವಾದಿರಾಜರು ಋಗ್ವೇದದ ಮತ್ತೊಂದು ಮಂತ್ರವನ್ನು ಉದಾಹರಿ ಸುತ್ತಾರೆ. ಇದು ಋಗ್ವೇದದ ಮಂಡಲ ೨–ಸೂಕ್ತ ೩೩–ಮಂತ್ರ ೧೨ ನೆಯ ಮಂತ್ರವಾಗಿದೆ. ಇದೂ ಸಹ ರುದ್ರಸೂಕ್ತದ ಗುಂಪಿಗೇ ಸೇರಿದೆ. ಇದರಲ್ಲಿ ರುದ್ರನ ತಂದೆಯು ಶ್ರೀಕೃಷ್ಣನೆಂದು ಹೇಳಲಾಗಿದೆ.

ಕುಮಾರಶ್ಚಿತ್ ಪಿತರಂ ವಂದಮಾನಂ

ಪ್ರತಿನಾನಾಮ ರುದ್ರೋ ಉಪಯಂತಮ್ ।

ಭೂರೇರ್ದಾತಾರಂ ಸತ್ಪತಿಂ ಗೃಣೀಷೇ

ಸ್ತುತಸ್ತ್ವಂ ಭೇಷಜಾ ರಾಸ್ಯಸ್ಮೇ

(ಋಗ್ವೇದ ಮಂ. ೨, ಸೂ. ೩೩, ಮಂ-೧೨)

ಪದವಿಭಾಗ :—ಕುಮಾರಃ, ಚಿತ್, ಪಿತರಂ, ವಂದಮಾನಂ, ಪ್ರತಿ, ನಾನಾಮ (ನನಾಮ), ರುದ್ರ, ಉಪಯಂತಂ, ಭೂರೇಃ, ದಾತಾರಂ, ಸತ್‌ಪತಿಂ, ಗೃಣೀಷೇ, ಸ್ತುತಃ, ತ್ವಂ, ಭೇಷಜಾ, ರಾಸಿ, ಅಸ್ಮೇ, ಇತಿ.

ಅರ್ಥ :—ಹೇ ರುದ್ರ=ಮಗನಾದ ನೀನು (ಶ್ರೀಕೃಷ್ಣಪರಮಾತ್ಮನ ಮಗನಾದ ನೀನು) ದೈತ್ಯ ಜಗತ್ತಿನ ವ್ಯಾಮೋಹನಕ್ಕಾಗಿ ಕೈಲಾಸವನ್ನು ಕುರಿತು, ಉಪಯಂತಂ=ಬಂದುಸೇರಿದ, ವಂದಮಾನಂ=(ತ್ವಾಂ=ನಿನ್ನನ್ನು) ದೈತ್ಯರ ವ್ಯಾಮೋಹಕ್ಕಾಗಿಯೇ ನಮಸ್ಕಾರ ಮಾಡುವವನಾದ, ಪಿತರಂ=ತಂದೆಯಾದ ಶ್ರೀಕೃಷ್ಣನನ್ನು, ಪ್ರತಿನಾನಾಮ (ನನಾಮ)=ಆ ತಂದೆಯಾದ ಸರ್ವೋತ್ತಮನಾದ ಶ್ರೀಕೃಷ್ಣಪ್ರಭುವು ತಾಮಸ ಜಗತ್ತಿನ ವ್ಯಾಮೋಹಕ್ಕಾಗಿ ಮಾಡಿದರೂ ಸಹ, ಹಿರಿಯರು ಕಿರಿಯರಿಗೆ ಬೇರೆ ಉದ್ದೇಶದಿಂದ ನಮಸ್ಕಾರ ಮಾಡಿದ್ದನ್ನು ಕಿರಿಯರು ಎಂದಿಗೂ ಒಪ್ಪಿಕೊಳ್ಳಬಾರದು. ಅವು ಪಾಪಕ್ಕೆ ಕಾರಣವಾಗುತ್ತದೆ. ಆದ್ದರಿಂದ ನೀನೂ ಸಹ ಪಾಪದ ಭಯದಿಂದ ಆ ತಂದೆಯಾದ ಕೃಷ್ಣನಿಗೆ ಪ್ರತಿಯಾಗಿ, ನಾನಾಮ (ನನಾಮ)=ಭಕ್ತ್ಯಾದ್ಯತಿಶಯದಿಂದ ನಮಸ್ಕಾರ ಮಾಡಿದ್ದೀಯೇ, ನಮಸ್ಕಾರದಲ್ಲಿ ಭಕ್ತಿ ಶ್ರದ್ಧೆಗಳ ಅತಿಶಯವನ್ನು ತೋರಿಸಲು ವೇದವಾಣಿಯಲ್ಲಿ ನನಾಮ ಎಂದಿರಬೇಕಾದ ಜಾಗದಲ್ಲಿ ನಾನಾಮ=ಎಂದು ದೀರ್ಘವು ಸಾಭಿಪ್ರಾಯವಾಗಿದೆ.

ತೇನ=ಆ ಕೃಷ್ಣನಿಂದ, ಸ್ತುತಃ, ತ್ವಂ=ಹೊಗಳಲ್ಪಟ್ಟ ನೀನು, ಭೂರೇಃ ದಾತಾರಂ=ಅಧಿಕಪುರುಷಾರ್ಥವಾದ ಮೋಕ್ಷವನ್ನು ಕೊಡುವವನಾದ, ಸತ್ಪತಿಂ

=ಸಜ್ಜನರ ಪತಿಯಾದ, ಕೃಷ್ಣ ಪರಮಾತ್ಮನನ್ನು ಗೃಣೀಷೇ=ಸ್ತೋತ್ರ ಮಾಡಿ ರುತ್ತೀಯೇ, ಇಂತಹ ನೀನು ನಮ್ಮಿಂದ ಸ್ತುತಃ=ಸ್ತುತಿಸಲ್ಪಟ್ಟವನಾಗಿ, ಅಸ್ಮೇ= ನಮಗೆ, ಭೇಷಜಾ=ಭೇಷಜಾನಿ, ಸಂಸಾರವ್ಯಾಧಿನಾಶಕಗಳಾದ (ಜ್ಞಾನಾನಿ= ಜ್ಞಾನಗಳನ್ನು) ಜ್ಞಾನಗಳನ್ನು, ರಾಸಿ=ದೇಹಿ=ಕೊಡು.

ನಾನಾಮ (ನನಾಮ) ಇಲ್ಲಿ ದೀರ್ಘವು ಆಧಿಕ್ಯಾರ್ಥದಲ್ಲಿ ಸಂಹಿತೆಯಲ್ಲಿ ಕಂಡುಬಂದಿದೆ.

ಶ್ರೀಕೃಷ್ಣಪರಮಾತ್ಮನು ಪುತ್ರಾರ್ಥವಾಗಿ ಕೈಲಾಸಕ್ಕೆ ಹೋಗಿ ರುದ್ರದೇವ ನನ್ನು ಕುರಿತು ತಪಸ್ಸು ಮಾಡಿರುವುದಾಗಿಯೂ, ಆ ರುದ್ರದೇವರ ವರದಿಂದ ಶ್ರೀ ರುಕ್ಮಿಣಿದೇವಿಯಲ್ಲಿ ಪ್ರದ್ಯುಮ್ನನನ್ನು ಮಗನನ್ನಾಗಿ ಪಡೆದನೆಂದೂ ಪೌರಾಣಿಕ ವಾದ ಕಥೆಯೂ ಇದೆ. ಈ ಪ್ರವಾದದ ಒಳರಹಸ್ಯವನ್ನು ತಿಳಿಸುವ ವೇದವಾಕ್ಯ ವನ್ನು ಉದಾಹರಿಸಿ ಶ್ರೀವಾದಿರಾಜರು ಮೇಲೆ ತಿಳಿಸಿರುವ ಪ್ರಕಾರ ಶ್ರೀಕೃಷ್ಣ ಪರಮಾತ್ಮನ ಸರ್ವೋತ್ತಮತ್ವಪರವಾದ ಅರ್ಥವನ್ನು ನಿರೂಪಿಸಿರುತ್ತಾರೆ.

ಇಯಂ ಚ ರುದ್ರಸೂಕ್ತಸ್ಥಾ ಶ್ರುತಿಃ ಗೌರೀಪತಿಂ ಹರೇಃ ।
ಸಾಕ್ಷಾತ್ಕುಮಾರಂ ಸ್ತೋತಾರಂ ನಮಸ್ಕರ್ತಾರಮಾಹ ಚ ॥ ೪೦ ॥

ಕುಮಾರಶ್ಚಿತ್ ಎಂಬ ಹಿಂದೆ ಉದಾಹರಿಸಿದ ಋಗ್ವೇದದಲ್ಲಿನ ರುದ್ರ ಸೂಕ್ತ ಗತವಾದ ಮಂತ್ರವು ಗೌರೀಪತಿಯನ್ನು ಶ್ರೀಹರಿಯ ಸಾಕ್ಷಾತ್ ಮಗನೆಂದೂ ಶ್ರೀಹರಿಗೆ ನಮಸ್ಕಾರ ಮಾಡಿದವನೆಂದೂ ಹೇಳುತ್ತಲಿದೆ.

ಕೃಷ್ಣಂ ತತ್ಪಿತರಂ ಸ್ತುತ್ಯಂ ನಮ್ಯಂ ಚ ಸ್ಪಷ್ಟಮಾಹ ಹಿ ।
ಈದೃಕ್‌ರುದ್ರಃ ಕ್ವ ಕೃಷ್ಣಃ ಕ್ವ ವದಂತು ಪ್ರತಿವಾದಿನಃ ॥ ೪೧ ॥

ಶ್ರೀಕೃಷ್ಣನನ್ನು ರುದ್ರನ ತಂದೆಯನ್ನಾಗಿಯೂ, ರುದ್ರನಿಂದ ಸ್ತುತ್ಯನ ನ್ನಾಗಿಯೂ, ಮಂತ್ರವು ಹೇಳುತ್ತಿರುವುದರಿಂದ ಇಂತಹ ರುದ್ರನೆಲ್ಲಿ? ಸರ್ವವಂದ್ಯ ನಾದ ಕೃಷ್ಣನೆಲ್ಲಿ? ಪ್ರತಿವಾದಿಗಳು ಹೇಳಲಿ.

ಇಲ್ಲಿ ಕೃಷ್ಣನು ರುದ್ರನಿಗಿಂತಲೂ ಉತ್ತಮನು ಎಂಬುದು ಸ್ಪಷ್ಟವಾಗಿ ಕಂಡುಬರುತ್ತಿರುವುದರಿಂದ ಪುರಾಣದ ಕಥೆಯಲ್ಲಿ ಹೇಳಿರುವ ಕೃಷ್ಣನ ತಪಶ್ಚರಣ ರೂಪವಾದ ವ್ಯಾಪಾರವು ಕೇವಲ ಅವನ ಲೀಲೆಯಿಂದೇ ತಿಳಿಯಬೇಕು. ಅಥವಾ ದೈತ್ಯರ ವ್ಯಾಮೋಹಕ್ಕಾಗಿ ಅರಿಯಬೇಕೆಂಬುದು ಪರಮಾಭಿಪ್ರಾಯವಾಗಿದೆ.

ದೈತ್ಯರ ಮೋಹಕ್ಕಾಗಿ ಪರಮಾತ್ಮನು ಅವತಾರಕಾಲದಲ್ಲಿ ರುದ್ರನನ್ನು ಪೂಜಿಸುದುದು ಎಂಬ ವಿಷಯಕ್ಕೆ ಸಂವಾದರೂಪವಾಗಿ ಪಾದ್ಮಪುರಾಣವಚನವೂ ಕಂಡುಬಂದಿದೆ. "ಅಹಮಪ್ಯವತಾರೇಷು ತ್ವಾಂ ಚ ರುದ್ರ ಮಹಾಬಲ। ತಾಮಸಾನಾಂ ಮೋಹನಾರ್ಥಂ ಪೂಜಯಾಮಿ ಯುಗೇ ಯುಗೇ॥ ಇತಿ ಪಾದ್ಮೇ॥

ಎಲೈ ರುದ್ರನೇ ನಾನು ಅವತಾರಕಾಲದಲ್ಲಿ ತಾಮಸಜನರ ಮೋಹನಕ್ಕಾಗಿ ನಿನ್ನನ್ನು ಪೂಜಿಸುತ್ತೇನೆ ಎಂದು ಪರಮಾತ್ಮನು ರುದ್ರನನ್ನು ಕುರಿತು ಹೇಳಿದ್ದಾನೆ.

ಶ್ರುತಿಯ ಪ್ರತಿಪದಾರ್ಥಗಳನ್ನು ಶ್ರೀವಾದಿರಾಜರು ಮುಂದಿನ ಶ್ಲೋಕಗಳಲ್ಲಿ ವಿವರಿಸುತ್ತಾರೆ.

**ಹೇ ರುದ್ರ ಪಿತರಂ ಕೃಷ್ಣಂ ಕೈಲಾಸಂ ಪ್ರತಿ ತರ್ಹಿಚಿತ್ ।**
**ಉಪಯಂತಂ ಉಪಾಯಾಂತಂ ವಂದಮಾನಂ ಚ ಲೀಲಯಾ ॥೪೨॥**

**ಉಪಾಗಮನಮಪ್ಯಸ್ಯ ಲೀಲೈವ ನ ತು ವಸ್ತುತಃ ।**
**ಇತಿ ಸೂಚಯಿತುಂ ಚಾತ್ರಾಕಾರಂ ಶ್ರುತಿರಗೂಹಯತ್ ॥ ೪೩ ॥**

ಹೇ ರುದ್ರ = ಎಲೈರುದ್ರನೇ, ಪಿತರಂ = ತಂದೆಯಾದ ಶ್ರೀಕೃಷ್ಣನನ್ನು ಒಂದು ಸಂದರ್ಭದಲ್ಲಿ ಕೈಲಾಸವನ್ನು ಕುರಿತು, ಉಪಯಂತಂ = ಉಪಾಯಾನ್ತಂ = ಸಮೀಪಕ್ಕೆ ಬಂದ (ಕೈಲಾಸಕ್ಕೆ ಬಂದ) ವಂದಮಾನಂ ಚ ಲೀಲಯಾ = ಲೀಲೆಯಿಂದ ನಿನಗೆ ನಮಸ್ಕಾರ ಮಾಡಿರತಕ್ಕ ಶ್ರೀಕೃಷ್ಣನನ್ನು (ಇಲ್ಲಿ ಶ್ರೀಕೃಷ್ಣನು ರುದ್ರನಿಗೆ ನಮಸ್ಕಾರ ಮಾಡಿದುದು) ಕೇವಲ ಲೀಲೆಯಿಂದ ಎಂದು ತೋರಿಸುವುದಕ್ಕಾಗಿ, ಉಪಾಯಾಂತಂ ಎಂದು ದೀರ್ಘಸಹಿತವಾಗಿ ಹೇಳಬೇಕಾಗಿರುವ ಕಡೆ, ಉಪಯಂತಂ ಎಂದು ಹೇಳಿ 'ಪಾ'ಕ್ಕೆ ಪ ಎಂದು ಹ್ರಸ್ವಸ್ವರಸಹಿತವಾಗಿ ಹೇಳಿ ವೇದವಾಣಿಯು ಒಂದು ರಹಸ್ಯಾರ್ಥವನ್ನು ಮುಚ್ಚಿಟ್ಟು ಸೂಚಿಸಿರುತ್ತದೆ. ಮತ್ತು ಉಪಾಯಾನ್ತಂ ಎಂಬಲ್ಲಿ—'ಯಾ'ಕ್ಕೆ ಬದಲು 'ಯ' ಎಂದು ಇದೆ.

**ಕುಮಾರಶ್ಚಿತ್ ತಸ್ಯ ಹರೇಃ ಪುತ್ರ ಏವ ಭವಾನ್ಯತಃ ।**
**ನ ತೂಪಚಾರತಃ ಪುತ್ರೋ ವಸುದೇವಕುಮಾರವತ್ ॥ ೪೪ ॥**

ವೇದವಾಣಿಯಲ್ಲಿ ಕುಮಾರಶ್ಚಿತ್ ಎಂದಿದೆ. ಚಿತ್ ಎಂಬುದು ಏವ ಎಂಬ ಅರ್ಥವುಳ್ಳದುದಾಗಿದೆ. ಆ ಹರಿಯ ಕುಮಾರಶ್ಚಿತ್—ನಿಜವಾಗಿಯೂ ಪರಮಾತ್ಮನ ಮಗನೇ ಆಗಿರತಕ್ಕ ರುದ್ರನೇ ನೀನು. ವಾಸುದೇವನು ವಸುದೇವನ ಮಗನೆಂಬುದು

ಉಪಚಾರದಿಂದ ಹೇಗೆ ಹೇಳುತ್ತೇನೆಯೋ ಹಾಗೆ ನೀನು ಔಪಚಾರಿಕವಾಗಿ ಮಗನೆಂದೆನಿಸಿಲ್ಲ. ನಿಜವಾಗಿಯೂ ಪರಮಾತ್ಮನ ಮಗನೇ ಆಗಿರುತ್ತೀಯೆ ಎಂದು ಅಭಿಪ್ರಾಯ.

**ತತಃ ಪಾಪೇನ ಚಕಿತಃ ಪ್ರತಿ ನಾನಾಮ ತಂ ಪ್ರಭುಮ್ ।**
**ಭೂರೇಃ ಮೋಕ್ಷಸ್ಯ ದಾತಾರಂ ಸತ್ಪತಿಂ ಚ ಸತಾಂ ಪತಿಮ್ ॥ ೪೫ ॥**

ತತಃ ಪಾಪೇನ ಚಕಿತಃ=ಆದ್ದರಿಂದ ತಂದೆಯಾದ ಶ್ರೀಕೃಷ್ಣನಿಂದ ನಮಸ್ಕಾರಮಾಡಿಸಿಕೊಳ್ಳುವುದರಿಂದ ಪಾಪ ಬಂದೀತೆಂಬ ಭಯದಿಂದ, ಆ ಪ್ರಭುವಿಗೆ, ಪ್ರತಿ ನಾನಾಮ=ನ ಎಂದಿರಬೇಕಾದಲ್ಲಿ 'ನಾ' ಎಂಬ ದೀರ್ಘವು ಇದೆ. ಅಂದರೆ ಭಕ್ತಿ ಶ್ರದ್ಧಾಪೂರ್ವಕವಾಗಿ ನಮಸ್ಕಾರಮಾಡಿರುತ್ತಿಯೆ. ಮತ್ತು ಭೂರೇಃ ದಾತಾರಂ=ಅಧಿಕವಾದ ಮೋಕ್ಷಫಲವನ್ನು ಕೊಡತಕ್ಕವನಾದ ಸತ್ಪತಿಂ, ಸತಾಂ ಪತಿಮ್=ಸಜ್ಜನರಿಗೆ ಸ್ವಾಮಿಯಾದ ಅವನನ್ನು (ಸ್ತೋತ್ರ ಮಾಡಿರುತ್ತೀಯೆ).

**ಗೃಣೀಷೇ ವೈಷ್ಣವೈಃ ಸೂಕ್ತೈಃ ವಿಷ್ಣೋರ್ನು ಇತ್ಯಾದಿಕೈಃ ಶುಭೈಃ ।**

ಅಂತಹ ಸ್ವಾಮಿಯಾದ ಕೃಷ್ಣನನ್ನು "ವಿಷ್ಣೋರ್ನುಕಂ ವೀರ್ಯಾಣಿ ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ" (ಋಗ್ವೇದ ೯ ೧೫೪-೯) ಎಂಬ ವಿಷ್ಣು ಸೂಕ್ತದಿಂದ ಗೃಣೀಷೇ=ಸ್ತೋತ್ರ ಮಾಡುತ್ತಿರುತ್ತೀಯೆ.

ವಿಷ್ಣೋಃ ವೀರ್ಯಾಣಿ=ವಿಷ್ಣುವಿನ ವೀರ್ಯಗಳನ್ನು (ಪರಾಕ್ರಮಗಳನ್ನು) ಕಂನು=ಕೋನು=ಕೋವಾ=ಯಾರುತಾನೇ, ಪ್ರವೋಚಮ್=ಪ್ರವೋಚತ್ ಸಾಕಲ್ಯೇನ ಸಮಗ್ರವಾಗಿ ಹೇಳತಕ್ಕವನು ಯಾರಿರುತ್ತಾನೆ? ಯಾರೂ ಇಲ್ಲ. ಯಃ=ಯಾವ, ಕಃ=ಬ್ರಹ್ಮನು, ಕವಿಃ ಬ್ರಹ್ಮಾ=ಚತುರ್ಮುಖ ಬ್ರಹ್ಮನು "ಪಾರ್ಥಿವಾನಿ ರಜಾಂಸಿ = ಪಾರ್ಥಿವಪರಮಾಣೂನ್ = ಪೃಥಿವೀಪರಮಾಣು ಗಳನ್ನೂ ವಿಮಮೇ=ಗಣಯತಿ=ಎಣಿಸುತ್ತಾನೆಯೋ! ಅಂತಹ ಬ್ರಹ್ಮನೂ ಸಹ ಪರಮಾತ್ಮನ ಗುಣಗಳನ್ನು ಸಮಗ್ರವಾಗಿ ಹೇಳಲಾರನು ಎಂದು ಶ್ರುತಿಯ ಅಭಿಪ್ರಾಯ. ಇಂತಹ ಶ್ರೀವಿಷ್ಣುವಿನ ಅಪರಿಮಿತ ಮಹಿಮಾತಿಶಯಗಳನ್ನು ಹೊಗಳುತ್ತಿರುವ ವಿಷ್ಣುಸೂಕ್ತದಿಂದ ಎಲೈ ರುದ್ರನೇ ನೀನು ಸ್ತೋತ್ರ ಮಾಡು ತ್ತಿರುತ್ತೀಯೇ.

ಆತ್ಮಾರ್ಥಕಪ್ರತ್ಯಯಾಂತಪದೇನ ಹರಿಣಾ ಕೃತಮ್ ॥ ೪೬ ॥

ವಂದನಂ ತವ ಹೃನ್ನಿಷ್ಟಮಾತ್ಮಾನಂ ಪ್ರತಿ ತೇನ ತು ।
ಇತಿ ಸೂಚಯಿತುಂ ಶಾನಚ್‌ಪ್ರತ್ಯಯಾಂತಪದಂ ದದೌ ॥ ೪೭ ॥

ಶ್ರೀಕೃಷ್ಣನು ಮಾಡಿದ ನಮಸ್ಕಾರವು ತನಗೇನೇ ಅಂದರೆ ರುದ್ರಾಂತರ್ಯಾಮಿಯಾದ ಕೃಷ್ಣನಿಗೇನೇ ಹೊರತು ರುದ್ರನಿಗೆ ಅಲ್ಲವೆಂಬುದನ್ನು ತೋರಿಸುವುದಕ್ಕಾಗಿ ಆತ್ಮನೇಪದಕ್ಕೆ ಸಂಬಂಧಿಸಿದ 'ವಂದಮಾನಂ' ಎಂಬಲ್ಲಿ 'ಮಾನ' ಎಂಬ ಶಾನಚ್ ಪ್ರತ್ಯಯವು ಶ್ರುತಿಯಲ್ಲಿ ಕಂಡುಬಂದಿದೆ. ಇದರಿಂದ ಶ್ರೀಕೃಷ್ಣನ ನಮಸ್ಕಾರದ ರಹಸ್ಯವು ಸೂಚಿತವಾದಂತಾಯಿತು.

ಯಸ್ತ್ವಂ ಗುಹಾಶಯಾಯೈವೇತ್ಯಾತ್ಥ ತತ್ತೇ ವಚಃ ಸ್ಮರ ।
ಪರಸ್ಮೈ ಪುರುಷಾಯೈವ ನಮನಂ ಶಂಭುನಾ ಕೃತಮ್ ॥ ೪೮ ॥

ಇತಿ ಸೂಚಯಿತುಂ ರುದ್ರೇ ಪರಸ್ಮೈಪದಮಾಹ ಚ ।
ಯತಃ ಸರ್ವಗುಹಾಶಾಯ್ಯಪ್ಯೇಷ ಕೃಷ್ಣಃ ಸನಾತನಃ ॥ ೪೯ ॥

ಎಲೈ ರುದ್ರನೇ, ಯಾವ ಶ್ರೀಮದ್ಭಾಗವತದಲ್ಲಿ ನೀನೇ ಹೇಳಿದ್ದಿ, ಅದು ಹೀಗಿದೆ—

" ಪ್ರತ್ಯುದ್ಗಮಪ್ರಶ್ರಯಣಾಭಿವಾದನಂ
ವಿಧೀಯತೇ ಸಾಧುಮಿಥಃ ಸುಮಧ್ಯಮೇ ।
ಪ್ರಾಜ್ಞೈಃ ಪರಸ್ಮೈ ಪುರುಷಾಯ ಚೇತಸಾ
ಗುಹಾಶಯಾಯೈವ ನ ದೇಹಮಾನಿನೇ "

(ಶ್ರೀ ಭಾಗವತ ೪-೩-೨೨)

ಪ್ರಾಜ್ಞರು, ಅಂದರೆ ಜ್ಞಾನಿಗಳು, ಪರಸ್ಪರ ಮಿಳಿತರಾದಾಗ, ಪರಸ್ಪರ ಎದುರುಗೊಳ್ಳುವಾಗ ನಮ್ರತೆಯಿಂದ ನಮಸ್ಕಾರ ಮಾಡುವುದು, ನಮ್ರತೆಯನ್ನು ತೋರಿಸುವುದು, ಇವೆಲ್ಲವೂ ಸಹ ಹೃದಯಗುಹಾದಲ್ಲಿ ವಾಸವಾಗಿರುವ ಪರಮ ಪುರುಷನಿಗೆಂದು ತಿಳಿದು ಮಾಡುತ್ತಾರೆಯೇ ಹೊರತು ದೇಹಾಭಿಮಾನಿಯಾದ ಜೀವನಿಗಲ್ಲ. ಹೀಗೆಂದು ತಮ್ಮ ಪತ್ನಿಯಾದ ಉಮಾದೇವಿಗೆ ರುದ್ರದೇವರು ಹೇಳಿರುತ್ತಾರೆ.

ಈ ರೀತಿ ರುದ್ರನು ಆಡಿರತಕ್ಕ "ಮಾತನ್ನು ರುದ್ರನು ಸ್ಮರಿಸಲೆಂದು ಸ್ಮರ ಎಂದು ರುದ್ರನಿಗೆ ಜ್ಞಾಪಿಸಿರುತ್ತಾರೆ. ಶಂಭುವು ಮಾಡಿರತಕ್ಕ ನಮಸ್ಕಾರವು ಪರಮಪುರುಷನಿಗೇನೇ ಅಂದರೆ ಶ್ರೀಕೃಷ್ಣನಿಗೇನೇ ಎಂದು ತೋರಿಸುವುದಕ್ಕಾಗಿ 'ನನಾಮ' ಎಂದು ಪರಸ್ಮೈಪದಿಯ ಕ್ರಿಯಾಪದವು ವೇದದಲ್ಲಿ ಕಂಡುಬಂದಿದೆ. ಸರ್ವಗುಹಾಶಯನಾದ ಪರಮಪುರುಷನಾದ ಶ್ರೀಕೃಷ್ಣನಿಗೆ ನೀನು ಮಾಡಿರತಕ್ಕ (ರುದ್ರನು ಮಾಡಿರತಕ್ಕ ನಮಸ್ಕಾರವು) ಹೋಗುತ್ತದೆ. ಇನ್ನಾರಿಗೂ ಹೋಗುವುದಿಲ್ಲ. ಕೃಷ್ಣನಿಗಿಂತಲೂ ದೇಹಗುಹಾಗತನಾದ ನಿಯಾಮಕನಾದ ಅಂತರ್ಯಾಮಿಯು ಬೇರೇ ಇಲ್ಲವಷ್ಟೇ. ಈ ಅಭಿಪ್ರಾಯದಿಂದಲೇ ರುದ್ರನು ಕೃಷ್ಣನಿಗೆ ನಮಸ್ಕಾರ ಮಾಡಿದನು ಎಂದು ಹೇಳುವಾಗ ಪರಸ್ಮೈಪದವನ್ನು ವೇದದಲ್ಲಿ ಕಾಣಬಹುದಾಗಿದೆ ಎಂದು ಶ್ರೀವಾದಿರಾಜರ ಅಭಿಪ್ರಾಯ. ಶ್ರೀಕೃಷ್ಣನು ಮಾಡಿದ ನಮಸ್ಕಾರವಾದರೋ ತನ್ನಿಂದ ಅಭಿನ್ನನಾದ ರುದ್ರಾಂತರ್ಯಾಮಿಯಾದ ನರಸಿಂಹದೇವರಿಗೆ ಎಂಬ ಅಭಿಪ್ರಾಯದಿಂದ 'ವಂದಮಾನಂ' ಎಂದು ಆತ್ಮನೇಪದಕ್ಕೆ ಸಂಬಂಧಿಸಿದ ಶಾನಚ್ ಪ್ರತ್ಯಯವು ಇದೆ. ರುದ್ರನು ಕೃಷ್ಣನಿಗೆ ನಮಸ್ಕರಿಸಿದನು ಎಂಬಲ್ಲಿ 'ನನಾಮ' ಎಂದು ಹೇಳದೆ 'ನಾನಾಮ' 'ನಾ' ಎಂದು ದೀರ್ಘವು ಇದೆ. ದೀರ್ಘವು "ಅತಿಶಯದ್ಯೋತಕವು. ಅಂದರೆ ರುದ್ರನ ನಮಸ್ಕಾರವು ಭಕ್ತಿ ಶ್ರದ್ಧಾತಿಶಯಪೂರ್ವಕವಾದದ್ದು" ಎಂದು ಶ್ರೀವಾದಿರಾಜರ ಅಭಿಪ್ರಾಯ.

ಈ ಎಲ್ಲ ಕಾರಣದಿಂದ ಶ್ರೀಕೃಷ್ಣನ ಕೈಲಾಸಯಾತ್ರೆಯೂ ಕೂಡ ಶ್ರೀಕೃಷ್ಣನ ಸರ್ವೋತ್ತಮತ್ವಕ್ಕೆ ಸಾಧಕವೇ ಆಗಿದೆ. ಇದರಿಂದ ರುದ್ರನಿಗೆ ಸರ್ವೋತ್ತಮತ್ವವನ್ನು ಹೇಳುವುದು ಶ್ರುತಿಗೆ ಸರ್ವಥಾ ಅಭಿಪ್ರಾಯವಲ್ಲವೆಂಬುದನ್ನು ಶ್ರೀವಾದಿರಾಜರು ಯುಕ್ತಾಯುಕ್ತವಾಗಿ ವೇದಾರ್ಥವನ್ನು ನಿರೂಪಿಸಿರುತ್ತಾರೆ.

ತತ್ತ್ವತ್ಕೃತಂ ತು ನಮನಂ ಕೃಷ್ಣಮೇತಿ ನ ಚಾಪರಮ್ ।
ಗುಹಾಶಯಸ್ಯ ಹ್ಯಸ್ಯಾನ್ಯೋ ಯತೋ ನಾಸ್ತಿ ಗುಹಾಶಯಃ ॥೫೦॥
ತತ್ ಪರಸ್ಮೈಪದಂ ಚೈನಂ ಪರಮಾಹ ನ ಚಾಪರಮ್ ।
ಭಕ್ತ್ಯಾದ್ಯತಿಶಯೋ ಹ್ಯಸ್ಮಿನ್ನಸ್ತೀತಿ ದ್ಯೋತನಾಯ ಸಾ ॥ ೫೧ ॥
ದೀರ್ಘಯಾಮಾಸ ನಮನಂ ದೀರ್ಘೇಣೇತಿ ಮತಿರ್ಮಮ ।
ಅತಃ ಕೈಲಾಸಯಾತ್ರಾಪಿ ನ ಶ್ರೋತ್ರಸುಖದಾ ದ್ವಿಷಾಮ್ ॥ ೫೨ ॥

10/5/05

ಈ ಹಿಂದಿನ ಶ್ಲೋಕಗಳ ತಾತ್ಪರ್ಯವನ್ನು ಮೊದಲೇ ವಿವರಿಸಲಾಗಿದೆ. ಆದ್ದರಿಂದ ಶ್ರೀಕೃಷ್ಣನ ಕೈಲಾಸಯಾತ್ರೆಯು ದ್ವೇಷಿಗಳಿಗೆ (ಅಂದರೆ ಶಿವಸರ್ವೋತ್ತಮತ್ವವಾದಿಗಳಿಗೆ) ಕರ್ಣಾನಂದದಾಯಕವಾಗಿಲ್ಲ. ಅವರ ಅಭಿಪ್ರಾಯದಂತೆ ರುದ್ರನಿಗೆ ಸರ್ವೋತ್ತಮತ್ವವನ್ನು ಹೇಳಲು ಶಕ್ಯವಿಲ್ಲ. ಅದಕ್ಕೆ ವಿಪರೀತವಾಗಿ ಶ್ರೀಹರಿಯ ಸರ್ವೋತ್ತಮತ್ವಕ್ಕೇನೇ ಸಾಧಕವಾಗಿದೆ ಎಂದು ಅಭಿಪ್ರಾಯ.

**ಸ್ತುತೋ ಭಕ್ತಜನೇನ ತ್ವಂ ಅಸ್ಮೈಽಸ್ಮೈ ಸ್ತಾವಕಾಯ ಚ ।**
**ಭೇಷಜಾ ಭೇಷಜಾನ್ಯೌಷಧಾನ್ಯಜ್ಞಾನಾಖ್ಯಹೃದ್ರುಜಾಮ್ ॥೫೩॥**

**ನಾಶನಾಯೇಶ ಸಜ್ಞಾನಾಖ್ಯಾನಿ ರಾಸಿ ದದಾಸಿ ಚ ।**
**ರಾ ದಾನ ಇತಿ ಧಾತ್ವರ್ಥಮಪಿ ಚಾಹ ಸ ಪಾಣಿನಿಃ ॥ ೫೪ ॥**

ಭಕ್ತಜನರಿಂದ ಸ್ತುತಿಸಿಕೊಂಡ ನೀನು, ಅಸ್ಮೈ ಸ್ತಾವಕಾಯ ಚ= (ನಿನ್ನನ್ನು) ಸ್ತೋತ್ರಮಾಡುವವನಿಗೆ, ಭೇಷಜಾ= ಭೇಷಜಾನಿ= ಅಜ್ಞಾನವೆಂಬ ಹೃದ್ರೋಗವನ್ನು ನಾಶಮಾಡತಕ್ಕ ಸುಜ್ಞಾನವೆಂಬ ಔಷಧವನ್ನು, ರಾಸಿ= ದದಾಸಿ ಕೊಡತಕ್ಕವನಾಗಿರುತ್ತೀಯೇ. ರಾ=ದಾನೇ ಎಂಬುದಾಗಿ ಪಾಣಿನ್ಯಾಚಾರ್ಯನು 'ರಾ' ಧಾತುವಿಗೆ ದಾನಮಾಡುವುದು ಎಂಬ ಅರ್ಥವನ್ನು ಹೇಳಿರುತ್ತಾನೆ.

ಅಭಿಪ್ರಾಯದ ಸಂಗ್ರಹ :—

ಎಲೈ ರುದ್ರನೇ, ಶ್ರೀಕೃಷ್ಣನಿಂದ ಹುಟ್ಟಿದವನಾದ್ದರಿಂದ ಅವನ ಪುತ್ರನಾಗಿದ್ದೀಯೆ. ಹೀಗಿದ್ದರೂ ಕೂಡ ಅವತಾರ ಸಮಯದಲ್ಲಿ ಮಾನವರಂತೆ ಅನುಕರಿಸುವ, ಸರ್ವರಿಗೂ ತಂದೆಯಾದ ಶ್ರೀಕೃಷ್ಣನು ಕೇವಲ ಲೀಲಾರ್ಥವಾಗಿ ಕೈಲಾಸಕ್ಕೆ ಬಂದು ಪುತ್ರಾರ್ಥವಾಗಿ ನಿನ್ನನ್ನು ಕುರಿತು ತಪಸ್ಸು ಮಾಡಿದಂತೆ ತೋರಿಸುವವನಾಗಿ ನಿನಗೆ ನಮಸ್ಕಾರವನ್ನು ಮಾಡುತ್ತಾನೆ. ಆಗ ನೀನು ಚಕಿತನಾಗಿ (ಭಯಭೀತನಾಗಿ) ಪಾಪಕ್ಕೆ ಅಂಜಿದವನಾಗಿ, ನಿನಗೆ ಲೀಲಾರ್ಥವಾಗಿ ನಮಸ್ಕರಿಸುವ ಶ್ರೀಕೃಷ್ಣಪ್ರಭುವಿಗೆ ಭಕ್ತಿಶ್ರದ್ಧಾತಿಶಯಗಳಿಂದ ನಮಸ್ಕಾರಮಾಡಿ ಸ್ತೋತ್ರಮಾಡುತ್ತೀಯೆ. ನೀನು ಮಾಡುವ ಸ್ತೋತ್ರದಲ್ಲಿ ಶ್ರೀವಿಷ್ಣುವೇ ಸರ್ವೋತ್ತಮನು ದೇವತೆಯೆಂದೂ, ಮೋಕ್ಷದಾಯಕನೆಂದೂ, ಜ್ಞಾನಿಗಳ ಧ್ಯಾನಕ್ಕೆ ವಿಷಯನೆಂದೂ, ಅಲ್ಲಿ ನೆರೆದಿದ್ದ ಸಜ್ಜನರ ನಿಕರಕ್ಕೆ ಉಪದೇಶಮಾಡುತ್ತೀಯೆ. ಹೀಗೆ ಶ್ರೇಷ್ಠ ವಿಷ್ಣುಭಕ್ತ

ನಾದ ನೀನು ನಿನ್ನನ್ನು ಸ್ತೋತ್ರಮಾಡುವವರಿಗೆ ಉತ್ತಮವಾದ ಜ್ಞಾನವನ್ನು ಕೊಟ್ಟು ಅವರ ಮನಸ್ಸನ್ನಾವರಿಸಿರುವ ಮಿಥ್ಯಾಜ್ಞಾನವನ್ನು ಹೋಗಲಾಡಿಸು ಎಂದು ಅಭಿಪ್ರಾಯ.

ಇದಕ್ಕೆ ಪ್ರಮಾಣಗಳು :—

**ಕ ಇತಿ ಬ್ರಹ್ಮಣೋ ನಾಮ ಈಶೋಽಹಂ ಸರ್ವದೇಹಿನಾಮ್ ।**

**ಆವಾಂ ತವಾಂಗಸಂಭೂತೌ ಅತಃ ಕೇಶವನಾಮವಾನ್ ॥**

(ಹರಿವಂಶ–ಭವಿಷ್ಯಪರ್ವ ೮೮–೪೮)

ಕ=ಎಂದು ಬ್ರಹ್ಮನ ಹೆಸರು, ಸರ್ವದೇಹಿಗಳಿಗೆ ಈಶನಾದ್ದರಿಂದ ನಾನು ಈಶ. ನಾವಿಬ್ಬರೂ ನಿನ್ನ ದೇಹದಿಂದ ಉತ್ಪನ್ನರಾದ್ದರಿಂದ ನಿನಗೆ ಕೇಶವನೆಂಬ ನಾಮಧೇಯವು ಎಂದು ರುದ್ರನು ನುಡಿದಿದ್ದಾನೆ. ಮತ್ತೂ ರುದ್ರನು ಹೀಗೆ ಹೇಳುತ್ತಾನೆ.

ರುದ್ರಃ—ಏತದೇವ ಪರಂ ವಸ್ತು ನೈತಸ್ಮಾತ್ಪರಮಸ್ತ್ವತಃ ।

ಏಷ ವೋ ಮೋಕ್ಷದಾತಾ ಚ ಏಷ ಮಾರ್ಗ ಉದಾಹೃತಃ ॥

(ಹರಿವಂಶ, ಕೈಲಾಸಯಾತ್ರಾಯಾಂ)

**ಭೇಷಜೇತಿಪದಂ ಲುಪ್ತವಿಭಕ್ತಿಕಮಿದಂ ಯತಃ ।**

**ತದ್ಭೇಷಜಾ ಭೇಷಜಾನೀತ್ಯರ್ಥಮಾಹ ಸ ಪಾಣಿನಿಃ ॥ ೩೫ ॥**

'ಭೇಷಜಾ' ಎಂಬ ಪದದಲ್ಲಿ ವಿಭಕ್ತಿಪ್ರತ್ಯಯವು ಲುಪ್ತವಾಗಿರುವುದರಿಂದ 'ಭೇಷಜಾ' ಎಂಬೀ ಪದಕ್ಕೆ ಪಾಣಿನಿಯು ಭೇಷಜಾನಿ=ಔಷಧಗಳು ಎಂದು ಅರ್ಥ ಹೇಳಿರುತ್ತಾನೆ.

**ಏವಂ ಚ ಶಂಭುರ್ಜ್ಞಾನಸ್ಯ ದಾತಾಽಽಸೀದ್ಗುರುರೇವ ನಃ ।**

**ಕೃಷ್ಣಸ್ಯ ಚ ಕುಮಾರೋಽಭೂನ್ನಂತಾ ಸ್ತೋತಾ ಚ ಸತ್ಪತೇಃ ॥೩೬॥**

ಏವಂಚ ಜ್ಞಾನದಾನ ಮಾಡುವ ಶಂಭುವು ನಮಗೆ ಗುರುವಾಗಿರುತ್ತಾನೆ. ಸಜ್ಜನರ ಸ್ವಾಮಿಯಾದ ಶ್ರೀಕೃಷ್ಣನಿಗೆ ಮಗನೂ ಸ್ತುತಿಕರ್ತನೂ ನಮಿಸುವವನೂ ಆಗಿದ್ದಾನೆ.

ರುದ್ರಸ್ಯ ಚ ಪಿತಾ ತೇನ ಪ್ರಣತಃ ಸಂಸ್ತುತಃ ಪ್ರಭುಃ ।
ಕೃಷ್ಣಶ್ಚ ಶ್ರುತಿಸಮ್ಮತ್ಯಾ ಯತೋಽಭೂತ್ಪರದೇವತಾ ॥ ೫೭ ॥

ತಸ್ಮಾದ್ಗುರುಂ ವದ ಹರಂ ಹರಿಭಕ್ತಧುರಂಧರಂ ।
ಹರಸ್ಯ ಸಾಕ್ಷಾತ್ಪಿತರಂ ಪರಂ ದೈವಂ ಹರಿಂ ವದ ॥ ೫೮ ॥

ಸ್ಮರ ಜೈಮಿನಿನಾ ಪ್ರೋಕ್ತಂ ಸೂತ್ರಮುಕ್ತಾರ್ಥಸೂಚಕಂ ।
ದ್ವೈಮಾತುರಶ್ರುತೇರರ್ಥೇ ಕೋಽಂತರಾಯಂ ಕರಿಷ್ಯತಿ ॥ ೫೯ ॥

ಅತೋಽಸ್ಮದಗ್ರೇ ಕಃ ಸ್ಥಾತಾ ವದನ್ತು ಪ್ರತಿವಾದಿನಃ ।
ಅನಾಶಙ್ಕಿತದೋಷತ್ವಾತ್ ಶ್ರುತಿರೇಷಾ ಪುರಾತನೀ ॥ ೬೦ ॥

ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ ತುಷೋಪಮಂ ।
ಕಿಂ ಕುರ್ಯಾತ್ಪೌರುಷಂ ವಾಕ್ಯಂ ವದನ್ತು ಪ್ರತಿವಾದಿನಃ ॥ ೬೧ ॥

ರುದ್ರನ ತಂದೆಯಾದ ಶ್ರೀಕೃಷ್ಣಪ್ರಭುವು ಆ ರುದ್ರನಿಂದ ಸ್ತುತಿಸಲ್ಪಟ್ಟವನೂ ನಮಸ್ಕರಿಸಲ್ಪಟ್ಟವನೂ ಆದ್ದರಿಂದ, ರುದ್ರನಿಗೆ ಪರದೇವತೆಯಾದನು ಎಂಬುದು ಶ್ರುತಿಗೆ ಸಮ್ಮತವಾದದ್ದು. ಆದ್ದರಿಂದ ಹರನನ್ನು ಗುರುವೆಂದೂ ಹರಿಭಕ್ತರಲ್ಲಿ ಶ್ರೇಷ್ಠನೆಂದೂ ಹೇಳು. ಹರಿಯನ್ನು ಹರನಿಗೆ ಸಾಕ್ಷಾತ್ ತಂದೆಯೆಂದೂ ಪರದೈವವೆಂದೂ ಹೇಳು. ॥ ೫೮ ॥

ಈ ನಾವು ಹೇಳಿದ ಅರ್ಥವನ್ನು ಸೂಚಿಸುವ ಜೈಮಿನಿಯ ಸೂತ್ರವನ್ನು ಜ್ಞಾಪಿಸಿಕೋ. (ವಿರೋಧೇತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಂ) (ಈ ಸೂತ್ರಕ್ಕೆ ಅರ್ಥವನ್ನು ಮೊದಲೇ ಹೇಳಿದ್ದಾಗಿದೆ) (ದ್ವೈಮಾತುರ – ಗಣಪತಿ) ವಿಘ್ನೇಶನು ಮಾಡಿದ ಶ್ರುತ್ಯರ್ಥನಿರ್ಣಯಕ್ಕೆ ವಿಘ್ನವು ಹೇಗೆ ಬಂದೀತು? (ಜೈಮಿನ್ಯಾ-ಚಾರ್ಯರು ವಿಘ್ನೇಶ ಅವತಾರರೆಂದು ಈ ವಾದಿರಾಜರ ಮಾತಿನಿಂದ ಊಹಿಸಬೇಕಾಗಿದೆ) ॥ ೫೯ ॥

ಹೀಗಿರುವುದರಿಂದ ನಮ್ಮ ಎದಿರಿಗೆ ನಿಲ್ಲುವನು ಯಾವನಿರುವನು ಪ್ರತಿವಾದಿಗಳು ಹೇಳಲಿ. "ಅದೇಕೆ ಎದುರಿಗೆ ವಾದಕ್ಕೆ ನಿಲ್ಲುವರು ಯಾರೂ ಇಲ್ಲವೆಂದು ಹೇಳುವಿರಿ" ಎನ್ನುವಿಯೇನು? ದೋಷಶಂಕಾ ಇಲ್ಲದ ಅಪೌರುಷೇಯವಾದ ಶ್ರುತಿಯ ಬಲವು ನಮಗುಂಟು. ಇಂತಹ ಪಂಡಿತರ ಎದುರಿಗೆ ನಿಲ್ಲುಹೊಟ್ಟನಂತೆ

ನಿಸ್ಸಾರವಾದ ಪಾಶುಪತ್ಯಾದಿ ಪೌರುಷೇಯಾಗಮಗಳಿಂದ ಏನುತಾನೆ ಸಾಧಿಸಲು ಸಾಧ್ಯವಾದೀತು ಪ್ರತಿವಾದಿಗಳು ಹೇಳಲಿ. ॥ ೬೧ ॥

ಅವತರಣಿಕಾ :—

ಶ್ರೀವಿಷ್ಣುಪಾದೋದಕಧಾರಣೆಯೆಂಬ ಸಂಪತ್ತಿನಿಂದ ಶಿವನಿಗೆ ಶಿವತ್ವವು ಲಭಿಸಿದೆಯೆಂದು ವೇದವಾಣಿಯು ವಿಷ್ಣುಪಾದೋದಕದ ಮಹಿಮೆಯನ್ನು ಹೇಳುತ್ತಲಿದೆ.

ಋಗ್ವೇದಮಂತ್ರ :—

**ತವ ಶ್ರಿಯೇ ಮರುತೋ ಮರ್ಜಯಂತ**

**ರುದ್ರ ಯತ್ತೇ ಜನಿಮ ಚಾರು ಚಿತ್ರಂ ।**

**ಪದಂ ಯದ್ವಿಷ್ಣೋರುಪಮಂ ನಿಧಾಯಿ**

**ತೇನ ಪಾಸಿ ಗುಹ್ಯಂ ನಾಮ ಗೋನಾಂ** ॥ ೬೨ ॥

(ಋಗ್ವೇದ ೩–೮–೧೬)

ಪದವಿಭಾಗ :—

ತವ, ಶ್ರಿಯೇ, ಮರುತಃ, ಮರ್ಜಯಂತ, ರುದ್ರ, ಯತ್, ತೇ, ಜನಿಮ, ಚಾರು, ಚಿತ್ರಂ, ಪದಂ, ಯತ್, ವಿಷ್ಣೋಃ, ಉಪಮಂ, ನಿಧಾಯಿ, ತೇನ, ಪಾಸಿ, ಗುಹ್ಯಂ, ನಾಮ, ಗೋನಾಂ, ಇದರ ಅರ್ಥವನ್ನು ಮುಂದೆ ತಿಳಿಸಲಾಗುತ್ತದೆ.

**ಇತಿ ಶ್ರುತಿರ್ಮುಕುಂದಸ್ಯ ಪಾದತೀರ್ಥನಿಷೇವಣಾತ್ ।**
**ಶಂಭೋಃ ಪವಿತ್ರತಾಮಾಹ ಜನ್ಮ ಚಾಹ ಪ್ರಜಾಪತೇಃ** ॥ ೬೩ ॥

ಹೀಗೆ ಶ್ರುತಿಯು ಮುಕುಂದನ ಪಾದತೀರ್ಥವನ್ನು ಸೇವಿಸುವುದರಿಂದ ಶಂಭುವಿಗೆ ಪಾವಿತ್ರ್ಯವನ್ನು ಹೇಳಿದೆ. ಮತ್ತು ಪ್ರಜಾಪತಿಯಿಂದ (ಬ್ರಹ್ಮನಿಂದ) ಜನ್ಮವೂ ಅವರಿಗೆ ಹೇಳಿದೆ.

ಸದಾ ವಿಷ್ಣುಪದಧ್ಯಾತೃತ್ವಂ ಚ ತನ್ನಾಮಜಪ್ತೃತಾಂ ।
ಆಹ ಶ್ರಿಯಂ ಚ ವಿಷ್ಣ್ವಂಘ್ರಿತೀರ್ಥನಿತ್ಯನಿಷೇವಣಮ್ ॥ ೨೪ ॥

ಮತ್ತು ಶಿವನು ಸದಾ ವಿಷ್ಣುವಿನ ಪಾದವನ್ನು ಧ್ಯಾನಮಾಡುತ್ತಾನೆಂದೂ, ಅವನ ನಾಮವನ್ನು ಜಪಿಸುತ್ತಾನೆಂದೂ ರುದ್ರನಿಗೆ ನಿತ್ಯವೂ ವಿಷ್ಣುವಿನ ಪಾದೋದಕವನ್ನು ಸೇವಿಸುವದರಿಂದ ಸಂಪತ್ತು ಉಂಟಾಗಿದೆಯೆಂದೂ ಶ್ರುತಿಯಲ್ಲಿ ಹೇಳಿದೆ.

ಇತ ಈದೃಗ್ವಿಧಃ ಶಂಭುರ್ಮನೋವಾಕ್ಕಾಯಕರ್ಮಭಿಃ ।
ಭಕ್ತಿಂ ದಧಾನಃ ಸತತಂ ವಿಷ್ಣೌ ಪರಮಪಾವನೇ ॥ ೨೫ ॥

ತತ್ಪುತ್ರಬ್ರಹ್ಮಣಃ ಪುತ್ರಃ ಕಥಂ ತಸ್ಯಾऽಶ್ರಯೋ ಭವೇತ್ ।

ಹೀಗೆ ಪರಮಪಾವನಮೂರ್ತಿಯಾದ ವಿಷ್ಣುವನ್ನು ಧ್ಯಾನಮಾಡುವುದರಿಂದ ಮನಸ್ಸಿನಿಂದಲೂ, ಸ್ತೋತ್ರ ಮಾಡುವುದರಿಂದ ವಾಕ್ಕಿನಿಂದಲೂ, ತೀರ್ಥವನ್ನು ಸೇವಿಸುವುದರಿಂದ ಕರ್ಮದಿಂದಲೂ ಭಕ್ತಿಯನ್ನು ಮಾಡುತ್ತಿರುವ ವಿಷ್ಣುವಿನ ಪುತ್ರನಾದ ಚತುರ್ಮುಖ ಬ್ರಹ್ಮನ ಪುತ್ರನಾದ ರುದ್ರನು ವಿಷ್ಣುವಿಗೆ ಆಶ್ರಯನು ಹೇಗೆತಾನೆ ಆದಾನು ?

ಶ್ರುತಿಶ್ಚ ವೈಷ್ಣವಾಚಾರಧನಕೋಶೋಪಮಾऽಭವತ್ ॥ ೨೬ ॥

ಯತಃ ಶಿವಸ್ಯಾಪಿ ಧರ್ಮಂ ವಕ್ತಿ ತೀರ್ಥನಿಷೇವಣಂ ।
ಅತೋऽಸ್ಮದಗ್ರೇ ಕೋ ವಕ್ತಾ ವದನ್ತು ಪ್ರತಿವಾದಿನಃ ॥ ೨೭ ॥

ಶಿವನಿಗೂ ಕೂಡ ವಿಷ್ಣುಪಾದೋದಕ ಸೇವನೆಯನ್ನು ಶ್ರುತಿಯು ಧರ್ಮವನ್ನಾಗಿ ಹೇಳುತ್ತದೆಯಾದ್ದರಿಂದ, ಅದು ವೈಷ್ಣವಾಚಾರವನ್ನು ರಕ್ಷಿಸುವುದಾಗಿರುವುದರಿಂದ ಸದಾಚಾರವೆಂಬ ಧನಕ್ಕೆ ಆಶ್ರಯವಾಗಿರುವ ಕೋಶದ ಸಾಮ್ಯವನ್ನು ಹೊಂದಿತು. ಹೀಗಿರುವುದರಿಂದ ನಮ್ಮೆದುರಿಗೆ ವಾದಿಸುವವನು ಯಾವನಿರುವನು ? ಪ್ರತಿವಾದಿಗಳು ಹೇಳಲಿ.

ತವ ಶ್ರಿಯೇ ಇತ್ಯಾದಿ ಶ್ರುತ್ಯರ್ಥದ ವಿವರಣೆ :

ಹೇ ರುದ್ರ=ಎಲೈ ರುದ್ರದೇವನೇ! ತವ=ನಿನ್ನ, ಶ್ರಿಯೇ=ಪಾವಿತ್ರ್ಯ ರೂಪಸಂಪತ್ತಿಗಾಗಿ, ಯತ್ತೇ ಜನಿಮ=ಯಾರಿಂದ ನಿನ್ನ ಜನ್ಮವೊ ಆ, ಮರುತಃ= ಬ್ರಹ್ಮರು (ಚತುರ್ಮುಖ ಬ್ರಹ್ಮರು) ಚಾರು=ಸುಂದರವೂ, ಚಿತ್ರಂ=ವಿಚಿತ್ರವೂ,

ಉಪಮಂ = ಸಮೀಪದಲ್ಲಿ ಇದ್ದು ಸೇವೆ ಮಾಡುವ ಲಕ್ಷ್ಮಿಯನ್ನುಳ್ಳ ವಿಷ್ಣೋ= ವಿಷ್ಣುವಿನ, ಪದಂ = ಪಾದವನ್ನು, ಮರ್ಜಯಂತಃ = ಮಾರ್ಜಯಂತಃ ತೊಳೆಯುತ್ತಾರೆಯೋ, ತತ್ = ಅದು, ತ್ವಯಾ = ನಿನ್ನಿಂದ ಹೃದಿ = ಹೃದಯದಲ್ಲಿ, ನಿಧಾಯಿ = ನ್ಯಧಾಯಿ = ಇಡಲ್ಪಟ್ಟಿತು. ಧ್ಯಾನಿಸಲ್ಪಟ್ಟಿತು, ತೇನ = ಅದರಿಂದ, ಗೋನಾಂ = ನಾಮಗಳ ಮಧ್ಯದಲ್ಲಿ ಗುಹ್ಯಂ ನಾಮ = ಗೋಪ್ಯವಾದ ರಾಮನಾಮವನ್ನು, ನಿರಂತರ, ಪಾಸಿ = ಧ್ಯಾನಮಾಡುವುದರ ಮೂಲಕ, ಕಾಪಾಡುತ್ತಿ. (ಸರ್ವದಾ ರಾಮನಾಮಪಾನವನ್ನು ಮಾಡುತ್ತಲಿರುತ್ತೀಯೇ)

ಅಭಿಪ್ರಾಯ :—

ಪ್ರತಿ ಬ್ರಹ್ಮಕಲ್ಪದಲ್ಲಿಯೂ ಆ ಕಲ್ಪದ ಬ್ರಹ್ಮದೇವರಿಂದ ಆಗಿನ ರುದ್ರದೇವರು ಪುತ್ರರಾಗಿ ಜನಿಸುತ್ತಾರೆ. ತ್ರಿವಿಕ್ರಮಾವತಾರದ ಸಮಯದಲ್ಲಿ ಪರಮಾತ್ಮ ತನ್ನ ಪಾದವನ್ನು ಮೇಲಕ್ಕೆ ಎತ್ತಿದಾಗ ಪಾದಾಂಗುಷ್ಠ ನಖಸ್ಪರ್ಶದಿಂದ ಬ್ರಹ್ಮಾಂಡ ಖರ್ಪರವು ಸೀಳಿ ಬ್ರಹ್ಮಾಂಡದ ಹೊರಗಿನ ನೀರು ಒಳಗೆ ಬರಲು, ಆ ನೀರನ್ನು ಸತ್ಯಲೋಕದಲ್ಲಿದ್ದ ಬ್ರಹ್ಮದೇವರು ತಮ್ಮ ಕಮಂಡಲದಲ್ಲಿ ಹಿಡಿದು ತ್ರಿವಿಕ್ರಮನ ಪಾದವನ್ನು ತೊಳೆದು ಪೂಜಿಸಿದರು. ಆ ನೀರು ಗಂಗಾನದಿಯಾಗಿ ಪ್ರವಹಿಸಿತು. ಆ ಗಂಗೆಯನ್ನು ತಲೆಯಲ್ಲಿ ಧರಿಸಿ ಗಂಗಾಧರನು ಪವಿತ್ರನಾದನು. ಅಲ್ಲದೆ ಆ ಪಾದವನ್ನು ಮನಸ್ಸಿನಲ್ಲಿ ಧ್ಯಾನಿಸುತ್ತಾ ಮತ್ತು ಪವಿತ್ರವಾದ ಪರಮಾತ್ಮನ ಗೋಪ್ಯವಾದ ರಾಮನಾಮವನ್ನು ಜಪಿಸುತ್ತಾ ಜನಗಳಿಗೆ ಉಪದೇಶಮಾಡುವುದರ ಮೂಲಕ ಆ ನಾಮಗಳನ್ನು ರುದ್ರದೇವರು ರಕ್ಷಿಸುತ್ತಾರೆ. ಈ ಅಭಿಪ್ರಾಯವನ್ನು ಶ್ರುತಿಯು ಹೇಳುತ್ತಲಿದೆ.

ಈಗ ಶ್ರೀವಾದಿರಾಜರು ಶ್ರುತಿಯಲ್ಲಿ ಪದಗಳ ಸ್ವಾರಸ್ಯವನ್ನು ತೋರಿಸುತ್ತಾ ಅದರ ವ್ಯಾಖ್ಯಾನವನ್ನು ಮಾಡುತ್ತಾರೆ.

ಹೇ ರುದ್ರ ಯದ್ಯೇಭ್ಯಸ್ತೇಽಭೂತ್ಪೂರ್ವಂ ಜನಿಮ ಜನ್ಮ ವೈ ।
ತವ ಶ್ರಿಯೈ ತೇ ಮರುತಃ ಪಿತರಃ ಪುತ್ರಲಾಲಸಾಃ ॥ ೩೮ ॥

ಎಲೈ ರುದ್ರನೆ! ಯಾವ ಬ್ರಹ್ಮರುಗಳಿಂದ ಪೂರ್ವದಲ್ಲಿ ನಿನ್ನ ಜನ್ಮವೋ ಆ ಪುತ್ರಲಾಲಸರಾದ ಪಿತೃಗಳು ನಿನ್ನ ಸಂಪತ್ತಿಗಾಗಿ ಇರುತ್ತಾರೆ.

ಯತ್ = ಯೇಭ್ಯಂ = ಯಾರದೆಶೆಯಿಂದ, ತೇ ಜನಿಮ (ಜನ್ಮ) ಅಭೂತ್ = ನಿನ್ನ ಜನ್ಮವು ಆಯಿತೋ ಪುತ್ರಲಾಲಸಾಃ = ಪುತ್ರನಲ್ಲಿ ಪ್ರೀತಿಯುಳ್ಳವರಾಗಿರುವ ತೇ ಮರುತಃ = ಆ ಮರುತ್‌ಗಳು ತವ ಶ್ರಿಯೈ = ನಿನ್ನ ಸಂಪತ್ತಿಗಾಗಿರುವರು.

**ಚಿತ್ರಂ ಸ್ಥೂಲಾಣುರೂಪತ್ವಾತ್ ಚಾರು ಸೌಂದರ್ಯವತ್ವತಃ ।**
**ಉಪ ಯಸ್ಯ ಸಮೀಪೇ ಮಾ ರಮಾಽಽಸ್ತೇ ಪರಿಚಾರಿಕಾ ॥ ೬೯ ॥**

ಶ್ರುತಿಯಲ್ಲಿ, ಚಿತ್ರಂ, ಚಾರು, ಉಪಮ ಈ ಮೂರು ವಿಶೇಷಣಗಳು ಭಗವಂತನ ಪಾದಕ್ಕೆ ಕಂಡುಬರುತ್ತೆ. ' ಚಿತ್ರಂ ' ಅಂದರೆ ಆಶ್ಚರ್ಯಕರವಾದುದು. ಅದು ಹೇಗೆ ಅಂದಲ್ಲಿ ಸಣ್ಣದಾಗಿ ಕಂಡುಬಂದ ವಾಮನನ ಪಾದವಷ್ಟೇ ತ್ರಿವಿಕ್ರಮನ ದೊಡ್ಡ ಪಾದ. ಹೀಗೆ ಅಣುತ್ವ ಮಹತ್ವ ಒಂದೇ ಸ್ಥಳದಲ್ಲಿ ಲೋಕದಲ್ಲಿ ಬೇರೆಲ್ಲೂ ಕಂಡುಬಂದಿಲ್ಲ. ಆದ್ದರಿಂದ ಲೋಕವಿಲಕ್ಷಣವಾದ ಶ್ರೀಹರಿಯ ಪಾದವು ವಿಚಿತ್ರವಾದದ್ದು. ಚಾರು = ಅತಿ ಸುಂದರವಾದದ್ದು. ಯದ್ಯಪಿ ಯಥಾಯೋಗ್ಯವಾದ ಸೌಂದರ್ಯವುಳ್ಳ ಪಾದಗಳು ರಮಾದಿಗಳಲ್ಲಿ ಕಂಡುಬಂದಿದೆ. ಆದರೆ ನಿರತಿಶಯ ಸೌಂದರ್ಯವು ವಿಷ್ಣುವಿನ ಅವಯವಗಳಲ್ಲಿಯೇ ಇರುವುದು ಶ್ರುತಿ ಸಿದ್ಧವಾಗಿದೆ. ಅದಕ್ಕೆ ಉಪಮಾನ ಬೇರೆ ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ಅದು ಚಾರು. ಈ ' ಉಪಮ ' ಅಂದರೆ ಉಪ = ಯಾವ ಪಾದದ ಸಮೀಪದಲ್ಲಿ, ಮಾ = ಲೋಕಮಾತೆಯಾದ ಮಹಾಲಕ್ಷ್ಮಿಯು ಪಾದ ಒತ್ತುವಳಾಗಿರುವಳೋ ಆ ಪಾದವು ' ಉಪಮ ' ಎಂದು ಅನ್ನಿಸಿಕೊಳ್ಳುತ್ತದೆ.

**ಯದಿತ್ಥಂ ಭಾಗ್ಯಸಂಪನ್ನಪದಂ ವಿಷ್ಣೋರನುತ್ತಮಂ ।**
**ತ್ರಿವಿಕ್ರಮತನೋಸ್ತದ್ಧಿ ಮಜ್ಜಯಂತಿ ಪುರಾ ಕಿಲ ॥ ೭೦ ॥**

ಯಾವ ಪಾದವು ಹೀಗೆ ಭಾಗ್ಯಸಂಪನ್ನವಾದುದೋ ಆ ತ್ರಿವಿಕ್ರಮರೂಪಿಯಾದ ವಿಷ್ಣುವಿನ ಸರ್ವೋತ್ತಮವಾದ ಪಾದವನ್ನ ತಾನೇ ಹಿಂದೆ (ಬ್ರಹ್ಮದೇವರು) (ತಮ್ಮ ಕಮಂಡಲೋದಕದಿಂದ) ತೊಳೆದದ್ದು.

**ವೈದಿಕತ್ವಾದನಾಜ್ಯೋಗೇಽಪ್ಯಲ್ಲೋಪಂ ವಕ್ತಿ ಪಾಣಿನಿಃ ।**
**ನ ಲೋಕಮೋಹನಾಯೇದಂ ಪ್ರಾದಪ್ರಕ್ಷಾಲನಂ ಕೃತಂ ॥ ೭೧ ॥**
**ಕಿಂತು ಭಕ್ತ್ಯೈವೇತಿ ವಕ್ತುಂ ಪ್ರಾಯುಙ್ಕ್ತಾಲೌಕಿಕಂ ಪದಂ ।**

'ಅನುಮಾರ್ಜಯಂತ' ಎಂದು ಹೇಳಬೇಕಾದ್ದನ್ನು, 'ಮರ್ಜಯಂತ' ಎಂದು 'ಅ' ಲೋಪಮಾಡಿ ಮತ್ತು ದೀರ್ಘವಾದ 'ಮಾ' ಕ್ಕೆ ಬದಲು ಹ್ರಸ್ವವಾದ 'ಮ' ಕಾರವನ್ನುಪಯೋಗಿಸಿರುವುದು ವೈದಿಕಪ್ರಯೋಗ. ಹೀಗುಂಟೆಂದು ಪಾಣಿನಿಯು ಹೇಳಿರುವನು. ಅಲೌಕಿಕವಾದ ಪದಪ್ರಯೋಗವು ಏನು ಸೂಚಿಸುತ್ತೆಯೆಂದರೆ ಹೀಗೆ ತಿಳಿಯಬೇಕು. ಪರಮಾತ್ಮನು ಅವತಾರಗಳಲ್ಲಿ ಬ್ರಾಹ್ಮಣರ ಪಾದಪ್ರಕ್ಷಾಳನಾದಿಗಳನ್ನ ಹೇಗೆ ಕೇವಲ ಲೀಲೆಯಿಂದ ಮಾಡುತ್ತಾನೋ ಹಾಗಲ್ಲ. ಬ್ರಹ್ಮದೇವರು ಮಾಡಿದ ಈ ತ್ರಿವಿಕ್ರಮನ ಪಾದಪ್ರಕ್ಷಾಳನವು ಪರಮಾತ್ಮನು ತನಗಿಂತ ಉತ್ತಮನು ಎಂದು ತಿಳಿದು ಭಕ್ತಿಯಿಂದ ಮಾಡಿದ್ದು ಎಂದು ತಿಳಿಸುವುದಕ್ಕಾಗಿ ಇಲ್ಲಿನ ಈ ಅಲೌಕಿಕ ಪ್ರಯೋಗವು.

ಶ್ರೀಶ್ಚ ಬಂಧಕರೀ ಮುಕ್ತಿಪ್ರತಿಬನ್ಧಕರೀ ತು ಯಾ ॥ ೭೨ ॥
ಸ್ವಾತ್ರನಾಭಿಮತಾ ಕಿಂತು ಯತ್ಪಾಪಂ ಜಾಯತೇ ಸದಾ ।
ಶ್ಮಶಾನವಾಸತೋ ಭಸ್ಮನೃಕಪಾಲಾಸ್ಥಿಧಾರಣಾತ್ ॥ ೭೩ ॥
ಮಸ್ತಕೇ ತೀರ್ಥಪಾದಸ್ಯ ವಿಷ್ಣೋಃ ಪಾದೋದಸೇವಯಾ ।
ತಸ್ಯಾಂಹಸಃ ಪರಿಹಾರರೂಪಾ ಶ್ರೀರುಚ್ಯತೇ ಬುಧೈಃ ॥ ೭೪ ॥
ಇತಿ ತತ್ವಂ ದ್ಯೋತಯಿತುಂ ಶ್ರಿಯ ಇತ್ಯವದಚ್ಛ್ರುತಿಃ ।

ಸಂಸಾರದಿಂದ ಬಂಧಿಸುವಳೂ ಮುಕ್ತಿಗೆ ಪ್ರತಿಬಂಧಕಳೂ ಆದ ಶ್ರೀಯು = ಸಂಪತ್ತು ಯಾವಳೋ ಅವಳು ಇಲ್ಲಿ ಶ್ರೀಶಬ್ದದಿಂದ ಹೇಳಲ್ಪಟ್ಟಿಲ್ಲ. ಆದರೆ ಶ್ಮಶಾನದಲ್ಲಿ ವಾಸಮಾಡುವದರಿಂದಲೂ ಭಸ್ಮ, ಮನುಷ್ಯನ ಕಪಾಲ ಮತ್ತು ಅಸ್ಥಿ ಇವುಗಳನ್ನು ಯಾವಾಗಲೂ ರುದ್ರದೇವನು ಧರಿಸುವುದರಿಂದಲೂ ಉಂಟಾದ ದೋಷವು ಯಾವುದೋ ಅದು ಪವಿತ್ರ ಪಾದವುಳ್ಳ ಶ್ರೀಹರಿಯ ಪಾದೋದಕವನ್ನು ತಲೆಯಲ್ಲಿ ಧರಿಸುವುದರಿಂದ ಹೋಗುವುದು ಯಾವುದೋ ಅದು 'ಶ್ರೀ'ಎಂದು ಜ್ಞಾನಿಗಳಿಂದ ಹೇಳಲ್ಪಡುತ್ತದೆಯೆಂದು ತೋರಿಸುವುದಕ್ಕಾಗಿ 'ಶ್ರೀ' ಯೆಂದು ಶ್ರುತಿಯು ಹೇಳಿತು.

ಇದರಿಂದ ಹೀಗೆ ಹೇಳಿದ ಹಾಗೆ ಆಗುತ್ತೆ (ಇದಂ ಉಕ್ತಂ ಭವತಿ) : ರುದ್ರನು ಪರಮಾತ್ಮನ ಆಜ್ಞಾಧಾರಕನಾಗಿ ದೈತ್ಯ ಮೋಹನಕ್ಕಾಗಿ ಯಾವಾಗಲೂ ಭಸ್ಮ ಲಿಪ್ತಾಂಗನಾಗಿರುತ್ತಾನೆ; ಮನುಷ್ಯನ ತಲೆಬುರುಡೆಯನ್ನು ಕೈಯ್ಯಲ್ಲಿ ಹಿಡಿದಿರು

ತ್ತಾನೆ, ಮತ್ತು ಎಲುಬನ್ನೂ ಧರಿಸಿರುತ್ತಾನೆ. ಇವೆಲ್ಲವೂ ದೋಷಕರವಾದದ್ದು. ಈ ದೋಷವು ಪವಿತ್ರಕರವಾದ ವಿಷ್ಣುವಿನ ಪಾದೋದಕವನ್ನು ಧರಿಸಿದರೆ ನಾಶ ವಾಗುತ್ತೆ. ಬ್ರಹ್ಮದೇವರು ವಿಷ್ಣುವಿನ (ತ್ರಿವಿಕ್ರಮನ) ಪಾದವನ್ನು ತೊಳೆಯು ವುದರಲ್ಲಿ ನನಗೆ ಪ್ರಿಯಪುತ್ರನಾದ ರುದ್ರನು ಗಂಗಾನದಿಯಾಗಿ ಪ್ರವಹಿಸುವ ಈ ಪಾದೋದಕವನ್ನು ತಲೆಯಲ್ಲಿ ಧರಿಸಿ ಪವಿತ್ರನಾಗಲಿ ಎಂಬುದೂ ಒಂದು ಉದ್ದೇಶ. ಇದೊಂದು ಸೂಚಿತವಾದ ರಹಸ್ಯಾಭಿಪ್ರಾಯವಾಗಿದೆ.

**ಪಾದಪ್ರಕ್ಷಾಲನಂ ಶಂಭೋಃ ಶ್ರೀರೇಷಾಽಭೂನ್ನ ಸಂಪದಾ ॥ ೭೫ ॥**
**ದಿಗಮ್ಬರೋ ಯೋ ಜಟಿಲಸ್ತಸ್ಯ ಶ್ರೀರಿಯಮೇವ ಹಿ ।**

ಅಭಿಪ್ರಾಯ :—

ದಿಗಂಬರನೂ ಜಟಾಧಾರಿಯೂ ಆದ ಈ ರುದ್ರನಿಗೆ ದೋಷದೂರವಾಗು ವುದೇ 'ಶ್ರೀ' ಶಬ್ದದ ಅಭಿಪ್ರಾಯವಾಗಿದೆ. ಅದು ಹೊರತು ವಸ್ತ್ರಾಭರಣಾದಿ ರೂಪವಾದ ಸಂಪತ್ತು ಅಲ್ಲ

**ಶಿವಶ್ಶಿವೋಽಭೂದಿತ್ಯಾಹ ಯತೋ ಭಾಗವತೇ ಶುಕಃ ॥ ೭೬ ॥**

ಆದ್ದರಿಂದಲೇ ಶುಕಾಚಾರ್ಯರು ಭಾಗವತದಲ್ಲಿ ವಿಷ್ಣುಪಾದೋದಕವಾದ ಗಂಗೆಯನ್ನು ಶಿರಸ್ಸಿನಲ್ಲಿ ಧರಿಸಿ ಶಿವನು ಶಿವನಾದನೆಂದು, ಪವಿತ್ರನಾದನೆಂದು ಹೇಳಿರುತ್ತಾರೆ.

**" ಯಚ್ಛೌಚನಿಃಸೃತಸರಿತ್ಪ್ರವರೋದಕೇನ**
**ತೀರ್ಥೇನ ಮೂರ್ಧ್ನ್ಯಧಿಕೃತೇನ ಶಿವಶ್ಶಿವೋಭೂತ್ "** (ಭಾಗವತ)

ಬ್ರಹ್ಮದೇವರು ತ್ರಿವಿಕ್ರಮನ ಪಾದವನ್ನು ಭಕ್ತಿಪೂರ್ವಕವಾಗಿ ಪ್ರಕ್ಷಾಲನ ಮಾಡಿದರು. ಆ ಪ್ರಕ್ಷಾಲನೋದಕವು ಗಂಗೆಯಾಗಿ ಪ್ರವಹಿಸಿತು. ಆ ಶ್ರೇಷ್ಠವಾದ ಗಂಗಾನದಿಯ ತೀರ್ಥವನ್ನು ತಲೆಯಮೇಲೆ ಧರಿಸುವುದರಿಂದ ಶಿವನು ಶಿವನಾದನು (ಪವಿತ್ರನಾದನು). ಇಂತಹ ಉತ್ಕೃಷ್ಟವಾದ ಹರಿಯ ಪಾದವನ್ನು ಹೃದಯ ದಲ್ಲಿ ಧ್ಯಾನಿಸಬೇಕು.

**ತತಃ ಪವಿತ್ರತೈವಾಸ್ಯ ಶಿವಸ್ಯ ಶ್ರೀಃ ಸತಾಂ ಮತಾ ।**

ಆದ್ದರಿಂದ ಪವಿತ್ರತೆಯೇ ಸಜ್ಜನರ ಅಭಿಪ್ರಾಯದಲ್ಲಿ ಈ 'ಶ್ರೀ' ಶಬ್ದದಿಂದ ಬೋಧ್ಯವಾದದ್ದು.

**ಸ್ತ್ರೀಪುಂಯೋಗಾಜ್ಜನಿರ್ನೇಯಂ ಕಿಂತು ಭ್ರೂಮಧ್ಯತೋ ವಿಧೇಃ**
**|| ೭೭ ||**

**ಇತಿ ಸೂಚಯಿತುಂ ಚಾತ್ರ ವಿಶ್ಲಿಷ್ಟಮಕರೋತ್ಪದಂ ।**

ಲೋಕದಲ್ಲಿ ಸ್ತ್ರೀಪುರುಷರ ಸಂಯೋಗದಿಂದ ಶಿಶುವಿನ ಉತ್ಪತ್ತಿಯು ಸಾಮಾನ್ಯವಾಗಿ ಕಂಡುಬಂದಿದೆ. ಆದರೆ ರುದ್ರದೇವರ ಜನ್ಮ ಹಾಗಲ್ಲ. ಅವರು ಬ್ರಹ್ಮದೇವರ ಭ್ರೂಮಧ್ಯದಿಂದ ಹೊರಗೆ ಬಂದರು. ಇದನ್ನು ಸೂಚಿಸುವುದಕ್ಕಾಗಿ 'ಜನ್ಮ' ಪದವು 'ಜನಿಮ' ಎಂದು ಒಡೆದು ಶ್ರುತಿಯಲ್ಲಿ ಪ್ರಯೋಗಿಸಲ್ಪಟ್ಟಿದೆ.

**ಇತ್ಥಂ ಮಹೋಪಕಾರಿತ್ವಾತ್ ಪದಮೇತತ್ಸದಾ ಹೃದಿ || ೭೮ ||**

**ತ್ವಯಾ ನ್ಯಧಾಯಿ ಯೇನೇದಂ ಪದಂ ಧ್ಯಾಯಸಿ ಮಾನಸೇ ।**

ಹೀಗೆ ಮಹೋಪಕಾರಿ ಆದ್ದರಿಂದ ಈ ವಿಷ್ಣುಪಾದವು ನಿನ್ನಿಂದ ಹೃದಯದಲ್ಲಿ ಇಡಲ್ಪಟ್ಟಿತು. ಹಾಗೆ ಇಡುವುದರಿಂದ ಈ ಪಾದವನ್ನು ನೀನು ಮನಸ್ಸಿನಲ್ಲಿ ಧ್ಯಾನಿಸುತ್ತೀಯೆ.

**ನಿಧಾಯೀತಿ ಪದಂ ಚೇದಂ ನ್ಯಧಾಯೀತ್ಯಾಹ ಪೂರ್ವವತ್ || ೭೯ ||**

**ನಿಷೇಧಸ್ಮಾರಕೋಽವರ್ಣೋ ಹರೇಣ ಪರಮಾದರಾತ್ ।**

**ಕೃತೇ ಧ್ಯಾನೇ ಕುತೋ ವಾಚ್ಯ ಇತಿ ತತ್ತ್ಯಾಜ ತಂ ಚ ವಾಕ್ || ೮೦ ||**

(ನಿ+ಅಧಾಯಿ) ನ್ಯಧಾಯೀ ಎಂದು ಇರುವುದಕ್ಕೆ ಬದಲು ನಿಧಾಯಿ ಎಂದು ಶ್ರುತಿಯಲ್ಲಿ ಇದೆ. ಹಿಂದಿನಂತೆ ಅಂದರೆ 'ಜನ್ಮ' ಎಂದು ಹೇಳುವುದಕ್ಕೆ ಬದಲು ಶ್ರುತಿಯು 'ಜನಿಮ' ಎಂದು ಹೇಳಿದ್ದಕ್ಕೆ ಕಾರಣ ಹೇಗೆ ಉಂಟೋ, ಇಲ್ಲಿಯೂ 'ನ್ಯಧಾಯಿ' ಎಂದು ಹೇಳುವುದಕ್ಕೆ ಬದಲು 'ನಿಧಾಯಿ' ಎಂದು ಹೇಳುವುದರಲ್ಲಿ ಒಂದು ಕಾರಣ ಉಂಟು. ಆದಕಾರಣ ಇದು ರುದ್ರನಿಂದ ಪರಮಾತ್ಮನ ಪಾದವು ಪರಮಾದರದಿಂದ ಧ್ಯಾನಿಸಲ್ಪಟ್ಟಿತು ಎಂದು ಹೇಳುವಾಗ ನಿಷೇಧಾರ್ಥವನ್ನು ಅಂದರೆ 'ಇಲ್ಲ' ಎಂಬ ಅರ್ಥವನ್ನು ಸೂಚಿಸುವ 'ಅ' ವರ್ಣವನ್ನು ಏಕೆ ಹೇಳಬೇಕು ಎಂದು ಶ್ರುತಿಯು ಅದನ್ನು ಬಿಟ್ಟುಬಿಟ್ಟಿತು.

**ತೇನ ಗೋನಾಂ ಗವಾಂ ನಾಮ್ನಾಂ ಮಧ್ಯೇ ತಂ ಚ ನಿರಂತರಮ್ ।**

**ಗುಹ್ಯಂ ರಾಮಾಭಿದಂ ನಾಮ ಪಾಸಿ ರಕ್ಷಸಿ ಜಿಹ್ವಯಾ || ೮೧ ||**

(ಋಗ್ವೇದ ೩-೮-೧೩)

"ತೇನ ಪಾಸಿ ಗುಹ್ಯಂ ನಾಮ ಗೋನಾಂ" ಈ ಶ್ರುತಿಯಲ್ಲಿರುವ ಪದಗಳಿಗೆ ಅರ್ಥವನ್ನು ತಿಳಿಸುತ್ತಾರೆ.

"ತೇನ ಗೋನಾಂ (ಮಧ್ಯೇ) ಗುಹ್ಯಂನಾಮ ತ್ವಂ ಜಿಹ್ವಯಾ ಪಾಸಿ"

ಗೋನಾಂ = ಗವಾಂ = ನಾಮ್ನಾಂ ಮಧ್ಯೇ = ಪರಮಾತ್ಮ ಹೆಸರುಗಳ ಮಧ್ಯದಲ್ಲಿ, ಗುಹ್ಯಂ ರಾಮಾಭಿಧಂ ನಾಮ=ಗೋಪ್ಯವಾದ ರಾಮ ಎಂಬ ಹೆಸರಿನ ನಾಮವನ್ನು, ಜಿಹ್ವಯಂ=ನಾಲಿಗೆಯಿಂದ ಉಚ್ಚಾರಣೆ ಮಾಡುವುದರ ಮೂಲಕ, ಪಾಸಿ=ರಕ್ಷಿಸಿ, ರಕ್ಷಿಸುತ್ತಿ.

**ಸದೈವೋಚ್ಚಾರಣಂ ನಾಮ್ನಾಂ ರಕ್ಷಣಂ ನಾಪರಂ ವಿದುಃ ।**
**ಮನಸಾಗ್ರೇ ಸಂಕಲ್ಪಯತಿ ವಾಚಾ ವ್ಯಾಹರತ್ಯಥ ॥ ೮೨ ॥**

ಸದಾ (ಯಾವಾಗಲೂ) ಭಗವಂತನ ರಾಮನಾಮವನ್ನು ಉಚ್ಚಾರಣೆ ಮಾಡುವುದೇ ಅದನ್ನು ರಕ್ಷಿಸುವುದು, ಬೇರೆಯಲ್ಲ, ಹೀಗೆ ಜ್ಞಾನಿಗಳು ತಿಳಿಯುತ್ತಾರೆ.

ಮನುಷ್ಯನು ಮೊದಲು ಮನಸ್ಸಿನಲ್ಲಿ ಸಂಕಲ್ಪಮಾಡುತ್ತಾನೆ. ಆಮೇಲೆ ಸಂಕಲ್ಪಮಾಡಿದ್ದನ್ನು ವಾಗಿಂದ್ರಿಯದಿಂದ ಉಚ್ಚರಿಸುತ್ತಾನೆ.

**ಇತಿ ಶ್ರುತೇರಿಯಂ ನಾಮನದೀ ಜಿಹ್ವಾಂಗಣೇ ತವ ।**
**ನೃತ್ಯಂತೀ ಚಿತ್ತಗಂ ಧ್ಯಾನಮಪ್ಯೂಚೇ ಕರಪಲ್ಲವಾತ್ ॥ ೮೩ ॥**

ಹೀಗೆ ಶ್ರುತಿ ಇರುವುದರಿಂದ ಜಿಹ್ವೆಯೆಂಬ ರಂಗಭೂಮಿಯಲ್ಲಿ ನರ್ತನ ಮಾಡುವ ಅವಿಚ್ಛಿನ್ನವಾದ ರಾಮನಾಮನದಿಯು ತನ್ನ ಕೈಯಿಂದ (ನಿನ್ನ) ಮನಸ್ಸಿನಲ್ಲಿನ ಧ್ಯಾನವನ್ನು ಸೂಚಿಸುತ್ತಾಳೆ.

**ಕಲ್ಪೇ ಕಲ್ಪೇ ಯತಃ ಸತ್ಯಲೋಕಾಧಿಪತಯೋಽಖಿಲಾಃ ।**
**ಬ್ರಹ್ಮಾಣೋ ಹರಿಪಾದಾಬ್ಜಂ ಕ್ಷಾಲಯಂತಿ ತತಃ ಶ್ರುತಿಃ ॥ ೮೪ ॥**
**ಮರುತಸ್ತ್ವಿತಿ ಬಹ್ವರ್ಥವಿಭಕ್ತ್ಯಾ ವಕ್ತಿ ತಾನ್ಸುರಾನ್ ।**
**ಅತಶ್ಚ ಕಾಕತಾಲೀಯಂ ನೇದಂ ಪಾದೋದಧಾರಣಮ್ ॥ ॥ ೮೫ ॥**
**ಕಿಂತು ಭೂಯೋ ದರ್ಶನೇನ ವ್ಯಾಪ್ತಂ ಶೈವೇ ಪದೇಽಭವತ್ ।**

ಪ್ರತಿಯೊಂದು ಬ್ರಹ್ಮಕಲ್ಪಕಲ್ಪದಲ್ಲಿಯೂ ಸತ್ಯಲೋಕಾಧಿಪತಿಗಳಾದ ಬ್ರಹ್ಮರುಗಳು ತಮ್ಮ ಕೈಗಳಿಂದ ಹರಿಪಾದಕಮಲವನ್ನು ತೊಳೆಯುತ್ತಾರಾದ್ದರಿಂದ

ಶ್ರುತಿಯು 'ಮರುತಃ' ಎಂದು ಬಹುವಚನವಿಭಕ್ತ್ಯಂತ ಶಬ್ದವನ್ನು ಉಪಯೋಗಿಸಿದೆ. ಆದ್ದರಿಂದ ರುದ್ರನು ವಿಷ್ಣುಪಾದೋದಕವನ್ನು ಶಿರಸ್ಸಿನಲ್ಲಿ ಧಾರಣೆ ಮಾಡುವುದು ಕಾಕತಾಲೀಯ ನ್ಯಾಯದಿಂದ ಕಂಡುಬರುವಂತೆ ಆಕಸ್ಮಿಕವಲ್ಲ. ಬಹು ಆವರ್ತಿ ಕಂಡುಬಂದಿರುವುದರಿಂದ ಇದು ಶೈವಪದದಲ್ಲಿ ವ್ಯಾಪ್ತವಾಗಿದೆ. ಆಯಾಯಾ ಕಲ್ಪದಲ್ಲಿನ ರುದ್ರಪದವಿಗೆ ಬಂದ ಪ್ರತಿಯೊಬ್ಬ ಚೇತನನೂ ವಿಷ್ಣುವಿನ ಪಾದೋದಕವನ್ನು ಧಾರಣೆಮಾಡುವನು ಎಂದು ಅಭಿಪ್ರಾಯ.

"ಯತ್ರ ಯತ್ರ ರುದ್ರಪದಾಧಿಷ್ಠಾತೃತ್ವಂ ತತ್ರತತ್ರ ಶಿರೋಧೃತವಿಷ್ಣು-ಪಾದೋದಕತ್ವಂ" ಎಂದು ವ್ಯಾಪ್ತಿಯು ಶ್ರುತಿಸಮ್ಮತವಾದುದಾಗಿದೆ.

ಇತ್ಯರ್ಥೋ ದೃಶ್ಯತೇ ಸ್ಪಷ್ಟಮಸ್ಯಾಮೃಚಿ ಯತೋಽಖಿಲೈಃ ॥ ೮೭ ॥

ಏವಂ ಚ ಮನಸಾ ವಾಚಾ ಕರ್ಮಣಾ ಚ ದಿನೇ ದಿನೇ ।
ಯಸ್ಯ ದಾಸ್ಯಂ ಮಹಾದೇವೋ ಬಿಭರ್ತಿ ಪರಮಾದರಾತ್ ॥ ೮೭ ॥

ಸ ಏಷ ಭಗವಾನ್ವಿಷ್ಣುರ್ನ ಕಿಂ ಸರ್ವೋತ್ತಮೋ ವದ ।
ಪ್ರತಿಕಲ್ಪಂ ವಿಧಾತಾರೋ ಯತ್ಪದಂ ಕ್ಷಾಲಯಂತಿ ಹಿ ॥ ೮೮ ॥

ಸ ಬ್ರಹ್ಮಪೂಜ್ಯಚರಣೋ ನ ಕಿಂ ಸರ್ವೋತ್ತಮೋ ವದ ।

ಹೀಗೆ ಅರ್ಥವು ಈ ಶ್ರುತಿಗೆ ಸ್ಪಷ್ಟವಾಗಿ ಎಲ್ಲರಿಗೂ ಕಂಡುಬರುವುದರಿಂದ ಮನಸ್ಸಿನಿಂದಲೂ, ವಾಗಿಂದ್ರಿಯದಿಂದಲೂ, ಕರ್ಮದಿಂದಲೂ, ಪ್ರತಿದಿನದಲ್ಲಿಯೂ ಯಾರ ದಾಸ್ಯವನ್ನು ಮಹಾದೇವನು ಪರಮಾದರದಿಂದ ವಹಿಸಿದ್ದಾನೆಯೋ ಆ ಭಗವಂತನಾದ ವಿಷ್ಣುವು ಸರ್ವೋತ್ತಮನಲ್ಲವೇನು ಹೇಳು ? ಅಲ್ಲದೆ ಪ್ರತಿಕಲ್ಪದಲ್ಲಿಯೂ ಬ್ರಹ್ಮಪದಕ್ಕೆ ಬಂದವರೆಲ್ಲರೂ ಯಾರ ಪಾದವನ್ನು ಪ್ರಕ್ಷಾಲನ ಮಾಡುತ್ತಾರೋ ಆ ಬ್ರಹ್ಮನಿಂದ ಪೂಜಿತವಾದ ಪಾದಕಮಲವನ್ನುಳ್ಳ ಶ್ರೀಹರಿಯು ಸರ್ವೋತ್ತಮನಲ್ಲವೇನು ಹೇಳು ?

ಅನಾಶಙ್ಕಿತದೋಷತ್ವಾತ್ ಶ್ರುತಿರೇಷಾ ಪುರಾತನೀ ॥ ೮೯ ॥

ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ ತುಷೋಪಮಮ್ ।
ಕಿಂ ಕುರ್ಯಾತ್ಪೌರುಷಂ ವಾಕ್ಯಂ ವದನ್ತು ಪ್ರತಿವಾದಿನಃ ॥ ೯೦ ॥

ಅಪೌರುಷೇಯವಾದ್ದರಿಂದ ದೋಷಶಂಕೆಯೇ ಇಲ್ಲದ ಪುರಾತನವಾದ ನಿತ್ಯವಾದ ಶ್ರುತಿಯು ಯಾವ ಪಂಡಿತರಿಗೆ ಸ್ವಪಕ್ಷಸಾಧನೆಯಲ್ಲಿ ಪ್ರಬಲವಾದ ಪ್ರಮಾಣವೋ ಅವರೆದುರಿಗೆ ನೆಲ್ಲುಹೊಟ್ಟನಂತೆ ಜೊಳ್ಳಾದ ಇತರ ವಾದಿಗಳ ಪೌರುಷೇಯ ವಾಕ್ಯವು ಏನು ಮಾಡೀತು ಪ್ರತಿವಾದಿಗಳು ಹೇಳಲಿ.

**ಅತ್ರಾಪಿ ಜೈಮಿನಿಃ ಸಾಕ್ಷೀ ಕರ್ಮಬ್ರಹ್ಮವಿದಗ್ರಣೀಃ ।**
**ಇತೋಽಪಿ ನಃ ಕುತೋ ಭೀತಿರ್ವದನ್ತು ಪ್ರತಿವಾದಿನಃ ॥ ೯೧ ॥**

ಕರ್ಮಮೀಮಾಂಸಾಗ್ರಣಿಯಾದ ಜೈಮಿನಿಯೂ ಕೂಡ ನಮ್ಮ ಪಕ್ಷದಲ್ಲಿ ಸಾಕ್ಷಿಯು. ಅನ್ಯಾರ್ಥಂ ತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ (ಬ್ರ. ಸೂ. ಅ. ೧. ಪಾ. ೪. ಸೂ. ೧೮). ಪರಮಾತ್ಮನ ಜ್ಞಾನಕ್ಕಾಗಿಯೇ ವೇದವು ಕರ್ಮಾದಿಗಳನ್ನು ಹೇಳುತ್ತಲಿದೆ ಎಂದು ಜೈಮಿನ್ಯಾಚಾರ್ಯರು ಹೇಳುತ್ತಾರೆ. ಭಾಗವತದಲ್ಲಿ ಏಕಾದಶಸ್ಕಂಧದಲ್ಲಿ ಉದ್ಧವನನ್ನು ಕುರಿತು ಶ್ರೀಕೃಷ್ಣನು "ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಽಪೋಹ್ಯ ಇತ್ಯಹಂ । ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ವೇದ ಕಶ್ಚನ ॥" (ಭಾಗವತ ೧೧ನೇ ಸ್ಕ.) ಎಂದು ಹೇಳಿರುತ್ತಾನೆ. ಕರ್ಮವನ್ನು ವಿಧಿಸುತ್ತಿರುವ ಶ್ರುತಿಯು ನನ್ನನ್ನು ಉದ್ದೇಶಿಸಿಯೇ ನನ್ನ ಪೂಜಾರೂಪವಾಗಿಯೇ ಕರ್ಮವನ್ನು ವಿಧಿಸುತ್ತಲಿದೆ ಎಂದು ಉದ್ಧವನಿಗೆ ಶ್ರೀಕೃಷ್ಣನು ಉಪದೇಶ ಮಾಡಿರುತ್ತಾನೆ. ಹೀಗಿರುವಾಗ ನಮಗೇಕೆ ಭಯ, ಪ್ರತಿವಾದಿಗಳು ಹೇಳಲಿ.

**ಶಿವತ್ರಿನೇತ್ರೋಪಮಂ ಮೇ ನೇತ್ರಮಾಸೀಚ್ಛ್ರುತಿತ್ರಯಂ ।**
**ತ್ರಿನೇತ್ರಂ ಪ್ರತಿ ಕೋ ವಕ್ತಾ ವದನ್ತು ಪ್ರತಿವಾದಿನಃ ॥ ೯೨ ॥**

'ಸ್ತುಹಿ ಶ್ರುತಂ', 'ಕುಮಾರಶ್ಚಿತ್ಪಿತರಂ', 'ತವ ಶ್ರಿಯೇ' ಈ ಮೂರು ಶ್ರುತಿಗಳು ನನಗೆ ಶಿವನ ಮೂರು ನೇತ್ರಗಳಿಗೆ ಸದೃಶವಾದ ಮೂರು ನೇತ್ರಗಳಾದವು. ತ್ರಿನೇತ್ರನಿಗೆ ಎದುರುವಾದಿಸುವವನು ಯಾರುಂಟು ಪ್ರತಿವಾದಿಗಳು ಹೇಳಲಿ. ಬ್ರಹ್ಮ, ವಿಷ್ಣು, ಮಹೇಶ್ವರ ಈ ಮೂವರು ಪರಮಾತ್ಮನ ಮೂರು ರೂಪಗಳು. ಕ್ರಮವಾಗಿ ಸೃಷ್ಟಿ, ಪಾಲನ, ಸಂಹಾರ ಕರ್ತರು, ಈ ಮೂವರಲ್ಲಿ ತಾರತಮ್ಯವೇ ಆಗಲಿ ಭೇದವೇ ಆಗಲಿ ಇಲ್ಲ. ಪುರಾಣಗಳಲ್ಲಿ ಅನೇಕ ಕಡೆ ಈ ಮತಕ್ಕೆ ಅನುಕೂಲದಂತಿರುವ ವಾಕ್ಯಗಳು ಇವೆ ಎಂದು ಮತ್ತೆ ಕೆಲವರು ಶೈವರು ಶಿವನೇ ಸರ್ವೋತ್ತಮ, ಅವನೇ ಪರಬ್ರಹ್ಮ, ಬ್ರಹ್ಮ ವಿಷ್ಣುಗಳು ಅವನ ಅಧೀನರಾಗಿ ತಮ್ಮ

ಕಾರ್ಯಗಳಲ್ಲಿ ಪ್ರವರ್ತಿಸುವ ಚೇತನರು ಎಂದು ವಾದಿಸುತ್ತಾರೆ. ಈ ಜನರೇ ಬಹಳ ವಾಗಿರುತ್ತಾರೆ. ಆದರೆ ಇವೆರಡು ಮತಗಳೂ ಅಪ್ರಮಾಣಗಳು. ನಿತ್ಯ ಮುಕ್ತನೂ ಸ್ವತಂತ್ರನೂ ಆದ ನಾರಾಯಣನೇ ಸೃಷ್ಟಿ ಸ್ಥಿತಿ ಲಯ ಮೊದಲಾದುವುಗಳಿಗೆ ಕರ್ತೃವು. ಬ್ರಹ್ಮ ಶಿವರು ಸೃಷ್ಟಿ ಲಯಗಳಲ್ಲಿ ನಾರಾಯಣನು ಮಾಡುವ ಈ ಕಾರ್ಯಗಳಿಗೆ ದ್ವಾರಮಾತ್ರರು. ಇದಕ್ಕೇನು ಪ್ರಮಾಣವೆಂದರೆ, ವೇದವೇ ಪರಮಪ್ರಮಾಣವಾಗಿದೆ. ಹಾಗಾದರೆ ಪಾಶುಪತಾದ್ಯಾಗಮಗಳಲ್ಲಿಯೂ, ಶೈವ ಪುರಾಣಗಳಲ್ಲಿಯೂ ಹೇಳಿರುವ ಶಿವನ ಸರ್ವೋತ್ತಮತ್ವಕ್ಕೆ ಏನು ಗತಿ ಅಂದರೆ, ಇದಕ್ಕೆ ಸಮಾಧಾನವು ಹೀಗಿದೆ.

ಒಂದು ವಾಕ್ಯದ ಅಪ್ರಾಮಾಣ್ಯಕ್ಕೆ ಕಾರಣ ಯಾವುದು ಎಂಬುದನ್ನು ವಿಚಾರಮಾಡಿದಲ್ಲಿ, ಆ ವಾಕ್ಯವನ್ನು ರಚಿಸಿದ ಪುರುಷನಲ್ಲಿನ ಅಜ್ಞಾನ ವಿಪರೀತ ಜ್ಞಾನ ಮೊದಲಾದ ರೂಪ ದೋಷಗಳು ಎಂದು ನಿಶ್ಚಯಿಸಬೇಕು. ಯಾರಿಂದಲೂ ರಚಿತವಲ್ಲದ್ದು ವೇದವು. ಹೀಗಿರುವಲ್ಲಿ ಅಪ್ರಾಮಾಣ್ಯ ಶಂಕೆಗೆ ಕಾರಣ ಎಲ್ಲಿ ಬಂತು? ವಾಕ್ಯವನ್ನು ರಚಿಸಿದವನೇ ಇಲ್ಲವೆಂದಮೇಲೆ ರಚಿಸಿದವನ ಅಜ್ಞಾನ, ವಿಪರೀತಜ್ಞಾನ ಮೂಲಕವಾದ ದೋಷಕ್ಕೂ ಅದರಿಂದ ಉಂಟಾಗುವ ಅಪ್ರಾಮಾಣ್ಯಕ್ಕೂ ಅವಕಾಶವೇ ಇಲ್ಲ. ಆದ್ದರಿಂದಲೇ ವಾದಿರಾಜರು ವೇದದ ವಿಷಯದಲ್ಲಿ 'ಅನಾಶಂಕಿತ ದೋಷತ್ವಾತ್' ಎಂದು ಪದೇಪದೇ ಎಚ್ಚರಿಸಿಹೇಳಿರುತ್ತಾರೆ.

ಪಾಶುಪತ ಸೌರ ಶಾಕ್ತೇಯ ಇವೇ ಮೊದಲಾದ ಆಗಮಗಳು ವೇದವಿರುದ್ಧ ವಾದ್ದರಿಂದ ಪ್ರಮಾಣವಲ್ಲ. ಶೈವಪುರಾಣಗಳೂ ಸಹ ವೇದಮೂಲಕವಾದವುಗಳು ಅಲ್ಲ. ಆದ್ದರಿಂದ ಅವು ಪ್ರಮಾಣವಲ್ಲ.

ಅಪ್ರಾಮಾಣ್ಯ ಶಂಕೆಗೆ ಅವಕಾಶವಿಲ್ಲದ ವೇದದಲ್ಲಿ ಪಶುಪತಿಗೆ ಪಾರ-ತಂತ್ರ್ಯಾದಿ ದೋಷಗಳು ಹೇಳಲ್ಪಟ್ಟಿವೆ. ಆದ್ದರಿಂದ ಅವನು ವೇದಾಂತೋಕ್ತ ಜಗಜ್ಜನ್ಮಾದಿ ಕಾರಣನಾದ ಪರಬ್ರಹ್ಮನು ಅಲ್ಲ ಎಂಬ ಅಭಿಪ್ರಾಯದಿಂದ ಶ್ರೀವಾದಿರಾಜರು ಮೇಲೆ ಹೇಳಿದ ಮೂರು ವೇದವಾಕ್ಯಗಳನ್ನು ಉದಾಹರಿಸಿ ಅವುಗಳನ್ನು ವ್ಯಾಖ್ಯಾನಮಾಡುವುದರ ಮೂಲಕ ವೇದೋಕ್ತ ರುದ್ರನ ದೋಷ ಗಳನ್ನು ಎತ್ತಿತೋರಿಸಿರುತ್ತಾರೆ.

'ಸ್ತುಹಿ ಶ್ರುತಂ ಗರ್ತಸದಂ' ಈ ಶ್ರುತಿಯಿಂದ ಏನು ಸಿದ್ಧವಾಯಿತು ಅಂದರೆ,

೧. ವಿಷ್ಣುವನ್ನು ಸ್ತೋತ್ರಮಾಡು ಎಂದಿರುವುದರಿಂದ ಪಾರತಂತ್ರ್ಯವು

ಸಿದ್ಧವಾಯಿತು ಮತ್ತು ವಿಷ್ಣುವು ರುದ್ರನಿಗೆ ಸ್ವಾಮಿಯೂ ಆಶ್ರಯನೂ ಎಂದು ನಿಶ್ಚಯವಾಯಿತು.

೨. 'ಕುಮಾರಶ್ಚಿತ್ಪಿತರಂ ವಂದಮಾನಂ' ಇದರಿಂದಲೂ ರುದ್ರನು ಪರತಂತ್ರನು. ಅಲ್ಲದೆ ಜನ್ಮಉಳ್ಳವನೂ ಎಂದು ತಿಳಿದುಬಂತು.

೩. 'ತವ ಶ್ರಿಯೇ' ಈ ಶ್ರುತಿಯಿಂದ ರುದ್ರನು ಪರಾಧೀನ ಪದಪ್ರಾಪ್ತಿ ಉಳ್ಳವನೂ, ವಿಷ್ಣುಪಾದೋದಕ ಧಾರಣ ಮಾಡಿ ಪವಿತ್ರನಾದವನು, ಜನ್ಮ ಉಳ್ಳವನೂ ಮತ್ತು ಪರತಂತ್ರನು ಎಂದು ಸಿದ್ಧವಾಯಿತು.

ಹೀಗೆ ರುದ್ರಸೂಕ್ತಗಳಲ್ಲಿಯೇ ವಿಷ್ಣುವಿಗಿಂತಲೂ ರುದ್ರನು ಅಧಮನು ಮತ್ತು ವಿಷ್ಣುವಿನ ಅಧೀನನು ಎಂಬುದಾಗಿರುವುದರಿಂದ ಇದಕ್ಕೆ ವಿರೋಧವಾಗಿ ಹೇಳುವ ಯಾವ ಪೌರುಷೇಯ ವಾಕ್ಯವೇ ಆಗಲಿ ಪ್ರಮಾಣವಲ್ಲ.

ಇದಕ್ಕೆ ಸಮ್ಮತಿಯಾಗಿ ವ್ಯಾಸಶಿಷ್ಯರಾದ ಜೈಮಿನ್ಯಾಚಾರ್ಯರು ರಚಿಸಿರುವ ಕರ್ಮಮೀಮಾಂಸಾ ಸೂತ್ರಗಳಲ್ಲಿ ಒಂದು ಸೂತ್ರ ಉಂಟು. "ವಿರೋಧೇ ತ್ವನಪೇಕ್ಷಂ ಸ್ಯಾದಸತಿ ಹ್ಯನುಮಾನಂ" (೧-೩-೩). ವಿರೋಧೇ ತು ಅನಪೇಕ್ಷಂ ಸ್ಯಾತ್ ಅಸತಿ ಹಿ ಅನುಮಾನಂ ವಿರೋಧೇ ತು=ಸ್ಮೃತಿಯು ಶ್ರುತಿಗೆ ವಿರೋಧವಾಗಿದ್ದಲ್ಲಿ (ಆ ಸ್ಮೃತಿಯು) ಅನಪೇಕ್ಷಂ ಸ್ಯಾತ್=ಅಪ್ರಮಾಣವಾದೀತು (ಅಪ್ರಮಾಣ ವಾಗುತ್ತದೆ).

ಅಸತಿ (ವಿರೋಧೇ)=ವಿರೋಧವಿಲ್ಲದಲ್ಲಿ (ಹಿ) ಅನುಮಾನಂ=ಅಂತಹ ಸ್ಮೃತಿಯು ಹೇಳುವ ವಿಷಯದಲ್ಲಿ ಪ್ರತ್ಯಕ್ಷ ಶ್ರುತಿಯು ಕಂಡುಬರದಿದ್ದಲ್ಲಿ, ಮೂಲಶ್ರುತಿಯು ಇರಬೇಕೆಂದು ಅನುಮೇಯಿಸಬಹುದು.

ಇಯಂ ವಿಸೃಷ್ಟಿರ್ಯತ ಆಬಭೂವ
ಯದಿ ವಾ ದಧೇ ಯದಿ ವಾ ನ ।
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮ
ನ್ತ್ಸೋ ಅಂಗ ವೇದ ಯದಿ ವಾ ನ ವೇದ

(ಋಗ್ವೇದ ೮-೭-೧೭) ॥ ೯೩ ॥

ಇಯಂ ವಿಸೃಷ್ಟಿಃ ಯತಃ ಆಬಭೂವ ಯದಿ ವಾ ದಧೇ ಯದಿ ವಾ ನ ಯಃ ಅಸ್ಯ ಅಧ್ಯಕ್ಷಃ ಪರಮೇ ವ್ಯೋಮನ್ ಸಃ ಅಂಗ ವೇದ ಯದಿ ವಾ ನ ವೇದ.

ಶ್ರೀಮನ್ನ್ಯಾಯಸುಧಾ ರೀತಿಯಿಂದ ಇದರ ಅರ್ಥ (೩-೪-೪).

(ಕುಂಭಕೋಣದ ಪ್ರತಿ ಪುಟ ೫೯೭-ಸಾಂಕ)

ಇಯಂ=ಪ್ರತ್ಯಕ್ಷಾದಿಸಿದ್ಧಾ, ವಿಸೃಷ್ಟಿಃ=ವಿವಿಧಾಸೃಷ್ಟಿಃ, ಯತಃ= ಯತಃ ಹಿರಣ್ಯಗರ್ಭಾತ್, ಆ=ಸಮಂತಾತ್, ಬಭೂವ=ಉಂಟಾಯಿತೋ, ಯಶ್ಚ=ಅಸ್ಯ ಪ್ರಪಂಚಸ್ಯ ಅಧ್ಯಕ್ಷಂ=ಅಧಿಪತಿಃ, ಸೋಽಪಿ ಪರಮಾತ್ಮಾನಂ ಪರಮೇ ವ್ಯೋಮನ್ (ವ್ಯೋಮ್ನಿ) ಹೃದಯಾಕಾಶೇ ಯದಿ ವಾ ದಧೇ ಯದಿ ವಾ ನ ತಥಾ ವೇದ ಯದಿ ವಾ ನ.

ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದ ಈ ವಿವಿಧವಾದ ಸೃಷ್ಟಿಯು ಯಾವ ಹಿರಣ್ಯಗರ್ಭನಿಂದ ಎಲ್ಲೆಡೆಯಲ್ಲಿಯೂ ಆಯಿತೋ ಯಾವ ಹಿರಣ್ಯ ಗರ್ಭನು ಈ ಪ್ರಪಂಚಕ್ಕೆ ಅಧಿಪತಿಯೋ ಇಲ್ಲವೋ ಅವನೂ ಕೂಡ ಪರಮಾತ್ಮನನ್ನು ತನ್ನ ಹೃದಯಾಕಾಶದಲ್ಲಿ ಚೆನ್ನಾಗಿ ಧರಿಸಿದ್ದಾನೆಯೋ ಅವನೂ ಸಹ ಆ ಪರಮಾತ್ಮನನ್ನು ಚೆನ್ನಾಗಿ ತಿಳಿದಿದ್ದಾನೆಯೋ ಇಲ್ಲವೋ ಹೀಗೆಂದಮೇಲೆ ಮಿಕ್ಕ ಜೀವರೆಲ್ಲಾ ಆ ಹಿರಣ್ಯಗರ್ಭನಿಗೆ ಕೆಳಗಿನವರು ಆ ಪರಮಾತ್ಮನನ್ನು ಚೆನ್ನಾಗಿ ತಿಳಿದಿಲ್ಲವೆಂದು ಹೇಳಬೇಕೇನು, ಹೇಳಬೇಕಾದ್ದಿಲ್ಲ.

ಇತಿ ಶ್ರುತಿಶ್ಚತುರ್ಮುಖಸ್ಯಾಪ್ಯಗಮ್ಯಂ ಹರಿಂ ಜಗೌ ।
ಅತಃ ಸರ್ವೋತ್ತಮಸ್ಯಾಸ್ಯ ಸಮೋಽನ್ಯೋಽಸ್ತೀತಿ ಕೋ ವದೇತ್ ॥ ೯೪ ॥

ಯದಿ ಸೃಷ್ಟಿರಿಯಂ ಸರ್ವಾ ಸರ್ವಜ್ಞೇನ ಮಹಾತ್ಮನಾ ।
ಕೃತೇತಿ ಕಥ್ಯತೇ ಪ್ರಾಜ್ಞೈಃ ನ ತು ಸ್ವಸ್ಯೈವ ಕರ್ಮಣಾ ॥ ೯೫ ॥

ತರ್ಹಿ ಸರ್ವಸ್ಯ ಕರ್ತಾ ವಾ ಧರ್ತಾ ವಾ ಯಃ ಪರಃ ಪ್ರಭುಃ ।
ಸಂಹರ್ತಾ ವಾ ಲಯೇ ಪ್ರಾಪ್ತೇ ತಮಿಮಂ ಪುರುಷೋತ್ತಮಮ್ ॥ ೯೬ ॥

ಯೋಽಸ್ಯ ಸರ್ವಸ್ಯ ಜಗತೋಽಪ್ಯಧ್ಯಕ್ಷೋ ದೇವತಾಗ್ರಣೀಃ ।
ಶಯಾನಸ್ಯ ಹರೇಃ ನಾಭಿಪದ್ಮಸ್ಥಸ್ತನ್ಮುಖಾಂಬುಜಾತ್ ॥ ೯೭ ॥

ಶೃಣ್ವಂಶ್ಚ ಸಕಲಾನ್ ವೇದಾನ್ ಬ್ರಹ್ಮಾ ಸೋಽಪಿ ಸ್ವಹೃದ್ಗತೇ ।
ಪರಮೇ ವ್ಯೋಮ್ನಿ ಸತತಂ ವಸನ್ತಂ ವೇದ ವಾ ಪ್ರಭುಮ್ ॥ ೯೮ ॥

ನ ವೇದ ವಾ ಮಹಾತ್ಮಾನಮಿತಿ ಸ್ತೌತಿ ಹರಿಂ ಶ್ರುತಿಃ ।
ಇಯಂ ಹಿ ಸೃಷ್ಟಿರ್ಯತ ಆಬಭೂವೇತ್ಯೇತದರ್ಥಿಕಾ ॥ ೯೯ ॥

ಋಗಿಯಂ ವೈದಿಕೈಃ ಸರ್ವೈಃ ಪಠ್ಯತೇ ಪಿತೃಕರ್ಮಣಿ ।
ಸಾಂತಂ ವೇತ್ತುಮಶಕ್ಯತ್ವಾತ್ ನ ವೇದೇತ್ಯಾಶಯಃ ಶ್ರುತೇಃ ॥ ೧೦೦ ॥

ನೃಶೃಂಗವದವೇದ್ಯತ್ವಾಭಾವಾದ್ವೇದೇತಿ ಚಾಶಯಃ ।
ಏವಂ ಚ ಚತುರೋ ವೇದಾನ್ ಯಶ್ಚತುರ್ಭಿರ್ಮುಖೈಃ ಜಗೌ ॥ ೧೦೧ ॥

ಈದೃಗ್ಬ್ರಹ್ಮಾಗಮ್ಯ ಹರೇಃ ಸಮೋಽನ್ಯೋಽಸ್ತೀತಿ ಕೋ ವದೇತ್ ।

"ಇಯಂ ವಿಸೃಷ್ಟಿಃ" ಎಂಬ ಶ್ರುತಿಯು ಚತುರ್ಮುಖನಿಗೂ ಕೂಡ ಶ್ರೀಹರಿಯ ಮಹಿಮೆಯು ಎಲ್ಲವೂ ತಿಳಿಯದೆಂದು ಹೇಳುತ್ತಿದೆ. ಆದ್ದರಿಂದ ಸರ್ವೋತ್ತಮನಾದ ಈ ಶ್ರೀಹರಿಗೆ ಸಮನಾದವನು ಬೇರೆ ಯಾರಿರುತ್ತಾರೆ? ಯಾರೂ ಇಲ್ಲ. ಬೇರೆಯವನು ಆ ಹರಿಗೆ ಸಮನಿದ್ದಾನೆಂದು ಯಾರು ಹೇಳಿಯಾರು ?

ಈ ಪ್ರಪಂಚದ ಸೃಷ್ಟ್ಯಾದಿವ್ಯಾಪಾರಗಳು ಸರ್ವಜ್ಞನಾದವನೊಬ್ಬನಿಂದ ನಡೆಯುತ್ತಿವೆಯೆಂದು ಪ್ರಾಜ್ಞರು ಹೇಳುತ್ತಾರೆ. ಆ ಪ್ರಾಜ್ಞರ ನುಡಿಯಂತೆ ಸರ್ವಕರ್ತಾ, ಸರ್ವಧಾರಕನಾದ ಪ್ರಭುವು ಪ್ರಳಯದಲ್ಲೂ ಸರ್ವಸಂಹಾರಕನಾಗಿರ ತಕ್ಕವನು ಸರ್ವೋತ್ತಮನಾದ ಪುರುಷೋತ್ತಮನೇ ಆಗಿದ್ದಾನೆ.

ಶೇಷಶಾಯಿಯಾದ ಸರ್ವೋತ್ತಮನಾದ ಆ ಪರಮಾತ್ಮನ ನಾಭಿಪದ್ಮದಲ್ಲಿ ಕುಳಿತು ಆ ಹರಿಯ ಮುಖಕಮಲದಿಂದ ಸಕಲವೇದಗಳನ್ನು ಕೇಳುತ್ತಾ ಇರುವ ಹಿರಣ್ಯಗರ್ಭನೂ ಕೂಡ ತನ್ನ ಹೃದಯಾಕಾಶದಲ್ಲಿ ನೆಲಸಿರುವ ಮಹಾತ್ಮನಾದ ಪ್ರಭುವನ್ನು ಸಮಗ್ರವಾಗಿ ತಿಳಿದಿದ್ದಾನೆಯೋ ಇಲ್ಲವೋ ಎಂದು ಶ್ರುತಿಯು ಹರಿಯನ್ನು ಸ್ತೋತ್ರ ಮಾಡುತ್ತಲಿದೆ. ಈ ಅರ್ಥವನ್ನುಳ್ಳ "ಇಯಂ ವಿಸೃಷ್ಟಿರ್ಯತ ಆಬಭೂವ" ಎಂಬ ಶ್ರುತಿಯು ವೈದಿಕರಿಂದ ಪಿತೃಕರ್ಮದಲ್ಲಿ ಪಠಿಸಲ್ಪಡುತ್ತದೆ. ಬ್ರಹ್ಮನು ಪರಮಾತ್ಮನನ್ನು ತಿಳಿದಿಲ್ಲ ಎಂದು ಹೇಳುವದರಲ್ಲಿ ಅವನು ಪೂರ್ಣವಾಗಿ ಹರಿಯನ್ನು ತಿಳಿದಿಲ್ಲವೆಂದು ಶ್ರುತಿಗೆ ಅಭಿಪ್ರಾಯವಾಗಿದೆ. ಆ ಸರ್ವೋತ್ತಮನಾದ ಭಗವಂತನು ಅನಂತನಾದ್ದರಿಂದ ಇತರ ಯಾರಿಗೂ ಅವನನ್ನು ಸಾಕಲ್ಯೇನ (ಸಮಗ್ರವಾಗಿ ಪೂರ್ತಿಯಾಗಿ) ತಿಳಿಯುವುದು ಅಸಾಧ್ಯ. 'ವೇದ' ವು ತಿಳಿವನು ಎಂದೂ ಹೇಳಿದೆಯಲ್ಲಾ ಅಂದರೆ ತಿಳಿಯಲಿಲ್ಲವೆಂದರೆ ಮನುಷ್ಯನ ಕೊಂಬು

ಇಲ್ಲದಿರುವುದರಿಂದ ತಿಳಿವಳಿಕೆಗೆ ಹೇಗೆ ವಿಷಯವಲ್ಲವೋ ಹಾಗೆ ಪರಮಾತ್ಮನು ಆಗಿಲ್ಲ. ಅವನನ್ನು ಬ್ರಹ್ಮನು ತಿಳಿದಿದ್ದಾನೆ. ಆದರೆ ಪೂರ್ಣವಾಗಿ ತಿಳಿದಿಲ್ಲವೆಂದು ತಿಳಿಸುವುದಕ್ಕಾಗಿ, 'ವೇದ' ತಿಳಿದಿದ್ದಾನೆ ಸ್ವಲ್ಪವೇ ಅರಿತಿದ್ದಾನೆ. (ಏಕದೇಶ), 'ನ ವೇದ' ಪೂರ್ಣವಾಗಿ ತಿಳಿದಿಲ್ಲ ಎಂದೇ ಅಭಿಪ್ರಾಯವು. ನಾಲ್ಕುಮುಖ ಗಳಿಂದ ನಾಲ್ಕು ವೇದಗಳನ್ನು ಪಠಿಸುವ ಚತುರ್ಮುಖಬ್ರಹ್ಮನೂ ಕೂಡ ಯಾವ ಹರಿಯ ಮಹಿಮೆಯನ್ನು ಏಕದೇಶಮಟ್ಟಿಗೆ ತಿಳಿದಿದ್ದಾನೋ ಸಾಕಲ್ಯೇನ ತಿಳಿದಿಲ್ಲವೋ ಅಂಥಾ ಅಪಾರ ಮಹಿಮೆಯನ್ನುಳ್ಳ ಹರಿಗೆ ಸಮಾನನು ಬೇರೆ ಒಬ್ಬನಿರುವನೆಂದು ಯಾವನು ಹೇಳಿಯಾನು ?

**ಅನಾಶಙ್ಕಿತದೋಷತ್ವಾಚ್ಛ್ರುತಿರೇಷಾ ಪುರಾತನೀ ॥ ೧೦೨ ॥**

**ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ ತುಷೋಪಮಮ್ ।**
**ಕಿಂ ಕುರ್ಯಾತ್ಪೌರುಷಂ ವಾಕ್ಯಂ ವದನ್ತು ಪ್ರತಿವಾದಿನಃ ॥ ೧೦೩ ॥**

ಇದಕ್ಕೆ ಆಗಲೇ ಅರ್ಥವು ಹೇಳಲ್ಪಟ್ಟಿದೆ.

ಉಭಾ ಜಿಗ್ಯಥುರ್ನ ಪರಾಜಯೇಥೇ

ನ ಪರಾಜಿಗ್ಯೇ ಕತರಶ್ಚ ನೈನೋಃ ।

ಇಂದ್ರಶ್ಚ ವಿಷ್ಣೋ ಯದಪಸ್ಪೃಧೇಥಾಂ

ತ್ರೇಧಾ ಸಹಸ್ರಂ ವಿತದೈರಯೇಥಾಮ್

(ಋ ಮಂ. ೫, ಸೂ. ಮಂತ್ರ ೧೩) ॥ ೧೦೪ ॥

ಪದವಿಭಾಗ—

ಉಭಾ ಜಿಗ್ಯಥುಃ ನ ಪರಾ ಜಯೇಥೇ ಇತಿ ನ ಪರಾಜಿಗ್ಯೇ ಕತರಃ ಚ ನ ಏನೋಃ ಇನ್ದ್ರಃ ಚ ವಿಷ್ಣೋ ಇತಿ ಯತ್ ಅಪಸ್ಪೃಧೇಥಾಂ ತ್ರೇಧಾ ಸಹಸ್ರಂ ವಿ ತತ್ ಐರಯೇಥಾಮ್.

**ವಿಷ್ಣುಸೂಕ್ತಗತಾ ಸೇಯಂ ವಾಣೀ ಸ್ತೌತಿ ರಮಾಪತಿಮ್ ।**
**ಉಭಾ ಉಭೌ ಯುವಾಮಿಂದ್ರೋ ವಿಷ್ಣುಃ ಸರ್ವಂ ವಿಜಿಗ್ಯಥುಃ ॥ ೧೦೫ ॥**

ವಿಷ್ಣುಸೂಕ್ತದಲ್ಲಿನ ಈ ವಾಣಿಯು ರಮಾಪತಿಯನ್ನು ಸ್ತೋತ್ರ ಮಾಡುತ್ತಲಿದೆ. ಈ ಮುಂದಿನ ಭಾಗದಿಂದ ಋಕ್ಕಿನ ಅರ್ಥವನ್ನು ವಿವರಿಸಲಾಗಿದೆ.

ಋಗರ್ಥ ವಿವರಣ—

ಉಭೌ ಯುವಾಂ = ನೀವು ಇಬ್ಬರು, ಇಂದ್ರ ಮತ್ತು ವಿಷ್ಣುವು ನೀವಿಬ್ಬರೂ, ಸರ್ವಂ = ಸರ್ವವನ್ನೂ (ವಿ) ಜಿಗ್ಯಥುಃ = (ಶತ್ರುಗಳನ್ನು) ಜಯಿಸಿದ್ದೀರಿ.

ಛಾಂದಸತ್ವಾತ್ ಕ್ವಚಿಲ್ಲೋಪಃ ಕ್ವಚಿದ್ಭವತಿ ಚಾಗಮಃ ।
ಆವಿಷ್ಟಾಂಶೋ ಬಹಿಷ್ಠಾಂಶ ಇತಿ ರೂಪದ್ವಯಾನ್ವಿತಃ ॥ ೧೦೬ ॥

ವಿಷ್ಣೋಃ ಪದದ್ವಯೇನಾತ್ರ ಕಥ್ಯತೇ ನ ಪುರಂದರಃ ।

ವೇದ ಅಪೌರುಷೇಯವಾದ್ದರಿಂದ ಕೆಲವು ಕಡೆ ಹೆಚ್ಚಾಗಿ ಪದಗಳು ಸೇರುತ್ತವೆ. ಕೆಲವು ಕಡೆ ಲೋಪವಾಗುತ್ತದೆ. ಮೇಲಿನ ಋಕ್ಕಿನಲ್ಲಿ ಇಂದ್ರಶಬ್ದದಿಂದಲೂ ವಿಷ್ಣುಶಬ್ದದಿಂದಲೂ ವಿಷ್ಣುವಿನ ಇಂದ್ರಾವಿಷ್ಟವಾದ ವಿಷ್ಣುವಿನ ರೂಪವೂ, ವಿಷ್ಣು ಎಂಬ ಪದದಿಂದ ಬಹಿಷ್ಟವಾದ ರೂಪದ ಅಂಶವೂ ಹೇಳಲ್ಪಟ್ಟಿವೆ. ಅಂದರೆ ಇಂದ್ರ ಎಂದು ಹೇಳಿರುವುದು ಪ್ರಸಿದ್ಧನಾದ ಪುರಂದರನಲ್ಲ. ಇಂದ್ರಾವಿಷ್ಟನಾದ ವಿಷ್ಣುವಿನ ರೂಪವನ್ನೇ ಹೇಳುತ್ತಿದೆ. ಈ ರೀತಿ ಅರ್ಥವನ್ನು ಹೇಳಲು ಕಾರಣವನ್ನು ಮುಂದಿನ ಶ್ಲೋಕದಲ್ಲಿ ತಿಳಿಸುತ್ತಾರೆ.

ನ ಜಿಗಾಯ ಬಲಿಂ ಯೋಽಸೌ ಪರಾಜಿಗ್ಯೇ ಬಲೇರ್ಬಲಾತ್ ॥ ೧೦೭ ॥

ತಸ್ಯೇಂದ್ರಸ್ಯ ಕಥಾಂ ವಿಷ್ಣುಸೂಕ್ತೇ ಕಃ ಕಥಯೇತ್ ಬುಧಃ ।
ಏತಯೋಃ ಸಮತಾಸಿದ್ಧ್ಯೈ ಶ್ರುತಿರಿಂದ್ರಂ ಪುರಾ ಜಗೌ ॥ ೧೦೮ ॥

ಯುವಯೋರೇತಯೋರೇನೋಃ ಕತರಸ್ತ್ವೇಕ ಏವ ಚ ।
ಕುತೋಽಪಿ ನ ಪರಾಜಿಗ್ಯೇ ಯದ್ಯುವಾಂ ಲೀಲಯಾ ಮಿಥಃ ॥ ೧೦೯ ॥

ಅಪಸ್ಪೃಧೇಥಾಂ ಸ್ಪರ್ಧಾಂ ಚ ಚಕ್ರಾಥೇ ಚ ಸ್ಥಳೇ ಸ್ಥಳೇ ।
ಅತ್ರಾಪೇತ್ಯುಪಸರ್ಗೇಣ ಸ್ಪರ್ಧಾಂ ಧಿಕ್ಕುರುತೇ ಶ್ರುತಿಃ ॥ ೧೧೦ ॥

ತತ್ತೇನ ಹೇತುನಾ ತ್ರೇಧಾಗತಿಯೋಗ್ಯಸ್ವಭಾವತಃ ।
ಸ್ಥಿತತ್ರಿವಿಧಜೀವಾನಾಂ ಸಹಸ್ರಪದಸೂಚಿತಾನ್ ॥ ೧೧೧ ॥

ಗಣಾನನಂತಾನ್ ತ್ರಿವಿಧಾನ್ ಅಂತೇ ತ್ರೇಧಾ ಫಲಾಪ್ತಯೇ ।
ಹೃದಿ ಪ್ರವಿಶ್ಯ ತದ್ಬುದ್ಧಿಂ ವಿಶಬ್ದೋಕ್ತವಿಭಾಗತಃ ॥ ೧೧೨ ॥

ತ್ರೇಧಾ ತ್ರೇಧೈವೇರಯೇಥಾಂ ಪ್ರೇರಯೇತಾಂ ಯುವಾಮಪಿ ।
ಏಕಸ್ಯೈವ ತ್ರಿವಾರಂ ಚ ಯದ್ದತ್ತಂ ಪ್ರೇಮತೋ ನೃಭಿಃ ॥ ೧೧೩ ॥

ಅನ್ನಂ ಸುವರ್ಣಂ ವಸ್ತ್ರಂ ವಾ ತಥಾ ನೇದಂ ತ್ರಿಧಾ ಫಲಮ್ ।
ಕಿಂತೂತ್ತಮಸ್ಯ ಮುಕ್ತ್ಯಾಖ್ಯಸುಖರೂಪಮಹಾಫಲಮ್ ॥ ೧೧೪ ॥

ಮಧ್ಯಮೇ ಮಧ್ಯಮಫಲಂ ಅಧಮೇ ದುಃಖಮೇವ ಚ ।
ಇತ್ಥಂ ಫಲವಿಶೇಷಂ ಚ ಸ್ಪಷ್ಟಂ ಸೂಚಯಿತುಂ ಶ್ರುತಿಃ ॥ ೧೧೫ ॥

ವಿಶೇಷಾರ್ಥಂ ವದಂತಂ ವೀತ್ಯುಪಸರ್ಗಮುಪಾದದೇ ।
ಲೀಲೇತಿ ಬುದ್ಧಿಂ ದಿಶತಂ ಸತಾಂ ಮುಕ್ತಿಫಲಾರ್ಥಿನಾಮ್ ॥ ೧೧೬ ॥

ದ್ವಿಷಾಂ ದ್ವೇಷಯುತಾವೇತೌ ಇತ್ಯಸತ್ಸು ಚ ದುರ್ಮತಿಮ್ ।
ತೇಷಾಮಂತೇ ತಮೋ ದಾತುಂ ತಥಾ ಮಿಶ್ರಸ್ವರೂಪಿಣಾಮ್ ॥ ೧೧೭ ॥

ಸತಾಂ ಯೋಗೇ ತದ್ವದೇವ ಸುಮತಿಂ ದಿಶತಂ ಯುವಾಮ್ ।
ಖಲೈರ್ಯೋಗೇ ತು ಖಲವತ್ ಕುಮತಿಂ ದಿಶತಂ ಯುವಾಮ್ ॥ ೧೧೮ ॥

ಸುಖದುಃಖಾವಾಪ್ತಿರೂಪಮಿಶ್ರತದ್ಗತಿಸಿದ್ಧಯೇ ।

ಅಲ್ಲಲ್ಲಿ ಪುರಾಣಾದಿಗಳಲ್ಲಿ ವಿಷ್ಣುವಿನ ರೂಪಗಳು ಪರಸ್ಪರ ಸ್ಪರ್ಧೆಯಿಂದ ಯುದ್ಧ ಮಾಡಿದಂತೆ ವರ್ಣಿತವಾಗಿದೆ. ಈ ವಿಷ್ಣು ಸೂಕ್ತದಲ್ಲಿರುವ ಇಂದ್ರಶಬ್ದವು ದೇವತೆಗಳ ರಾಜನಾದ ಪ್ರಸಿದ್ಧನಾದ ಇಂದ್ರನನ್ನು ಹೇಳುತ್ತಿಲ್ಲ. ಈ ಇಂದ್ರನು ಬಲಿಯಿಂದ ಸೋತಿದ್ದಾನೆ. ಇಂತಹ ಇಂದ್ರನ ವಿಚಾರವು ವಿಷ್ಣುಸೂಕ್ತದಲ್ಲಿ ಬರಲು ಕಾರಣವೇ ಇಲ್ಲ. ಆದರೆ ಪರಸ್ಪರ ಪರಮಾತ್ಮನ ರೂಪಗಳ ಘರ್ಷಣೆಯ ವಿಚಾರವು ಕೇವಲ ಲೀಲಾಮಾತ್ರವೆಂದೇ ತಿಳಿಯಬೇಕು. ಉದಾಹರಣೆಗಾಗಿ ದಾಶರಥಿರಾಮ ಪರಶುರಾಮರ ವಿಚಾರವು ಪ್ರಸಿದ್ಧವಾಗಿದೆ. ಇಂತಹ ಸಂದರ್ಭಗಳಲ್ಲಿ ಒಬ್ಬ ರನ್ನೊಬ್ಬರು ಜಯಿಸಲಿಲ್ಲ. ಸ್ವರೂಪ ಒಂದೇ ಆದರೂ ಯೋಗ್ಯತಾನುಸಾರ ಫಲ ಕೊಡುವುದಕ್ಕಾಗಿ ಪರಮಾತ್ಮನು ದಶರಥರಾಮನು ಪರಶುರಾಮನನ್ನು ಜಯಿಸಿದನು ಎಂದು ಅಸುರರ ಮೋಹಕ್ಕಾಗಿ ತೋರಿಸುತ್ತಾನೆ. ಅಸುರರ ಬುದ್ಧಿಯನ್ನು

ಪ್ರೇರಿಸುತ್ತಾನೆ. ಇದು ಪರಮಾತ್ಮನ ಲೀಲಾ ಎಂದು ತಿಳಿಯುನಂತೆ ಮುಕ್ತಿ ಯೋಗ್ಯರ ಬುದ್ಧಿಯನ್ನು ಪ್ರೇರಿಸುತ್ತಾನೆ. ನಿತ್ಯಸಂಸಾರಿಗಳಿಗೆ ಒಂದಾವರ್ತಿ ದೇವತೆಗಳ ಪಕ್ಷಪಾತ ಬುದ್ಧಿಯನ್ನೂ, ಮತ್ತೊಂದಾವರ್ತಿ ದೈತ್ಯರ ಪಕ್ಷಪಾತ ಬುದ್ಧಿಯನ್ನೂ ಅಂತೂ ಮಿಶ್ರವಾದ ಅವರ ಸ್ವರೂಪಕ್ಕೆ ತಕ್ಕಂತೆ ಬುದ್ಧಿಯನ್ನೂ ಪ್ರೇರಿಸುತ್ತಾನೆ. ಹೀಗೆ ಏಕೆ ಪರಮಾತ್ಮನ ವ್ಯಾಪಾರವಿದೆಯೆಂದಲ್ಲಿ ಸ್ವರೂಪದಿಂದ ಮುಕ್ತಿಯೋಗ್ಯರಿಗೆ ಮುಕ್ತಿಯನ್ನು ಸ್ವರೂಪದಿಂದ ದೈತ್ಯರೇ ಮೊದಲಾದ ತಾಮಸ ಜೀವರಿಗೆ ತಮಸ್ಸನ್ನೂ, ಮೇಲಿನ ಎರಡು ಬಗೆಗೂ ಸೇರದ ನಿತ್ಯಸಂಸಾರಿ ಜೀವರಿಗೆ ಮಿಶ್ರಫಲವನ್ನೂ ಕೊಡುವ ಉದ್ದೇಶದಿಂದ ಅವರವರ ಯೋಗ್ಯತೆಗೆ ತಕ್ಕಂತೆ ಬುದ್ಧಿಯನ್ನು ಪ್ರೇರಿಸುತ್ತಾನೆ.

ಇತಿ ವಿಷ್ಣೋಃ ಸೂಕ್ತಗತಾ ವಾಣೀ ಸರ್ವತ್ರ ತಂ ಹರಿಂ ॥ ೧೧೯ ॥

ಯಸ್ಮಾಜ್ಜಯಿನಮೇವಾಹ ನ ಪರಾಜಯಿನಂ ಕ್ವಚಿತ್ ।
ಇತ್ಥಂ ಮಹಾಸಮರ್ಥಸ್ಯ ಹರೇಃ ಕೋऽಸ್ಯ ಸಮೋ ವದ ॥ ೧೨೦ ॥

ಹೀಗೆ ವಿಷ್ಣುಸೂಕ್ತದಲ್ಲಿನ ಈ ವಾಣಿಯು ಎಲ್ಲೆಡೆಯಲ್ಲಿಯೂ ಹರಿಯು ಜಯಶಾಲಿಯೆಂದೂ ಎಲ್ಲಿಯೂ ಅವನಿಗೆ ಪರಾಜಯವಿಲ್ಲವೆಂದೂ ಹೇಳುತ್ತದೆ, ಆದುದರಿಂದ ಇಂತಹ ನಿರತಿಶಯವಾದ ಮಹಾಸಾಮರ್ಥ್ಯ ಉಳ್ಳ ಶ್ರೀಹರಿಗೆ ಯಾರು ಸಮರು, ಹೇಳು.

ಯುಯುತ್ಸತಾಂ ಕುತ್ರಚಿದಾತತಾಯಿನಾಂ
ಜಯಸ್ಸದೈಕತ್ರ ನ ವೈ ಪರಾಜಯಃ ।
ವಿನೈಕಮುತ್ಪತ್ತಿಲಯಸ್ಥಿತೀಶ್ವರಂ
ಸರ್ವಜ್ಞಮಾದ್ಯಂ ಪುರುಷಂ ಪುರಾತನಂ
(ಭಾ. ೬-೧೩-೭) ॥ ೧೨೧ ॥

ಇಂದ್ರ-ವೃತ್ರಾಸುರರ ಯುದ್ಧದಲ್ಲಿ ವೃತ್ರನು ಗದೆಯಿಂದ ಇಂದ್ರನ ಗಲ್ಲದಲ್ಲಿ ಹೊಡೆದಾಗ ಇಂದ್ರನ ವಜ್ರಾಯುಧವು ಕೈಯಿಂದ ಕೆಳಗೆ ಬಿತ್ತು. ಆಗ ಇಂದ್ರನು ಶತ್ರುವಿನ ಮುಂದೆ ಕೈಯ್ಯಲ್ಲಿನ ತನ್ನ ಆಯುಧವು ಬಿದ್ದದ್ದರಿಂದ ನಾಚಿ ಆಯುಧ ವನ್ನು ತಿರುಗಿ ಕೈಯ್ಯಲ್ಲಿ ಹಿಡಿಯದಿರಲು ವೃತ್ರನು ಹೀಗೆ ಹೇಳುತ್ತಾನೆ—

ತಮಾಹ ವೃತ್ರೋ ಹರ ಆತ್ತವಜ್ರೋ ಜಹಿಸ್ವ ಶತ್ರುಂ ನ ವಿಷಾದಕಾಲಃ ಯುತ್ಸತಾಂ ಇತ್ಯಾದಿ || ೬ ||

ಎಲೋ ಇಂದ್ರನೇ! ವಜ್ರಾಯುಧವನ್ನು ಹಿಡಿದು ನಿನ್ನ ಶತ್ರುವಾದ ನನ್ನನ್ನು ಕೊಲ್ಲು. ಕೈಯ್ಯಿಂದ ವಜ್ರಾಯುಧವು ಕೆಳಗೆ ಬಿತ್ತೆಂದು ವಿಷಾದಪಡುವುದಕ್ಕೆ ಇದು ಕಾಲವಲ್ಲ.

ಆಯುಧಪಾಣಿಗಳಾಗಿ ಯುದ್ಧ ಮಾಡುವವರಿಗೆ ಯಾವಾಗಲೂ ಯಾವುದಾದರೂ ಒಂದು ಕಡೆಯಲ್ಲಿಯೇ ಜಯವಿದ್ದು ಅಪಜಯವಿಲ್ಲದೇ ಇರುವುದು ಕಂಡಬಂದಿಲ್ಲ. ಅಪಯಜಯವಿಲ್ಲದೆ ಯಾವಾಗಲೂ ಜಯವೇ ಇರುವುದು ಪರಮಾತ್ಮನಲ್ಲಿ ಮಾತ್ರ ಕಂಡುಬಂದಿದೆ. ಸೃಷ್ಟಿಸ್ಥಿತಿ ಲಯಕರ್ತನೂ ಸರ್ವಜ್ಞನೂ ಆದಿಪುರುಷನೂ ಸನಾತನನೂ ಆದ ಈಶ್ವರನಲ್ಲಿ ಮಟ್ಟಿಗೆ ಸದಾ ಜಯವಿರುವುದೇ ಹೊರತು ಮತ್ತಾರಲ್ಲೂ ಹೀಗೆ ಇಲ್ಲ.

**ಇತಿ ಭಾಗವತೇ ವಾಕ್ಯಂ ಶ್ರುತೇರರ್ಥಂ ಪ್ರಶಂಸತಿ ।**
**ಅತೋಽಸ್ಮದುಕ್ತಶ್ರುತ್ಯರ್ಥೇ ಕಥಂ ಶಂಕಾ ಭವೇದ್ವದ || ೧೨೨ ||**

ಹೀಗೆ ಭಾಗವತದಲ್ಲಿನ ಈ ವಾಕ್ಯವು ಶ್ರುತಿಯ ಅರ್ಥವನ್ನು ಚನ್ನಾಗಿ ಹೇಳುತ್ತಲಿದೆ. ಆದ್ದರಿಂದ ನಾವು ಹೇಳಿದ ಈ ಶ್ರುತಿಯ ಅರ್ಥದ ವಿಷಯದಲ್ಲಿ ಈ ಅರ್ಥ ಸರಿಯೋ ಅಲ್ಲವೋ ಎಂಬ ಶಂಕೆಯು ಹೇಗೆ ಉತ್ಪನ್ನವಾದೀತು ಹೇಳು.

ಅವತಾರಿಕಾ—

ಚತುರ್ಮುಖ ಬ್ರಹ್ಮನೂ ಸಹ ಶ್ರೀಹರಿಯನ್ನಾಶ್ರಯಿಸಿರುವನೆಂದು ತಿಳಿಸುತ್ತಾರೆ.

**ವೇದಾಪಹಾರ್ಯಸುರತೋ ಬ್ರಹ್ಮಾ ಪೂರ್ವಂ ಪರಾಜಿತಃ ।**
**ತಜ್ಜಯಾರ್ಥಂ ಹಯಗ್ರೀವಂ ಭಕ್ತ್ಯಾ ಕಿಂ ನಾಶ್ರಿತೋ ವದ || ೧೨೩ ||**

ಬ್ರಹ್ಮನು ಪೂರ್ವದಲ್ಲಿ ವೇದಾಪಹಾರಿ ಅಸುರನಿಂದ ಪರಾಜಿತನಾಗಿ ಆ ಅಸುರನನ್ನು ಜಯಿಸುವುದಕ್ಕಾಗಿ ಭಕ್ತಿಯಿಂದ ಹಯಗ್ರೀವನನ್ನು ಆಶ್ರಯಿಸಲಿಲ್ಲವೇ ಹೇಳು. ಚತುರ್ಮುಖ ಬ್ರಹ್ಮನು ಇದರಿಂದ ಅಸ್ವತಂತ್ರನೆಂದೂ ಹರಿಯನ್ನು ಉಪಜೀವಿಸಿಕೊಂಡಿರುವನೆಂದೂ ಸಿದ್ಧಿಸಿತು.

ಅವತಾರಿಕಾ—

ಉಮಾಪತಿಯೂ ಸಹ ಕಷ್ಟಕಾಲದಲ್ಲಿ ಶ್ರೀಹರಿಯನ್ನೇ ಆಶ್ರಯಿಸಿ ತನಗೆ ಒದಗಿದ್ದ ಕಷ್ಟದಿಂದ ಬಿಡುಗಡೆಯನ್ನು ಪಡೆದಿದ್ದಾನೆ.

ವೃಕಾಸುರಾತ್ಪರಾ ಭೂತೋ ದಿಕ್ಷು ಧಾವನ್ನುಮಾಪತಿಃ ।
ಅಶಕ್ತಸ್ತಜ್ಜಯಾಯಾನ್ತೇ ವಿಷ್ಣುಂ ಕಿಂ ನಾಶ್ರಿತೋ ವದ ॥ ೧೨೪ ॥

ವೃಕಾಸುರನಿಂದ ಪರಾಜಿತನಾಗಿ ದಿಕ್ಕುದಿಕ್ಕಿನಲ್ಲಿ ಓಡಿಓಡಿ ಎಲ್ಲಿಯೂ ಆ ಅಸುರನನ್ನು ಜಯಿಸುವ ಉಪಾಯವು ಸಿಗದೇ ಇರಲು ಕೊನೆಯಲ್ಲಿ ಶ್ರೀವಿಷ್ಣು ವನ್ನು ಆಶ್ರಯಿಸಲಿಲ್ಲವೇನು ಹೇಳು.

ಸ್ವಭಕ್ಷಣಾಯಾಗತಾಭ್ಯೋ ಯೋಗಿನೀಭ್ಯಃ ಪರಾಜಿತಃ ।
ಅಶಕ್ತಶ್ಚ ಜಯೇ ತಾಸಾಂ ಮೇಷವೇಷಧರೋ ಹರಃ ॥ ೧೨೫ ॥
ತಜ್ಜಯಾರ್ಥಂ ನಾರಸಿಹ್ಮಮನ್ತೇ ಕಿಂ ನಾಶ್ರಿತೋ ವದ ।

ತನ್ನನ್ನು ಭಕ್ಷಿಸುವುದಕ್ಕೆ ಬಂದ ಯೋಗಿನಿಯರಾದ ಸ್ತ್ರೀಯರಿಂದ ಪರಾಜಿತ ನಾಗಿ ಅವರನ್ನು ಜಯಿಸಲು ಅಶಕ್ತನಾದಾಗ ಮೇಕೆಯ ವೇಷವನ್ನು ಧರಿಸಿದ ರುದ್ರನು ಅವರನ್ನು ಜಯಿಸುವುದಕ್ಕಾಗಿ ಕೊನೆಯಲ್ಲಿ ಶ್ರೀ ನರಸಿಹ್ಮ ದೇವರನ್ನು ಆಶ್ರಯಿಸಲಿಲ್ಲವೇನು ಹೇಳು. ಹಿಂದೆ ರುದ್ರನು ತಪಸ್ಸನ್ನು ಮಾಡುತ್ತಿದ್ದಾಗ ಯೋಗಿನಿಗಳೆಂಬ ದುಷ್ಟಶಕ್ತಿಗಳು ಈಶ್ವರನನ್ನು ನುಂಗಲು ಬಂದವು. ರುದ್ರನು ತನ್ನ ನಿಜವಾದ ವೇಷವನ್ನು ಮರೆಮಾಚಿ ಕುರಿರೂಪವನ್ನು ತಾಳಿದನು. ಆದಾಗ್ಯೂ ದುಷ್ಟಶಕ್ತಿಗಳಿಂದ ಕಾಟವು ತಪ್ಪಲಿಲ್ಲ. ಕಡೆಗೆ ನಾರಾಯಣನನ್ನೇ ಶರಣು ಹೊಂದಿದನು. ಆಗ ನಾರಾಯಣನು ಆ ಕುರಿಯ ರೂಪವನ್ನೇ ವಾಹನವನ್ನಾಗಿ ಮಾಡಿಕೊಂಡು ಆ ದುಷ್ಟಶಕ್ತಿಗಳನ್ನು ಸಂಹರಿಸಿ ರುದ್ರನನ್ನು ಕಾಪಾಡಿದನು.

ಅವತಾರಿಕಾ—

ಸಕಲದೇವತೆಗಳೂ ಸಹ ದೈತ್ಯರಿಂದ ಪರಾಜಿತರಾದಾಗ ಶ್ರೀಹರಿಯನ್ನೇ ಮರೆಹೊಕ್ಕಿ ಶ್ರೀಹರಿಯಿಂದ ರಕ್ಷಿಸಲ್ಪಟ್ಟರು.

ಅಸುರೇಭ್ಯಃ ಪರಾಭೂತೈಃ ಸುರೈರಭ್ಯರ್ಥಿತೋ ಹರಿಃ ॥ ೧೨೬ ॥
ದಶಾವತಾರಾನ್ದೇವಾರ್ಥೇ ಕೃಷ್ಣಃ ಕಿಂ ನಾಕರೋದ್ವದ ।

ಅಸುರರಿಂದ ಸೋತ ದೇವತೆಗಳಿಂದ ಪ್ರಾರ್ಥಿತನಾಗಿ ಶ್ರೀಕೃಷ್ಣನು ದೇವಾರ್ಥವಾಗಿ ದಶಾವತಾರಗಳನ್ನು ಮಾಡಲಿಲ್ಲವೇನು ಹೇಳು.

ಬ್ರಹ್ಮರುದ್ರಾದಿ ಸರ್ವದೇವತೆಗಳಿಗೂ ಶ್ರೀಕೃಷ್ಣನು ಆಶ್ರಯನು. ಅವರಿಗೆ ಭಯ ಒದಗಿದಾಗಲೆಲ್ಲಾ ಆ ಭಯವನ್ನು ಹೋಗಿಸುವ ಶಕ್ತಿಯುಳ್ಳವನು. ಹೀಗಿರುವಾಗ ಬ್ರಹ್ಮನೇ ಆಗಲಿ ರುದ್ರನೇ ಆಗಲಿ ಮತ್ತಾವ ದೇವನೇ ಆಗಲಿ ಕೃಷ್ಣನಿಗೆ ಸಮನಾದಾರೇನು? ಯಾವನೂ ಶ್ರೀಹರಿಗೆ ಸಮನಲ್ಲ. ಹಿಂದೆಯೂ ಇಂದೂ ಮುಂದೆಯೂ ಎಂದೆಂದಿಗೂ ಶ್ರೀಹರಿಗೆ ಅಧಿಕರೂ ಇಲ್ಲ ಸಮರೂ ಇಲ್ಲವೇ ಇಲ್ಲ.

**ಏವಂ ಚ ಸರ್ವಜೇತೃತ್ವಂ ಹರೇರ್ವಾನ್ಯಸ್ಯ ವಾ ವದ ॥ ೧೨ ॥**

ಹೀಗಿರುವುದರಿಂದ ಸರ್ವರನ್ನೂ ಜಯಿಸುವ ಶಕ್ತಿಯು ಹರಿಗುಂಟೋ ಮತ್ತಾರಿಗಾದರೂ ಉಂಟೋ ಹೇಳು. ಹರಿಗೊಬ್ಬನಿಗೇ ಉಂಟು. ಇನ್ನು ಯಾರಿಗೂ ಇರುವುದಿಲ್ಲ.

ಅವತಾರಿಕಾ—

ಸರ್ವತ್ರ ಶ್ರೀಹರಿಯೇ ವಿಜಯಶಾಲಿಯೆಂದು ಹೇಳುತ್ತಾರೆ.

**ಸರ್ವೇಭ್ಯೋಽಪ್ಯಜಿತತ್ವಂ ಚ ಹರೇರ್ವಾನ್ಯಸ್ಯ ವಾ ವದ ।**

ಸರ್ವರಿಂದಲೂ ಜಯಿಸಲ್ಪಡದೇ ಇರುವುದು ಹರಿಗೋ ಇನ್ನಾರಿಗಾದರೂ ಇದೆಯೋ ಹೇಳು. ಸರ್ವರಿಂದಲೂ ಜಯಿಸಲ್ಪಡದೆ ಇರುವನಾದ್ದರಿಂದಲೇ ಶ್ರೀಹರಿಗೆ ಅಜಿತನೆಂಬ ನಾಮವು ಸುಪ್ರಸಿದ್ಧವಾಗಿದೆ.

ನ ಕೇನಾಪಿ ಜಿತಃ ಇತಿ ಅಜಿತಃ

ವೇಧಾಸ್ಸ್ವಾಂಗೋಽಜಿತಃ ಕೃಷ್ಣೋ (ವಿ. ಸಹಸ್ರನಾಮ ೭೨)

ವೃಕಾಸುರಕಥಾಭಾಗವು ಈ ರೀತಿ ಇದೆ. ೧೪ ನೇ ಶ್ಲೋಕದಲ್ಲಿ ಶ್ರೀವಾದಿರಾಜರು ವೃಕಾಸುರನ ಸಂಹಾರದ ವಿಚಾರವನ್ನು ಉದಾಹರಿಸಿದ್ದಾರೆ. ಇದರಿಂದ ಶ್ರೀವಿಷ್ಣುವಿನ ಅಪರಿಮಿತ ಸಾಮರ್ಥ್ಯವನ್ನೂ ಅದರಿಂದಲೇ ಸರ್ವೋತ್ತಮತ್ವವನ್ನೂ ಸಾಧಿಸಿದ್ದಾರೆ ವೃಕಾಸುರನಿಂದ ಉಂಟಾದ ಆಪತ್ತಿನಿಂದ ಶಿವನನ್ನು ಶ್ರೀವಿಷ್ಣುವು ಬಿಡುಗಡೆ ಮಾಡಿರುವ ಕಾರಣದಿಂದಲೂ ವಿಷ್ಣುವೇ ಶಿವನಿಗಿಂತಲೂ ಉತ್ತಮನೆಂಬುದು ಸಿದ್ಧವಾಗಿದೆ. ಶ್ರೀಮದ್ಭಾಗವತ ದಶಮಸ್ಕಂಧದಲ್ಲಿ

ಉತ್ತರಾರ್ಧದಲ್ಲಿ ಎಂಭತ್ತೆಂಟನೆಯ ಅಧ್ಯಾಯದಲ್ಲಿ ಹನ್ನೆರಡನೇ ಶ್ಲೋಕದಿಂದ ೪೦ನೇ ಶ್ಲೋಕದ ಪೂರ್ತಿಯಾಗಿ ಉಕ್ತವಾಗಿರುವ ಕಥಾಭಾಗವು ಶ್ರೀವಿಷ್ಣು ಸರ್ವೋತ್ತಮತ್ವಕ್ಕೆ ನಿದರ್ಶನವಾಗಿದೆ. ಶ್ರೀವಿಜಯಧ್ವಜೀಯದ ರೀತ್ಯಾ ಆ ಕಥಾ ಭಾಗವು ದಶಮಸ್ಕಂಧದ ಉತ್ತರಾರ್ಧದ ೯೩ನೇ ಅಧ್ಯಾಯದಲ್ಲಿ ನಿರೂಪಿತ ವಾಗಿದೆ.

ಸ ತದ್ಬಲಪರೀಕ್ಷಾರ್ಥಂ ಶಂಭೋಃ ಶೀರ್ಷ್ಣಿ ವೃಕಾಸುರಃ ।
ಸ್ವಹಸ್ತಂ ಧಾತುಮಾರೇಭೇ ಸೋಽಬಿಭ್ಯತ್ ಸ್ವಕೃತಾಚ್ಛಿವಃ ॥
ತೇನೋಪದಿಷ್ಟಃ ಸಂತ್ರಸ್ತಃ ಪರಿ(ರಾ)ಧಾವನ್ ಸವೇಪಥುಃ ।
ಯಾವದಂತಂ ದಿವೋ ಭೂಮೇಃ ಕಾಷ್ಠಾನಾಮುಧಿಕಂ ದಿವಃ ॥
ಅಜಾನಾನಃ ಪ್ರತಿವಿಧಿಂ ತೂಷ್ಣೀಮಾಸ ಮಹೇಶ್ವರಃ ।
(ಅಜಾನನ್ತಃ ಪ್ರತಿವಿಧಿಂ ತೂಷ್ಣೀಮಾಸನ್ ಸುರೇಶ್ವರಾಃ)
ತತೋ ವೈಕುಂಠಮಗಮತ್ ಭಾಸ್ವರಂ ತಮಸಃ ಪರಮ್ ॥
ಯತ್ರ ನಾರಾಯಣಃ ಸಾಕ್ಷಾತ್ ನ್ಯಾಸಿನಾಂ ಪರಮಾಗತಿಃ ।
ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತಯೇತ್ತಮಃ ॥
(ಯತೋ ನಾವರ್ತತೇ ಗತಃ)
ತಂ ತಥಾ ವ್ಯಸನಂ ದೃಷ್ಟ್ವಾ ಭಗವಾನ್ ವೈ ಜನಾರ್ದನಃ ॥ ಇತ್ಯಾದಿನಾ
ಏವಂ ಭಗವತಾ ಪೃಷ್ಟೋ ವಚಸಾಮೃತವರ್ಷಿಣಾ ।
ತತ್ಕ್ರಮಾದಬ್ರವೀತ್ತಸ್ಮೈ ಯಥಾಪೂರ್ವಮನುಷ್ಠಿತಮ್ ॥

ವೃಕಾಸುರಂ ಪ್ರತಿ ಭಗವಾನ್

ಏವಂ (ಚೇತ್ತರ್ಹಿ) ಚೋದಿತತದ್ವಾಕ್ಯಂ ನ ವಯಂ ಶ್ರದ್ಧಧೀಮಹಿ ।
ಯೋ ದಕ್ಷಶಾಪಾತ್ಪೈಶಾಚ್ಯಂ ಪ್ರಾಪ್ತಃ ಪ್ರೇತಪಿಶಾಚರಾಟ್ ॥
ಯದಿ ವಸ್ತತ್ರ ವಿಶ್ರಂಭೋ ದಾನವೇಂದ್ರ ಜಗದ್ಗುರೌ ॥
ತರ್ಹ್ಯಂಗುಲ್ಯೈಃ ಸ್ವಶಿರಸಿ ಹಸ್ತನ್ಯಾಸಃ ಪ್ರದೀಯತಾಮ್ ॥
(ತರ್ಹ್ಯಂಗಾಶು ಸ್ವಶಿರಸಿ ಹಸ್ತಂ ನ್ಯಸ್ಯ ಪ್ರತೀಯತಾಮ್)
ಯದ್ಯಸತ್ಯಂ ವಚಃ ಶಂಭೋಃ ಕಥಂಚಿತ್‌ದಾನವರ್ಷಭ ॥
ತದೈನಂ ಜಹ್ಯಸದ್ವಾಕ್ಯಂ (ನಚವಕ್ತಾನೃತಂ ಪುನಃ)
(ನಚವಕ್ತಾನೃತಂ ಪುನಃ ।

ಇತ್ಥಂ ಭಗವತಶ್ಚಿತ್ರೈಃ ವಚೋಭಿಃ ಸುಕೌಶಲ್ಯೈಃ । (ಸುಪೇಶಲೈಃ)
ತಥೇತಿ ನಿಶ್ಚಿತಶ್ಶೀರ್ಷ್ಣಿ ಸ್ವಹಸ್ತಂ ಕುಮತಿರ್ವಧಾತ್ ॥
(ಭಿನ್ನಧೀರ್ವಿಸ್ಮೃತಃ ಶೀರ್ಷ್ಣಿಸ್ಸ್ವಹಸ್ತಂ ಕುಮತಿರ್ವ್ಯಧಾತ್)
ಅಥಾಪತದ್ಭಿನ್ನಶಿರಾಃ ವಜ್ರಾಹತ ಇವ ಕ್ಷಣಾತ್ ।
ಜಯಶಬ್ದೋ ನಮಃಶಬ್ದಃ ಸಾಧುಶಬ್ದೋಽಭವದ್ದಿವಿ ।
ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ ॥
ದೇವರ್ಷಿಪಿತೃಗಂಧರ್ವಾಃ ಮೋಚಿತಃ ಸಂಕಟಾತ್ ಶಿವಃ ।
ಮುಕ್ತಂ ಗಿರಿಶಮಭ್ಯಾಹ ಭಗವಾನ್ ಪುರುಷೋತ್ತಮಃ ।
ಅಹೋ ದೇವ ಮಹಾದೇವ ಪಾಪೋಽಯಂ ಸ್ವೇನ ಪಾಪ್ಮನಾ ॥
ಹತಃ ಕೋನು ಕುತಶ್ಚಾಪಿ ಜಂತುರ್ವೈ ಕೃತಕಿಲ್ಬಿಷಃ ।
ಕ್ಷೇಮೀ ಸ್ಯಾತ್ಕಿಮು ವಿಶ್ವೇಶೇ ಕೃತಾಗಸ್ಕೋ (ಕೃತಪಾಪೋ) ಜಗದ್ಗುರೌ ॥
ಯ ಏವಮವ್ಯಾಕೃತಶಕ್ತ್ಯುದನ್ವತಃ
ಪರಸ್ಯ ಸಾಕ್ಷಾತ್ ಪರಮಾತ್ಮನೋ ಹರೇಃ ।
ಗಿರೀಶ ಮೋಕ್ಷಂ ಕಥಯೇತ್ ಶೃಣೋತಿ ವಾ
ವಿಮುಚ್ಯತೇ ಸಂಸೃತಿಭಿಸ್ತಥಾರಿಭಿಃ ॥

ವೃಕಾಸುರ ಕಥೆಯ ಹಿನ್ನೆಲೆ—

ವಿಷ್ಣುಭಕ್ತನು ಮೋಕ್ಷವನ್ನು ಪಡೆಯುತ್ತಾನೆ. ಶಿವಭಕ್ತನು ನಶ್ವರವಾದ ಸಂಪತ್ತನ್ನು ಪಡೆಯುತ್ತಾನೆ. ಶಿವನು ಸದ್ಯಃ ಶಾಪವನ್ನೂ ಪ್ರಸಾದವನ್ನೂ ಕೊಡತಕ್ಕವನೆಂಬುವಲ್ಲಿ ವೃಕಾಸುರಾಖ್ಯಾನವು ದೃಷ್ಟಾಂತವಾಗಿದೆ.

ಒಮ್ಮೆ ಶಕುನಿಪುತ್ರನಾದ ವೃಕಾಸುರನು ನಾರದರನ್ನು ಸಂಧಿಸಿ ತ್ರಿಮೂರ್ತಿಗಳಲ್ಲಿ ಬೇಗನೇ ಒಲಿಯುವ ದೇವತೆಯು ಯಾರೆಂದು ಪ್ರಶ್ನೆ ಮಾಡಿದನು. ಅದಕ್ಕೆ ನಾರದರು ಬೇಗ ತೃಪ್ತಿಪಟ್ಟು ವರವನ್ನೀಯುವವನು ಶಿವನೆಂದು ಹೇಳಿ ನೀನು ಶಿವನನ್ನು ಸಂತೋಷಪಡಿಸಿ ವರವನ್ನು ಪಡೆಯೆಂದು ಹೇಳಿದರು. ಹಿಂದೆ ರುದ್ರದೇವನು ರಾವಣನಿಗೂ ಬಾಣಾಸುರನಿಗೂ ವರವನ್ನು ಕೊಟ್ಟ ಸಂಗತಿಯನ್ನು ಅವರಿಗೆ ಅಧಿಕವಾದ ಐಶ್ವರ್ಯವನ್ನು ಕೊಟ್ಟರತಕ್ಕ ವಿಚಾರವನ್ನು ತಿಳಿಸಿದರು. ಇದನ್ನು ಕೇಳಿ ತಾನೂ ಶಿವನಿಂದ ವರವನ್ನು ಪಡೆಯಲು ಕೇದಾರಕ್ಷೇತ್ರಕ್ಕೆ ಹೋಗಿ

ಅಲ್ಲಿ ಆರು ದಿನಗಳ ಕಾಲ ಅಗ್ನಿಯಲ್ಲಿ ಶಿವನನ್ನು ಕುರಿತು ಹೋಮಮಾಡಿದವನಾದಾಗ್ಯೂ ಶಿವನ ದರ್ಶನವು ಆಗಲಿಲ್ಲ. ಆದರಿಂದ ತುಂಬಾ ಬೇಸರಪಟ್ಟು ಕಡೆಗೆ ಏಳನೇ ದಿನ ತನ್ನ ಕುತ್ತಿಗೆಯನ್ನೇ ಕತ್ತರಿಸಿ ಹೋಮ ಮಾಡಲು ಯತ್ನಿಸಿದಾಗ ಪರಮಕಾರುಣಿಕನಾದ ಶಿವನು ಅಗ್ನಿಮೂಲಕ ಕಾಣಿಸಿಕೊಂಡು, ನಿನಗೆ ಇಷ್ಟವಾದ ವರವನ್ನು ಕೇಳೆಂದು ಹೇಳಿದನು. ಅದಕ್ಕೆ ವೃಕಾಸುರನು 'ನಾನು ಯಾರ ತಲೆಯ ಮೇಲೆ ಕೈಯನ್ನು ಇಡುತ್ತೇನೆಯೋ ಅವನು ಮರಣವನ್ನು ಹೊಂದಲಿ' ಎಂದು ವರವನ್ನು ಬೇಡಿದನು. ಈ ವರದ ವಿಷಯದಲ್ಲಿ ರುದ್ರದೇವನಿಗೆ ಸ್ವಲ್ಪ ಮನಸ್ಸಿಗೆ ಅಳುಕಾದರೂ ಪರಮದಯಾಳುವಾದುದರಿಂದ ಹಿಂದಿನ ಮುಂದಿನ ಪರಿಣಾಮವನ್ನು ಕೂಡಾ ಗಮನಿಸಿದೆ ರುದ್ರನು ಹಾಗೆಯೇ ಆಗಲೆಂದು ವರವನ್ನು ಕೊಟ್ಟೇಬಿಟ್ಟನು. ಆಗ ದುಷ್ಟನಾದ ಆ ವೃಕಾಸುರನು ನೀನು ಕೊಟ್ಟಿರತಕ್ಕ ವರದ ಪರೀಕ್ಷೆಯನ್ನು ನಿನ್ನ ತಲೆಯಮೇಲೇ ಕೈಯನ್ನಿಟ್ಟು ನೋಡಿಬಿಡುತ್ತೇನೆಂದು ಹೇಳಿದಾಗ ರುದ್ರನು ಭಯಾಕ್ರಾಂತನಾದನು. ವೃಕಾಸುರನು ಶಿವನನ್ನು ಬಿಡಲಿಲ್ಲ. ಶಿವನಾದರೋ ಅವನ ಕೈಗೆ ಸಿಕ್ಕದೇ ಓಡಿದನು. ಇಡೀ ಭೂಮಂಡಲವನ್ನೆಲ್ಲ ಸುತ್ತಾಡಿದರೂ ಪಾತಾಳಕ್ಕೆ ಹೋದರೂ ಅಸುರನು ಬಿಡದೇ ಹಿಂಬಾಲಿಸಿದನು. ಇದನ್ನು ಕಂಡು ದೇವತೆಗಳೆಲ್ಲಾ ಇದಕ್ಕೆ ಪ್ರತಿಕ್ರಿಯೆಯಾಗಿ ಏನನ್ನುಮಾಡಲೂ ತಿಳಿಯದೆ ಸುಮ್ಮನಾದರು. ಕಡೆಗೆ ಶಿವನು ವೈಕುಂಠಕ್ಕೆ ತೆರಳಿ ಶ್ರೀಮನ್ನಾರಾಯಣನನ್ನು ಮರೆಹೊಕ್ಕನು. ಆಗ ವಿಷ್ಣುವು ಬಾಲಬ್ರಹ್ಮಚಾರಿ ವೇಷಧಾರಿಯಾಗಿ ವೃಕಾಸುರನನ್ನು ಕುರಿತು ಇಂತೆಂದನು: ಶಾಕುನೇಯ, ವೃಕಾಸುರ, ಬಹಳ ಆಯಾಸಪಟ್ಟಿದ್ದಿ, ಬಹಳದೂರ ಬಂದಿದ್ದಿ, ಸ್ವಲ್ಪ ವಿಶ್ರಾಂತಿಯನ್ನು ಪಡೆ; ನಿನಗೇನು ಆಗಬೇಕು, ಹೇಳೆಂದು ಕೇಳಲಾಗಿ ವೃಕಾಸುರನು ಹಿಂದೆ ನಡೆದ ಸಂಗತಿಗಳನ್ನೆಲ್ಲಾ ತಿಳಿಸಿದನು. ಅದನ್ನು ಕೇಳಿ ಬ್ರಹ್ಮಚಾರಿ ವೇಷಧಾರಿಯಾದ ವಿಷ್ಣುವು "ಎಲೈ ಅಸುರವರ್ಯ, ನನಗೆ ರುದ್ರನ ವಾಕ್ಯದಲ್ಲಿ ಮತ್ತು ಅವನು ಕೊಟ್ಟ ವರದ ವಿಷಯದಲ್ಲಿ ಸ್ವಲ್ಪವೂ ನಂಬಿಕೆಯಿಲ್ಲ. ಆ ರುದ್ರನಾದರೋ ದಕ್ಷನ ಶಾಪದಿಂದ ಪಿಶಾಚಿಯಂತೆ ಶ್ಮಶಾನದಲ್ಲಿ ಅಲೆಯುತ್ತಿದ್ದಾನೆ. ಯಾವಾಗಲೂ ಕೋಪಿಷ್ಠ, ಆ ಹರನು ಸುಳ್ಳುಗಾರ. ಕ್ರೋಧದಿಂದ ಕೂಡಿದವನಿಗೆ ಸತ್ಯವೆಲ್ಲಿ ಬಂತು? ನೀನು ಅವನ ಮಾತನ್ನು ನಂಬಿದ್ದೀಯೇ, ಮೂಢನಾಗಿದ್ದಿ. ಆ ರುದ್ರನ ಮಾತಿನಲ್ಲಿ ನಿನಗೆ ನಂಬಿಕೆ ಇದ್ದರೆ, ನಿನ್ನ ತಲೆಯ ಮೇಲೆ ನಿನ್ನ ಕೈಯನ್ನು ಇಟ್ಟುಕೋ, ಅದು ಸುಳ್ಳಾದರೆ ಅಂತಹ ಸುಳ್ಳನ್ನು

ಆಡಿರತಕ್ಕ ಶಿವನನ್ನು ಕೊಂದುಬಿಡು. ಮುಂದಾದರೂ ಇಂತಹ ಸುಳ್ಳನ್ನು ಅವನು ಆಡದಿರಲಿ" ಇತ್ಯಾದಿಯಾಗಿ ನಯವಾದ ಚಮತ್ಕಾರವಾದ ಮಾತುಗಳನ್ನಾಡಿದನು. ಈ ವಿಧವಾದ ಮೃದುಮಧುರವಾದ ಮಾತಿಗೆ ಬೆರಗಾಗಿ ವೈಮರೆತು ಎಲ್ಲವನ್ನೂ ಮರೆತು ಆ ರಾಕ್ಷಸನು ತನ್ನ ತಲೆಯಮೇಲೆಯೇ ತನ್ನ ಕೈಯ್ಯನ್ನು ಇಟ್ಟು ಕೊಂಡನು. ಆ ಕೂಡಲೇ ವಜ್ರಾಹತನಂತೆ ಬಿದ್ದು ಸತ್ತನು. ಆಗ ದೇವತೆಗಳು ಪರಮಾನಂದದಿಂದ ಜಯಘೋಷವನ್ನು ಮಾಡಿ ಶ್ರೀಹರಿಯಮೇಲೆ ಹೂವಿನ ಮಳೆಗರೆದರು. ಪಾಪಿಯಾದ ವೃಕಾಸುರನ ಬಾಧೆಯು ಶ್ರೀಹರಿಯಿಂದ ಪರಿಹಾರ ವಾಯಿತು. ಮತ್ತಾರಿಂದಲೂ ಆಗದಿರುವ ಈ ಸಂಕಟ ಪರಿಹಾರವು ಶ್ರೀವಿಷ್ಣು ವಿನಿಂದ ಮಾತ್ರ ಆಯಿತು. ಆದಕಾರಣ ರುದ್ರನ ಸಂಕಟ ಪರಿಹಾರಕನಾದ ಶ್ರೀವಿಷ್ಣುವೇ ಸರ್ವೋತ್ತಮನಲ್ಲವೇ, ಪ್ರತಿವಾದಿಗಳೇ ಹೇಳಲಿ ಎಂದು ಅಭಿಪ್ರಾಯ

ಅವತಾರಿಕಾ—

ಪರಮಮಂಗಳರೂಪವಾದ ವೇದವಾಣಿಯು ಮತ್ತು ಪುರಾಣವಾಕ್ಯಗಳು ಸರ್ವತ್ರ ವಿಜಯಶಾಲಿಯಾದ ಶ್ರೀಹರಿಯನ್ನು ಪುರಸ್ಕರಿಸುತ್ತವೆ. ತದಿತರ ದೇವತೆ ಗಳನ್ನು ಧಿಕ್ಕರಿಸುತ್ತವೆ.

**ಯಸ್ಮಾಜ್ಜಯೀ ಚಾಜಿತಶ್ಚ ವಿಷ್ಣುರುಕ್ತಪ್ರಕಾರತಃ || ೧೨೮ ||**
**ವಾಣೀ ಪರಮಕಲ್ಯಾಣೀ ಪೌರಾಣೀ ತೇನ ಕೇಶವಂ ।**
**ಸತ್ಕರೋತಿ ಸುರಾನೇತಾನ್ ಧಿಕ್ಕರೋತಿ ನ ಕಿಂ ವದ || ೧೨೯ ||**

ಹಿಂದೆ ಹೇಳಿದ ಪ್ರಕಾರ ಎಲ್ಲರನ್ನೂ ಜಯಿಸುವ, ಯಾರಿಂದಲೂ ತಾನು ಇತರರಿಂದ ಜಯಿಸಲ್ಪಡದೇ ಇರುವ ಸ್ವಭಾವ ಉಳ್ಳವನಾದ್ದರಿಂದಲೂ ಬ್ರಹ್ಮರುದ್ರ ರನ್ನು ತಮ್ಮ ತಮ್ಮ ಕಾರ್ಯದಲ್ಲಿ ಪ್ರವರ್ತಿಸುವದರಿಂದಲೂ ಕೇಶವನಾಮಕನಾದ ಶ್ರೀಹರಿಯನ್ನು, ಅಪೌರುಷೇಯಳೂ ಪರಮಮಂಗಳರೂಪಿಣಿಯೂ ಆದ ಶ್ರುತಿ ಯೆಂಬ ಸಾಧ್ವೀಮಣಿಯು ಸತ್ಕರಿಸುತ್ತಾಳೆ. ಈ ಇತರ ದೇವತೆಗಳನ್ನು ಧಿಕ್ಕರಿಸು ತ್ತಾಳೆ.

ಅವತಾರಿಕಾ—

ವೇದರಾಶಿಯು ಶ್ರೀ ಹಯಗ್ರೀವರೂಪದಿಂದಲೂ, ಶ್ರೀ ವೇದವ್ಯಾಸರೂಪ ದಿಂದಲೂ ತನ್ನ ವಿಭಾಗವನ್ನು ಮಾಡಿತೋರಿಸಿದ, ತನ್ನನ್ನು ಸರ್ವದಾ ರಕ್ಷಿಸುತ್ತಲಿ

ರುವ ಶ್ರೀಹರಿಯನ್ನು ಪರಮಮುಖ್ಯವೃತ್ತಿಯಿಂದ ಸರ್ವೋತ್ತಮನೆಂದು ಶ್ರೀಹರಿಯನ್ನು ಪ್ರತಿಪಾದಿಸುತ್ತಲಿದೆ.

ಬೋಧಾಯ ಸ್ವನಿಭಕ್ತಾರಂ ಮಾನತ್ವಸ್ಯ ಸ್ಥಿರೀಕೃತೇ ।
ವ್ಯಾಸಾತ್ಮನೋಽಪಕರ್ತಾರಂ ಹಯಗ್ರೀವಾದಿರೂಪತಃ ॥ ೧೩೦ ॥

ಯುಗೇ ಯುಗೇಽವತೀರ್ಯಾತ್ರ ಹರ್ತಾರಂ ಸ್ವಾಪಕಾರಿಣಾಂ ।
ಕರ್ತಾರಂ ಸರ್ವಜಗತಾಂ ವಿಹರ್ತಾರಂ ಪಯೋಽಂಬುಧೌ ॥ ೧೩೧ ॥

ಸ್ವಾಭಿಮಾನಿಶ್ರಿಯಶ್ಚಾಪಿ ಭರ್ತಾರಂ ಪುರುಷೋತ್ತಮಂ ।
ಸ್ವಾತ್ಮನೋಽಪಿ ಲಯೇ ಪ್ರಾಪ್ತೇ ಧರ್ತಾರಂ ಚ ಪದೇ ಪದೇ ॥ ೧೩೨ ॥

ರಕ್ಷೋಹಣಂ ಚಾಸುರಘ್ನಂ ಜೇತಾರಮಪರಾಜಿತಂ ।
ಕಿಂ ನಾಹುರ್ವಿಶ್ವತೋ ವೇದಾಃ ಪಕ್ಷಪಾತಂ ವಿನಾ ವದ ॥ ೧೩೩ ॥

ವೇದವು ಎಲ್ಲೆಡೆಯಲ್ಲಿಯೂ ಸರ್ವೋತ್ತಮನಾದ ಪರಮಾತ್ಮನ ಮಹಿಮೆಯನ್ನು ಹೊಗಳುತ್ತಲಿದೆ. ಲೋಕದಲ್ಲಿ ಸಜ್ಜನರು ತಮಗೆ ಉಪಕಾರ ಮಾಡಿದವರನ್ನು ಸದ್ಗುಣೋಪೇತರನ್ನು ಹೊಗಳುತ್ತಾರೆ. ಈ ಎರಡು ನಿಮಿತ್ತಗಳೂ ಪರಮಾತ್ಮನಲ್ಲಿ ಸರ್ವತೋಽಧಿಕವಾಗಿ ಉಂಟು. ಆದುದರಿಂದ ಶ್ರುತಿಯು ಪರಮಾತ್ಮನನ್ನು ಹೊಗಳುತ್ತದೆಯೆಂದು ಶ್ರೀ ವಾದಿರಾಜರು ಹೇಳುತ್ತಾರೆ.

ಮುಕ್ತಿಯೋಗ್ಯಚೇತನರ ಅಲ್ಪಮತಿಯನ್ನೂ, ಅಶಕ್ತಿಯನ್ನೂ ಮನಗಂಡು ಅವರಿಗೆ ವೇದಾರ್ಥವಾಗುವುದಕ್ಕಾಗಿ ಪರಮಾತ್ಮಸ್ವರೂಪಿಯಾದ ಶ್ರೀ ಹಯಗ್ರೀವದೇವರು ಮತ್ತು ಶ್ರೀ ವೇದವ್ಯಾಸರು ಸಹ ವೇದಗಳ ವಿಭಾಗಮಾಡಿದ್ದರಿಂದಲೂ ಮತ್ತು ಬ್ರಹ್ಮಸೂತ್ರಾದಿಗಳಲ್ಲಿ ವೇದವು ಅಪೌರುಷೇಯವಾದ್ದರಿಂದ ಅದು ದೋಷರಹಿತ ಪ್ರಮಾಣವೆಂದು ಸಾಧಿಸಿದ್ದರಿಂದಲೂ ತನಗೆ (ವೇದಕ್ಕೆ) ಉಪಕಾರ ಮಾಡಿರುತ್ತಾರೆ. ಅಲ್ಲದೆ ಶ್ರೀಹರಿಯು ಪ್ರತಿ ಯುಗದಲ್ಲಿ ಹಯಗ್ರೀವರೂಪದಿಂದ ಅವತಾರ ಮಾಡಿ ತನ್ನನ್ನು ಕದ್ದುಕೊಂಡು ಹೋಗಿ ಅಪಕಾರಮಾಡಿದ ದೈತ್ಯನನ್ನು ಸಂಹರಿಸುತ್ತಾನೆ. ಸರ್ವಜಗತ್ತನ್ನೂ ಯಥಾಯೋಗ್ಯವಾಗಿ ಸೃಷ್ಟಿ ಮಾಡಿರುತ್ತಾನೆ. ಕ್ಷೀರಸಮುದ್ರದಲ್ಲಿ ವಿಹಾರ ಮಾಡುತ್ತಾನೆ. ತನಗೆ (ವೇದಗಳಿಗೆ) ಅಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯ ಭರ್ತನಾಗಿರುತ್ತಾನೆ. ಲಯಕಾಲ ಬಂದಾಗ ನಿತ್ಯವಾದ ತನ್ನ ಬುದ್ಧಿಯಲ್ಲಿ ವೇದವನ್ನು ಧರಿಸಿ ನಷ್ಟವಾಗಿ ಹೋಗದಂತೆ ವೇದವನ್ನು

(ತನ್ನನ್ನು) ರಕ್ಷಿಸಿರುತ್ತಾನೆ. ಅಲ್ಲದೆ ರಾಕ್ಷಸರನ್ನೂ ಅಸುರರನ್ನೂ ಸಂಹರಿಸುತ್ತಾನೆ. ಇಂತಹ ಸರ್ವತ್ರ ಜಯಶೀಲನಾಗಿ ಎಂದೆಂದಿಗೂ ಇತರರಿಂದ ಜಯಿಸಲ್ಪಡದ ಶ್ರೀಹರಿಯನ್ನು ವೇದವು ಸರ್ವೋತ್ತಮರೀತಿಯಿಂದ ಪ್ರತಿಪಾದಿಸುವುದಿಲ್ಲವೇನು? ಪಕ್ಷಪಾತವಿಲ್ಲದೆ ಹೇಳು.

ಇಲ್ಲಿ ಹಿಂದೆ ಹೇಳಿದ ಮಹಾಗುಣಗಳುಳ್ಳವನ್ನಾಗಿ ವೇದವು ಹರಿಯನ್ನು ವರ್ಣಿಸುತ್ತೆಯೆಂಬು ಹೇಳಬಹುದು ಅಥವಾ ಇಂತಹ ಮಹಾಮಹಿಮೆಯುಳ್ಳವನಾದ್ದರಿಂದ ವೇದವು ಅವನನ್ನು ಎಲ್ಲೆಡೆಯಲ್ಲಿಯು ಪ್ರತಿಪಾದಿಸುತ್ತದೆಯೆಂದಾದರೂ ಅರ್ಥಮಾಡಬಹುದು.

**ಅನಾಶಂಕಿತದೋಷತ್ವಾತ್ ಶ್ರುತಿರೇಷಾ ಪುರಾತನೀ ।**
**ಬಲಂ ಯೇಷಾಂ ತು ವಿದುಷಾಂ ತೇಷಾಮಗ್ರೇ ತುಷೋಪಮಮ್ ॥೧೩೪॥**
**ಕಿಂ ಕುರ್ಯಾತ್ಪೌರುಷಂ ವಾಕ್ಯಂ ವದನ್ತು ಪ್ರತಿವಾದಿನಃ ।**

ಇದಕ್ಕೆ ಹಿಂದೆ ಅರ್ಥ ಹೇಳಿದೆ.

ಅವತಾರಿಕಾ—

ಶ್ರೀಹರಿಯೇ ಸರ್ವಪ್ರೇರಕನೆಂದು ಅವನ ಸರ್ವಪ್ರೇರಕತ್ವ ಮಹಿಮೆಯನ್ನು ವೇದವಾಣಿಯು ಹೊಗಳುತ್ತಲಿದೆ.

**ನಿಷುಸೀದ ಗಣಪತೇ ಗಣೇಷು**
**ತ್ವಾಮಾಹುರ್ವಿಪ್ರತಮಂ ಕವೀನಾಂ**
**ನ ಋತೇ ತ್ವತ್ಕ್ರಿಯತೇ ಕಿಞ್ಚನಾರೇ**
**ಮಹಾಮರ್ಕಂ ಮಘವಂ ಚಿತ್ರಮರ್ಚ** ॥ ೧೩೫ ॥

(ಋಗ್ವೇದ ೮-೬-೧೨)

ಪದವಿಭಾಗ—

ನಿ ಸು ಸೀದ ಗಣಪತೇ ಗಣೇಷು ತ್ವಾಂ ಆಹುಃ ವಿಪ್ರತಮಂ ಕವೀನಾಂ ನ ಋತೇ ತ್ವತ್ ಕ್ರಿಯತೇ ಕಿಮ್ ಚನ ಆರೇ ಮಹಾಮ್ ಅರ್ಕಂ ಮಘವನ್ ಚಿತ್ರಂ ಅರ್ಚ.

**ಇತಿ ಶ್ರುತಿಶ್ಚ ಸರ್ವಸ್ಯ ನಿಯಂತಾರಂ ರಮಾಪತಿಂ ॥ ೧೩೬ ॥**

**ವಕ್ತಿ ತತ್ಪ್ರೇರಣಾಭಾವೇ ಶಕ್ತಿಃ ಕಸ್ಯಾಪಿ ನೇತಿ ತಂ ।**

ಹೀಗೆ ಈ ಶ್ರುತಿಯು ಆ ರಮಾಪತಿಯನ್ನು ಸರ್ವರನ್ನೂ ನಿಯಮನ ಮಾಡತಕ್ಕವನೆಂದೂ, ಅವನ ಪ್ರೇರಣೆಯಿಲ್ಲದೆ ಯಾವದಕ್ಕೂ ಯಾವ ಶಕ್ತಿಯೂ ಇಲ್ಲವೆಂದು ಹೇಳುತ್ತದೆ.

**ಗಣಸ್ಯೇಂದ್ರಿಯವರ್ಗಸ್ಯ ಪತೇ ರಕ್ಷಕ ಮಾಪತೇ ॥ ೧೩೭ ॥**

**ಗಣೇಷ್ವಿಂದ್ರಿಯವರ್ಗೇಷು ನಿತರಾಂ ಸುಷ್ಠು ಸೀದ ಮೇ ।**

"ನಿಷುಸೀದ ಗಣಪತೇ ಗಣೇಷು" ಎಂಬ ಋಗ್ವೇದದ ವಾಕ್ಯಕ್ಕೆ ಈಗ ಅರ್ಥವನ್ನು ಹೇಳುತ್ತಾರೆ.

ಎಲೈ ರಮಾಪತಿಯೇ ಗಣಪತೇ=ಗಣಸ್ಯ ಪತೇ, ಗಣಸ್ಯ = ಇಂದ್ರಿಯ ಗಣಗಳ, ಪತೇ=ರಕ್ಷಕನೇ, ಸ್ವಾಮಿಯೇ, ಗಣೇಷು=ಇಂದ್ರಿಯ ವರ್ಗೇಷು= ನನ್ನ ಇಂದ್ರಿಯ ವರ್ಗಗಳಲ್ಲಿ, ನಿ=ನಿತರಾಂ=ಯಾವಾಗಲೂ ಬಿಡದೆ, ಸು= ಚನ್ನಾಗಿ, ಸೀದ=ನೆಲಸಿರು.

**ಗತ್ಯರ್ಥಃ ಸದಿತಿರ್ಧಾತುಃ ಸ್ಥಿರೀಭಾವಂ ವದೇದಯಂ ॥ ೧೩೮ ॥**

ಈ ಗತ್ಯರ್ಥವುಳ್ಳ 'ಸತ್' ಎಂಬ ಧಾತು ಇಲ್ಲಿ 'ಸ್ಥಿರೀಭಾವವನ್ನು ಹೇಳಿತು. 'ಸತ್' ಈ ಧಾತು 'ಹೋಗುವದು' ಎಂಬ ಅರ್ಥ ಕೊಡತಕ್ಕದ್ದು. ಆದರೂ ಇಲ್ಲಿ (ಈ ಋಕ್ಕಿನಲ್ಲಿ) 'ಸ್ಥಿರವಾಗಿರು' ಎಂಬ ಅರ್ಥ ಉಳ್ಳದ್ದು.

**ಅತೋ ಮದಿಂದ್ರಿಯೇಷು ತ್ವಂ ಸ್ಥಿತ್ವಾ ಸಮ್ಯಕ್ಪ್ರವರ್ತಯ ।**

ಆದ್ದರಿಂದ ನನ್ನ ಇಂದ್ರಿಯಗಳಲ್ಲಿದ್ದು ನೀನು ನನ್ನನ್ನು ಚನ್ನಾಗಿ ಪ್ರವರ್ತಿಸು.

**ಯತಃ ಕವೀನಾಂ ಮಧ್ಯೇ ತ್ವಾಂ ವಿಶೇಷೇಣ ಮನೀಷಿಣಃ ॥ ೧೩೯ ॥**

**ಪ್ರಕೃಷ್ಟತಮಮಾಹುರ್ಹಿ ತತಸ್ತ್ವಂ ವೇತ್ಸಿ ಮದ್ಧಿತಂ ।**

ಜ್ಞಾನಿಗಳು ನಿನ್ನನ್ನು ವಿಶೇಷವಾಗಿ ಜ್ಞಾನಿಗಳ ಮಧ್ಯದಲ್ಲಿ ಅತ್ಯಂತ ಶ್ರೇಷ್ಠನೆಂದು ಹೇಳುವರು. ಆದ್ದರಿಂದ ನನಗೆ ಹಿತವಾದದ್ದು ಯಾವದು ಎಂಬುವನ್ನು ನೀನು ಚೆನ್ನಾಗಿ ಬಲ್ಲೆ.

**ಕೇನಚಿತ್ ಕಿಂಚ ನಾಪ್ಯತ್ರ ಕಾರ್ಯಂ ಸರ್ವಜನೈರಪಿ ॥ ೧೪೦ ॥**

**ತೃಣಸ್ಯ ಚಾಲನಂ ವಾಕ್ಷ್ಣೋರುನ್ಮೇಷಣನಿಮೇಷಣೇ ।**
**ತ್ವತ್ತ್ವತ್ತೋ ನ ಋತೇ ಲೋಕೇ ತವ ಪ್ರೇರಣಯಾ ವಿನಾ ॥ ೧೪೧ ॥**

**ದೂರೇ ವಾsಥ ಸಮೀಪೇ ವಾ ಕ್ರಿಯತೇ ನ ಕಿಲ ಪ್ರಭೋ ।**

ಎಲೈ ಪ್ರಭೋ ! ಸ್ವಾಮಿಯೇ ಶ್ರೀಹರಿಯೇ, ಯಾವನೊಬ್ಬನಿಂದಲೇ ಆಗಲಿ ಎಲ್ಲ ಜನರಿಂದ ಕೂಡಿಯೇ ಆಗಲಿ, ಒಂದು ಹುಲ್ಲು ಕಡ್ಡಿಯನ್ನು ಅಲ್ಲಾಡಿಸುವ ಅಥವಾ ಕಣ್ಣು ರೆಪ್ಪೆಯನ್ನು ಹಾಕುವ ಸ್ವಲ್ಪ ಕಾರ್ಯವೂ ಕೂಡ ದೂರದಲ್ಲಿಯೇ ಆಗಲಿ, ಸಮೀಪದಲ್ಲಿಯೇ ಆಗಲಿ ನಿನ್ನ ಪ್ರೇರಣಾ ಇಲ್ಲದೆ ಮಾಡಲ್ಪಡುವುದಿಲ್ಲ ವಲ್ಲವಷ್ಟೆ.

ಪರಮಾತ್ಮನಾದ ಸರ್ವಹೃದಯಾಂತರ್ಯಾಮಿಯಾದ ಆ ಸಕಲ ಜೀವರಿಗೂ ಬಿಂಬರೂಪಿಯಾದ ನಿನ್ನ ಪ್ರೇರಣೆಯಿಲ್ಲದೆ ಯಾರಿಂದಲೂ ಯಾರಿಗೂ ಯಾವ ಕಾಲದಲ್ಲೂ ಏನೇನೂ ಮಾಡಲು ಶಕ್ತಿಯಿಲ್ಲ, ಸಾಧ್ಯವಿಲ್ಲ. ಎಲ್ಲರೂ ಅಸ್ವತಂತ್ರರು. ಸರ್ವತಂತ್ರಸ್ವತಂತ್ರನಾದ ನಿನ್ನ ಅನುಗ್ರಹದ ಬಲದಿಂದಲೇ ಎಲ್ಲವೂ ನಡೆಯುತ್ತದೆ.

'ನಿಷುಸೀದ ಗಣಪತೇ' ಎಂಬ ಮಂತ್ರವು ಋಗ್ವೇದದ ಮಂಡಲ 8, ಸೂ. 6, 13 ನೇ ಮಂತ್ರವಾಗಿದೆ. ಇದರ ಅರ್ಥವು ಈ ರೀತಿ ವಿವರಿಸಲ್ಪಟ್ಟಿದೆ. ಹೇ ಇಂದ್ರಿಯ ಗಣಪತೇ, ಧನವನ್, ಯಶಸ್ವಿನ್, ಮುಖಪತೇ, ತ್ವಂ, ಇಂದ್ರಿಯ ಗಣೇಷು ನಿಷುಸೀದ, ತತ್ರ, ಚ, ಸ್ಥಿತ್ವಾ, ಮಹಾಂತಂ, ಪರಮಾನಂದಂ, ಆಶ್ಚರ್ಯತಮಂ, ತ್ವಾಂ, ತ್ವಮೇವ, ಪೂಜಯ, ಯತಸ್ತ್ವಾಮೇವ, ವಿಶೇಷೇಣ, ಜ್ಞಾನಿನಾಂ, ಪ್ರಕೃಷ್ಟತಮಂ, ಆಹುರತಸ್ತ್ವೈವ, ಪೂಜ್ಯತ್ವಂ, ಯತಶ್ಚ ತ್ವದೃತೇ, ದೂರೇ, ಸಮೀಪೇ ವಾ, ನ ಕೇನಚಿತ್, ಕಿಂಚಿತ್, ಕ್ರಿಯತೇ, ಅತಸ್ತ್ವಮೇವ ಪೂಜಕ ಇತ್ಯರ್ಥಃ ।

ಮಂತ್ರದ ತಾತ್ಪರ್ಯಾರ್ಥವು ಈ ರೀತಿ ಇದೆ. ಎಲೈ ವಿಷ್ಣುವೇ, ನೀನು ಸಕಲೇಂದ್ರಿಯಗಳಿಗೂ ನಿಯಾಮಕ, ಒಡೆಯ, ನೀನು ಅಪರಿಮಿತವಾದ ಐಶ್ವರ್ಯ ವುಳ್ಳವನಾಗಿದ್ದೀಯೆ, ನಿರತಿಶಯವಾದ ಕೀರ್ತಿಸಂಪನ್ನನಾಗಿದ್ದೀಯೆ, ಸಕಲ ಯಜ್ಞಫಲಭೋಕ್ತನೂ ಆಗಿರುವಿ, ಆದುದರಿಂದ ಹೇ ಮಘವನ್, ಇಂದ್ರಶಬ್ದ ವಾಚ್ಯನಾದ ಪರಮಾತ್ಮನೇ, ನೀನು ನಮ್ಮ ಸಕಲೇಂದ್ರಿಯಗಳಲ್ಲೂ ಸನ್ನಿಹಿತ

ನಾಗಿರು, ನಾನು ನಿನ್ನನ್ನು ಸಕಲೇಂದ್ರಿಯಗಳಿಂದಲೂ ಪೂಜಿಸುವಂತೆ ಪ್ರೇರಿಸು. ಪರಮಾನಂದಸ್ವರೂಪವುಳ್ಳವನೂ, ಅತೀವ ಆಶ್ಚರ್ಯಮಯನೂ, ಪರಮಪೂಜ್ಯನೂ ಸಹ ಆದ ನಿನ್ನನ್ನು ನೀನೇ ಪೂಜಿಸಿಕೋ, ಎಲೈ ಸ್ವಾಮಿಯೇ, ನಾನು ಅಸ್ವತಂತ್ರ, ನೀನೇ ಸ್ವತಂತ್ರ, ಬ್ರಹ್ಮಜ್ಞಾನಿಗಳು ಜ್ಞಾನಿಗಳಲ್ಲೆಲ್ಲಾ ನಿನ್ನನ್ನು ಶ್ರೇಷ್ಠತಮನೆಂದು ಹೇಳುತ್ತಾರೆ. ನಿನ್ನ ಹೊರತಾಗಿ, ಅಂದರೆ ನೀನಲ್ಲದೆ, ನಿನ್ನ ಪ್ರೇರಣೆಯಿಲ್ಲದೆ, ಎಲ್ಲೂ, ಎಂದಿಗೂ, ಯಾರಿಂದಲೂ, ಯಾವ ಚಿಕ್ಕ ಕೆಲಸವೂ ಸಹ, ಕಡೇಪಕ್ಷ ರೆಪ್ಪೆಯನ್ನಲ್ಲಾಡಿಸುವುದೂ ಸಹ, ಅದು ಎಂತಹ ಕೆಲಸವೇ ಆಗಲಿ, ಅದು ಸಮೀಪದಲ್ಲೇ ಆಗಲಿ, ದೂರದಲ್ಲೇ ಆಗಲಿ, ಎಲ್ಲೂ ಏನೂ ನಡೆಯುವುದಿಲ್ಲ. ಸಾಧ್ಯವೂ ಇಲ್ಲ. ಸರ್ವರೀತಿಯಿಂದಲೂ, ಸ್ವರೂಪ, ಪ್ರಮಿತಿ, ಪ್ರವೃತ್ತಿಗಳಲ್ಲಿ ಕೇವಲ ನಿನ್ನ ಅಧೀನನಾಗಿರುವ ನಾನು ಏನನ್ನು ತಾನೇ ಮಾಡಿಯೇನು ? ಆದ ಕಾರಣ ನಿನ್ನನ್ನು ನೀನೇ ಪೂಜಿಸಿಕೋ, ನಿನಗೆ ನೀನೇ ಪೂಜಕ.

**ಅತೋ ಮಹಾನ್ತಮಾ ಸಮ್ಯಗ್‌ಜ್ಞಾನಂ ಕಂ ಚ ಸುಖಂ ಮಹತ್ ||೧೪೨||**

**ಯಸ್ಯ ತಸ್ಮಾದರ್ಕಶಬ್ದವಾಚ್ಯಮನ್ನಪತೇ ಪ್ರಭೋ ।**
**ತ್ವಮೇವ ತ್ವಾಂ ಚಿತ್ರಮರ್ಚ ಪರತಂತ್ರೇ ಮಯಿ ಸ್ಥಿತಃ || ೧೪೩ ||**

ಈಗ "ಮಹಾಮರ್ಕಂ ಮಘವಂ ಚಿತ್ರಮರ್ಚ" ಇದರ ಅರ್ಥವನ್ನು ವಿವರಿಸುತ್ತಾರೆ. ಹೇ ಮಘವನ್ (ತ್ವಂ), ಮಹಾಮರ್ಕಂ ತ್ವಾಂ ಚಿತ್ರಮರ್ಚ ಮಹಾನ್ತಂ ಅರ್ಕಂ. ಅರ್ಕಂ = ಅ + ಋ + ಕಂ.

ಮಹಾನ್ತಂ = ಉತ್ಕೃಷ್ಟನನ್ನು, ಸಮೀಚೀನವಾದ ಜ್ಞಾನಾನಂದ ಸ್ವರೂಪನನ್ನು 'ಋ' ಗತೌ, ಗತ್ಯರ್ಥಾಸ್ಸರ್ವೇಜ್ಞಾನಾರ್ಥಕಾಃ.

ಇಲ್ಲಿ ಚಿತ್ರ ಶಬ್ದವು ಪ್ರತಿಮಾ ಎಂಬ ಅರ್ಥದಲ್ಲಿ ಉಪಯೋಗಿಸಿದಂತೆ ತೋರಿಬರುತ್ತೆ.

ಎಲೈ ಅನ್ನಪತೇ, ಪ್ರಭೋ, ಉತ್ತಮನೂ ಸಮೀಚೀನವಾದ ಜ್ಞಾನಾನಂದ ಸ್ವರೂಪನಾದ್ದರಿಂದ ಅರ್ಕಶಬ್ದವಾಚ್ಯನಾದನೂ ಆದ ನೀನು, ಪರತಂತ್ರನಾದ ನನ್ನಲ್ಲಿ ನಿಂತು ನೀನೇ (ಪ್ರತಿಮೆಯಲ್ಲಿ) ಸನ್ನಿಹಿತನಾದ ನಿನ್ನನ್ನು ಪೂಜೆಮಾಡು.

ಮುಂದಿನ ಶ್ಲೋಕದಲ್ಲಿ ಹಿಂದೆ ಹೇಳಿದ ಅರ್ಥವನ್ನು ಸ್ಪಷ್ಟಪಡಿಸುತ್ತಾರೆ.

ಅವತಾರಿಕಾ—

"ನಾಹಂ ಕರ್ತಾ ಹರಿಃ ಕರ್ತಾ" ಎಂಬ ಅಭಿಪ್ರಾಯವನ್ನೇ ವಿಶದಪಡಿಸುತ್ತಾರೆ.

**ಮದಿಂದ್ರಿಯಗಣಂ ಸಮ್ಯಕ್ಪ್ರೇರಯಿತ್ವಾಽರ್ಚನೇ ತವ ।**
**ಅರ್ಚಾಸನ್ನಿಹಿತಂ ತ್ವಾಂ ಚ ಮಮ ದ್ವಾರಾಽರ್ಚಯಾನಿಶಮ್ ॥ ೧೪೪ ॥**

(ನಾನು ಮಾಡುವ) ನಿನ್ನ ಪೂಜೆಯಲ್ಲಿ ನನ್ನ ಇಂದ್ರಿಯ ಸಮೂಹವನ್ನು ಚನ್ನಾಗಿ ಪ್ರೇರಿಸಿ ಪ್ರತಿಮಾದಲ್ಲಿ ಸನ್ನಿಹಿತನಾದ ನಿನ್ನನ್ನು ನನ್ನ ದ್ವಾರಾ ಯಾವಾಗಲೂ (ನೀನು) ಪೂಜಿಸು.

ಅವತಾರಿಕಾ—

ಶ್ರೀಹರಿಯ ಸರ್ವನಿಯಾಮಕತ್ವ ಮಹಿಮೆಯನ್ನು ವೇದವು ಹೇಳುತ್ತಲಿರುವುದರಿಂದ ಅವನಿಗೆ ಸಮರಿಲ್ಲವೆಂಬುದನ್ನು ವಿವರಿಸುತ್ತಾರೆ.

**ಇಮಮರ್ಥಂ ಬೋಧಯಂತೀ ಶ್ರುತಿಃ ಸರ್ವನಿಯಾಮಕಮ್ ।**
**ಪ್ರಶಂಸತಿ ಹರಿಂ ಯಸ್ಮಾತ್ತಸ್ಮಾತ್ಕೋಽಸ್ಯ ಸಮೋ ವದ ॥ ೧೪೫ ॥**

ಈ ಅರ್ಥವನ್ನು ಬೋಧಿಸುವ ಶ್ರುತಿಯು ಹರಿಯನ್ನು ಸರ್ವನಿಯಾಮಕನೆಂದು ಪ್ರಶಂಸೆ ಮಾಡುತ್ತದೆಯಾದ್ದರಿಂದ ಈ ಹರಿಗೆ ಸಮರಾರು ಹೇಳು.

ಅವತಾರಿಕಾ—

ಬ್ರಹ್ಮಾದಿದೇವತೆಗಳೂ ಸಹ ಅಸ್ವತಂತ್ರರೆಂಬುದನ್ನು ಸ್ಪಷ್ಟಪಡಿಸುತ್ತಾರೆ.

**ಯತ್ಪ್ರೇರಣಾಂ ವಿನಾ ಬ್ರಹ್ಮಾದಯೋಽಪಿ ಸ್ವೀಯಶಕ್ತಿತಃ ।**
**ಕ್ಷುದ್ರಂ ತೃಣಸ್ಯೋದ್ಧರಣಮಪಿ ಕರ್ತುಂ ನ ಶಕ್ನುಯುಃ ॥ ೧೪೬ ॥**
**ಮಹಾಸಮರ್ಥಸ್ಯ ತಸ್ಯ ಸಮಃ ಕೋಽನ್ಯೋ ಭವೇದ್ವದ ।**

ಬ್ರಹ್ಮಾದಿದೇವತೆಗಳೂ ಸಹ ಶ್ರೀಹರಿಯ ಪ್ರೇರಣೆ ಇಲ್ಲದೆ ತಮ್ಮ ಶಕ್ತಿಯಿಂದ ಅಲ್ಪವಾದ ಹುಲ್ಲುಕಡ್ಡಿಯನ್ನೂ ಎತ್ತಲೂ ಕೂಡಾ ಸಮರ್ಥರಲ್ಲವೆಂದ ಮೇಲೆ ಮಹಾಸಮರ್ಥನಾದ ಈ ಹರಿಗೆ ಸಮನು ಬೇರೆ ಯಾವನು ತಾನೇ ಆದಾನು, ಹೇಳು.

**ಅನಾಶಙ್ಕಿತದೋಷತ್ವಾಚ್ಛ್ರುತಿರೇಷಾ ಪುರಾತನೀ ॥ ೧೪೭ ॥**

ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ ತುಷೋಪಮಮ್ ।
ಕಿಂ ಕುರ್ಯಾತ್ಪೌರುಷಂ ವಾಕ್ಯಂ ವದನ್ತು ಪ್ರತಿವಾದಿನಃ ॥ ೧೪೪ ॥

ದೋಷಶಂಕಾಕ್ಕೇ ಅವಕಾಶವಿಲ್ಲದ ಅಪೌರುಷೇಯ ಶ್ರುತಿಯೇ ಬಲವಾಗಿ ಉಳ್ಳ ಜ್ಞಾನಿಗಳ ಎದುರಿಗೆ ಜೊಳ್ಳು ಹೊಟ್ಟಿನಂತೆ ದುರ್ಬಲವಾದ ಪುರುಷ ವಾಕ್ಯವು ಏನುತಾನೇ ಸಾಧಿಸೀತು! ಪ್ರತಿವಾದಿಗಳು ಹೇಳಲಿ.

ಅವತಾರಿಕಾ—

ಮುಂದಿನ ಋಕ್ ಮಂತ್ರವು ಶ್ರೀಹರಿಯು ಸರ್ವತ್ರ ವಿಜಯಶಾಲಿ ಎಂಬ ಶ್ರೀಹರಿಯ ನಿರತಿಶಯವಾದ ಮಹಿಮೆಯನ್ನು ಹೇಳುತ್ತಲಿದೆ.

ಅಭೀ೩ದಮೇಕಮೇಕೋಽಅಸ್ಮಿ ನಿಷ್ಷಾಳಭಿದ್ವಾ ಕಿಮುತ್ರಯಃ ಕರನ್ತಿ ।
ಖಲೇನ ಪರ್ಷಾನ್ಪ್ರತಿಹನ್ಮಿ ಭೂರಿ ಕಿಂ ಮಾ ನಿನ್ದಂತಿ ಶತ್ರವೋಽನಿಂದ್ರಾಃ
॥ ೧೪೫ ॥

(ಋಗ್ವೇದ 8–1–6)

ಅಭಿ ಇದಂ ಏಕಂ ಏಕಃ ಅಸ್ಮಿ ನಿಷ್ಷಾಟ್ ಅಭಿ
ದ್ವಾ ಕಿಮ್ ಊ ಇತಿ ತ್ರಯಃ ಕರನ್ತಿ
ಖಲೇ ನ ಪರ್ಷಾನ್ ಪ್ರತಿ ಹನ್ಮಿ ಭೂರಿ
ಕಿಂ ಮಾ ನಿನ್ದಂತಿ ಶತ್ರವಃ ಅನಿನ್ದ್ರಾಃ ॥

(ಋಗ್ವೇದ 8–1–6)

ಟೀಕಾ—

ಇದಮೇಕಂ = ಇದಮೇಕಂ (ವಿಶ್ವಂ); ಅಭಿ = ಪ್ರತಿ; ಅಹಂ = ಅಹಮೇಕಃ; ನಿಷ್ಷಾಳಸ್ಮಿ = ನಿತರಾಂಸಹತ ಇತಿ ನಿಷ್ಷಾಟ್; ಅಭಿದ್ವಾ = ದ್ವೌ ಪ್ರಪಂಚಾವಭಿಪ್ರತಿ (ಅಹಮೇಕೋನಿಷ್ಷಾಳಸ್ಮಿ); ಕಿಮು ಇತಿ ತ್ರಯಃ ಕರನ್ತಿ = ತ್ರಯೋಪಿ ಪ್ರಪಂಚಾಮಮಕಿಮೇವ ಕುರ್ವನ್ತಿ, ನಕಿಮಪಿ ಮಮ

ಅನಿಷ್ಟಂ ಕರ್ತುಮೀಶತೇ. ಅಹನೇವ = ಕಿಂತು ಅಹನೇವ; ಖಲ ಇವ = ಖಲಸ್ಥಿತಾ ನಿಧಾನ್ಯಾನೀವ; ಭೂರಿ = ಭೂರೀನ್ = ಬಹೂನ್ ಬಹುವಾರಂ ವಾ; (ತಾನ್) ಪರ್ಷಾನ್ = ತಾನ್ ನಿಷ್ಠುರಾನ್ ನಿಂದಕಾನ್; ಪ್ರತಿಹನ್ಮಿ = ಪ್ರತಿಹನ್ಮಿ (ತಸ್ಮಾತ್); ಅನಿಂದ್ರಾಃ = ಅನೀಶ್ವರಾಃ ತೇ; ಶತ್ರವಃ = ಶತ್ರವಃ; ಮಾಂ ಕಿಂ ನಿಂದಂತಿ.

**ಇತಿಸ್ಪಷ್ಟಶ್ರುತಿರಿಯಂ ಜೇತಾರಮಪರಾಜಿತಂ ।**
**ಆಹಾಸುರಾರಿಂ ನೃಹರಿಂ ತತಃ ಕೋಽಸ್ಯ ಸಮೋ ವದ ॥ ೧೫೦ ॥**

ಹೀಗೆ ಈ ಸ್ಪಷ್ಟಶ್ರುತಿಯು ಅಸುರಶತ್ರುವಾದ ನರಹರಿಯು ಸರ್ವರನ್ನೂ ಜಯಿಸಶಕ್ಯವನು ಯಾರಿಂದಲೂ ಜಯಿಸಲ್ಪಡದವನು ಎಂಬುದಾಗಿ ವರ್ಣಿಸುತ್ತದೆ. ಆದ್ದರಿಂದ ಇವನಿಗೆ ಸಮನಾರು ಹೇಳು.

ಅವತಾರಿಕಾ—

ಶ್ರೀ ನರಹರಿಯು, ಸರ್ವತ್ರ ಸರ್ವರಿಂದಲೂ, ಎಲ್ಲಾ ಕಾಲದಲ್ಲೂ ವಿಜಯ ಶಾಲಿಯೆಂದು ಹಿಂದಿನ ವೇದವಾಣಿಯು ವರ್ಣಿಸುತ್ತಲಿದೆ.

**ಏಕಂ ಜಗದಿದಂ ದ್ವೌ ವಾ ಪ್ರಪಂಚೌ ತ್ರಯ ಏವ ವಾ ।**
**ಮಾಂ ಪ್ರತ್ಯಾಯಾಂತು ಸಮರೇ ನಿತರಾಂ ಶಕ್ತಿಮತ್ವತಃ ॥ ೧೫೧ ॥**
**ನಿಷ್ಫಾಳಾಹ್ಯೋಽಭಿಗಂತಾಸ್ಮಿ ಸೋಽಹನೇಕೋಽಪಿ ತಾನ್ಪ್ರತಿ ।**

ಚೇತನ ಮತ್ತು ಅಚೇತನಾತ್ಮಕವಾದ ಇಡೀ ಜಗತ್ತು ಒಂದೇ ಆಗಲಿ ಎರಡೇ ಆಗಲಿ ಅಥವಾ ಮೂರು ಪ್ರಪಂಚಗಳೇ ಆಗಲಿ, ನನಗೆ ಎದುರಾಗಿ ನನ್ನೊಡನೆ ಯುದ್ಧಕ್ಕೆ ಸನ್ನದ್ಧವಾಗಿ ಬಂದರೂ ಸಹ ನಾನು ಅವುಗಳಿಗೆ ಸ್ವಲ್ಪವೂ ಹೆದರದೇ ಸಹನೆಯಿಂದ ಅಮಿತವಾದ ನನ್ನ ಶಕ್ತಿಯಿಂದ ಅವುಗಳನ್ನು ನಾನೊಬ್ಬನೇ ಎದುರಿಸುತ್ತೇನೆ.

**ಅಶಕ್ತತ್ವಾತ್ ಅನಿಂದ್ರಾಖ್ಯಾಃ ಶತ್ರವಸ್ತೇ ತ್ರಯೋಽಪಿ ಮಾಮ್ ॥೧೫೨॥**

**ಕಿಂ ಕುರ್ವನ್ತಿ ಅಹಮೇನ್ಯೈತಾನ್ ಸರ್ವಾನಪಿ ಚ ಲೀಲಯಾ ।**
**ಪರ್ಷಾನ್ ಶಿಲಾದಿಧಾನ್ಯಾಕೃಘಾನ್ ಭೂರಿ ಭೂರೀಂಶ್ಚ ತೈಲಕೃತ್ ॥೧೫೩॥**

ಯಥಾ ಖಲೇ ಚೂರ್ಣಯತಿ ತಥಾಹಂ ಪ್ರತಿಹನ್ಮಿ ಚ ।
ಅನಿಂದ್ರಾಃ ಶತ್ರವಸ್ತ್ವೇತೇ ಕಿಂ ಕುರ್ವಂತಿ ತ್ರಯೋಽಪಿ ಮಾಮ್ ॥೧೫೪॥

ಅಶಕ್ತರಾದ, ಅನೀಶ್ವರರಾದ (ಅಸ್ವತಂತ್ರರಾದ), ನನ್ನೊಡನೆ ಘರ್ಷಣೆ ಮಾಡುವ ಯಾವ ಬಗೆಯಾದ ಸಾಮರ್ಥ್ಯವೂ ಇಲ್ಲದಿರುವ ಆ ಮೂರು ಜನ ಶತ್ರುಗಳೂ ಸಹ ನನ್ನನ್ನು ಏನುತಾನೇ ಮಾಡಿಯಾರು ? ನಾನೊಬ್ಬನೇ ಕೇವಲ ಲೀಲಾಮಾತ್ರದಿಂದಲೇ ಅವರೆಲ್ಲರನ್ನೂ ಅಂದರೆ, ನಿಷ್ಠುರರಾದ ನಿಂದಕರಾದ ಆ ನೀಚಕರೆಲ್ಲರನ್ನೂ ಸಹ ಎಳ್ಳೇ ಮೊದಲಾದ ಎಣ್ಣೆ ಬೀಜಗಳಿಂದ ಎಣ್ಣೆಯನ್ನು ತೆಗೆಯುವ ಗಾಣಿಗನು ಎಳ್ಳೇ ಮೊದಲಾದ ರಾಶಿರಾಶಿಯಾದ ಧಾನ್ಯಗಳನ್ನು ಕಣದಲ್ಲಿ ಚೂರುಚೂರುಮಾಡಿ ಗಾಣಕ್ಕೆ ಹಾಕಿ ಹಿಂಡಿ ಹಿಪ್ಪೆ ಮಾಡಿ ಹೇಗೆ ನಾಶ ಮಾಡುವನೋ ಅದರಂತೆ ಎಲ್ಲರನ್ನೂ ನಾನು ಕೊಂದುಬಿಡುತ್ತೇನೆ.

ಅಸಮರ್ಥರಾದ ಆ ಮೂರುಜನ ಶತ್ರುಗಳು ನನ್ನನ್ನೇನು ತಾನೇ ಮಾಡಿಯಾರು ! ನಾನು ಯಾರಿಗೂ ಹೆದರತಕ್ಕವನಲ್ಲ. ಯಾರೂ ಸಹ ನನ್ನನ್ನು ಎದುರಿಸಲಾರರು. ನಿರವಧಿಕವಾದ ಅಚಿಂತ್ಯಾದ್ಭುತವಾದ ಶಕ್ತಿಸಂಪನ್ನನಾದ ನನಗೆ ಇಡೀ ಜಗತ್ತಿನಲ್ಲಿ ಯಾರೂ ಎದುರಾಳೇ ಇರುವುದಿಲ್ಲ.

ಇಂದ್ರಂ ಮಹೈಶ್ವರ್ಯವಂತಂ ಮಹಾಬಲಪರಾಕ್ರಮಮ್ ।
ಯಸ್ಮಾನ್ಮುಖೋದ್ಘಾಟನಂ ಚ ಮದ್ವಶಂ ಸರ್ವದೇಹಿನಾಮ್ ॥ ೧೫೫ ॥

ತತೋ ದೋಷಾತಿದೂರಂ ಮಾಂ ಸ್ವವಾಚಾಂ ಚ ಪ್ರವರ್ತಕಮ್ ।
ಜಿಹ್ವಾಂ ಚಾಲಯಿತುಂ ಚೈವಾನಿಂದ್ರಾ ನೋ ಶತ್ರವಸ್ತ್ವಮೀ ॥ ೧೫೬ ॥

ಕಿಂ ವಾ ನಿಂದಂತಿ ಸುಗುಣಪಾತ್ರೀಭೂತಂ ಪರಾತ್ಪರಮ್ ।
ಇತ್ಯಾಹ ತಸ್ಯ ಚೇತಾತ್ರ ತ್ರಿಲೋಕ್ಯಾಮಪಿ ಕೋ ವದ ॥ ೧೫೭ ॥

ಸರ್ವಪ್ರಾಣಿಗಳ ವಚನಶಕ್ತಿಯೂ, ಶ್ವಾಸೋಚ್ಛ್ವಾಸಾದಿಗಳೂ ಸಹ ಯಾವ ನನ್ನ ಅಧೀನವಾಗಿದೆಯೋ ನಿರವಧಿಕ ಪರಮೈಶ್ವರ್ಯ ಸಂಪನ್ನನಾದುದರಿಂದಲೇ ಇಂದ್ರಾದಿಶಬ್ದಗಳಿಂದ ಪರಮಮುಖ್ಯವೃತ್ತಿಯಿಂದ ಪ್ರತಿಪಾದ್ಯನಾದ ಮಹಾಬಲ ಪರಾಕ್ರಮಯುಕ್ತನಾದ, ಸಕಲದೋಷದೂರನಾದ, ಸಕಲಚೇತನರ ವಾಗಾದಿ ಇಂದ್ರಿಯಗಳಿಗೆ ಸ್ವಾಮಿಯಾಗಿ ಪ್ರವರ್ತಕನಾಗಿರತಕ್ಕ ನನ್ನ ವಿಷಯದಲ್ಲಿ ನನಗೆ

ವಿರುದ್ಧವಾಗಿ ನಾಲಿಗೆಯನ್ನು ಅಲ್ಲಾಡಿಸಲೂ ಸಹ ಅಸಮರ್ಥರಾದ ಈ ಶತ್ರುಗಳು ಸರ್ವೋತ್ತಮನಾದ ಸರ್ವಸದ್ಗುಣಪಾತ್ರನಾದ ನನ್ನನ್ನು ಏನುತಾನೇ ನಿಂದೆ ಮಾಡಿಯಾರು' ಎಂದು ಪರಮಂಗಳಕರವಾದ ವೇದವಾಣಿಯು ಪರಮಾತ್ಮನ ಮಹಿಮೆಯನ್ನು ಹೇಳುತ್ತಲಿದೆ.

ಇಂತಹ ಅಚಿಂತ್ಯಾದ್ಭುತಶಕ್ತಿ ಪರಾಕ್ರಮಗಳನ್ನುಳ್ಳ ಸರ್ವತ್ರ ಜಯಶೀಲನಾದ ಆ ಪರಮಾತ್ಮನನ್ನು ಗೆಲ್ಲುವವನು ಮೂರು ಲೋಕದಲ್ಲೂ ಯಾರಿರುತ್ತಾನೆ, ಹೇಳು.

ಹಂತುಂ ಶಕ್ತಃ ಸ ಸಕಲಂ ಕಿಂ ನ ಸರ್ವಜಯೀ ವದ ।
ಈದೃಶಸ್ಯ ಜಗತ್ಯೈಕ್ಯಂ ಸಾಮ್ಯಂ ವಾ ಸ್ಯಾತ್ಕಥಂ ವದ ॥ ೧೫೮ ॥

ಸರ್ವರನ್ನೂ ಜಯಿಸತಕ್ಕ ಆ ಪರಮಾತ್ಮನು ಸಕಲವನ್ನೂ ಸಂಹಾರ ಮಾಡಲು ಶಕ್ತನಲ್ಲವೇನು? ಹೇಳು.

ಇಂತಹ ಅದ್ಭುತ ಸಾಮರ್ಥ್ಯವುಳ್ಳ ಪರಮಾತ್ಮನಿಗೆ ಈ ಅಸಾರವಾದ, ಅನಿತ್ಯವಾದ, ಅಶಕ್ತವಾದ, ಅಸ್ವತಂತ್ರವಾದ, ಜಗತ್ತಿನಿಂದ ಐಕ್ಯವಾಗಲಿ, ಸಾಮ್ಯವಾಗಲಿ (ಹೋಲಿಕೆಯಾಗಲಿ) ಹೇಗೆತಾನೇ ಆದೀತು? ಹೇಳು.

ಅನಾಶಂಕಿತದೋಷತ್ವಾತ್ ಶ್ರುತಿರೇಷಾ ಪುರಾತನೀ ।
ಬಲಂ ಯೇಷಾಂ ಹಿ ವಿದುಷಾಂ ತೇಷಾಮಗ್ರೇ ತುಷೋಪಮಮ್ ॥೧೫೯॥

ಕಿಂ ಕುರ್ಯಾತ್ ಪೌರುಷಂ ವಾಕ್ಯಂ ವದಂತು ಪ್ರತಿವಾದಿನಃ ॥ ೧೬೦ ॥

ನಿತ್ಯವಾದ ದೋಷಶಂಕಾಲೇಶರಹಿತವಾದುದರಿಂದಲೇ ಅಪೌರುಷೇಯವಾದ ಸ್ವತಃ ಪ್ರಮಾಣವಾದ ವೇದವಾಣಿಯೇ ಯಾವ ಜ್ಞಾನಿಗಳಿಗೆ ಪ್ರಮೇಯ ಪ್ರತಿಪಾದನೆಯಲ್ಲಿ ಪ್ರಬಲಪ್ರಮಾಣವಾಗಿದೆಯೋ, ಅಂದರೆ ಸ್ವತಃ ಪ್ರಮಾಣವಾದ ಅಪೌರುಷೇಯವಾದ ವೇದವೆಂಬ ಅಂತಹುದರ ಬಲದಿಂದಲೇ ವಿದ್ವಾಂಸರು ಪ್ರಮೇಯವನ್ನು ನಿರ್ಧರಿಸುತ್ತಿರುವುದರಿಂದ ಅದರ ಮುಂದೆ, ದೋಷಶಂಕಾದುಷ್ಟವಾದ ಹೊಟ್ಟನಂತಿರುವ ದೋಷಶಂಕಾಕಲಂಕಿತವಾದ ಪೌರುಷೇಯವಾದ ವಾಕ್ಯಗಳು, ಏನನ್ನು ತಾನೇ ಸಾಧಿಸಿಯಾವು? ಪ್ರತಿವಾದಿಗಳು ಹೇಳಲಿ.

ಅಭಿಪ್ರಾಯ—

ಅಜ್ಞಾನ, ವಿಪರೀತ ಜ್ಞಾನಾದಿಗಳು ಪುರುಷದೋಷಗಳು. ಅಂತಹ ದೋಷಗಳನ್ನುಳ್ಳ ಪುರುಷನಿಂದ ಉಚ್ಚರಿಸಲ್ಪಟ್ಟ ವಾಕ್ಯಗಳು ಅಬೋಧಕತ್ವ, ವಿಪರೀತ ಬೋಧಕತ್ವಾದಿದೋಷಗಳಿಂದ ದುಷ್ಟಗಳಾಗಿವೆ. ಆದಕಾರಣ ಅತೀಂದ್ರಿಯ ಗಳಾದ, ಧರ್ಮಾಧರ್ಮಗಳ ವಿಷಯದಲ್ಲಾಗಲಿ, ಸ್ವರ್ಗ, ನರಕ, ಮೋಕ್ಷ, ಪರಮಾತ್ಮ ಮುಂತಾದ ಅತೀಂದ್ರಿಯ ಪದಾರ್ಥಗಳ ವಿಷಯಗಳಲ್ಲಿ ಪೌರುಷೇಯ ವಾಕ್ಯಗಳಿಂದ ಯಾವ ನಿಶ್ಚಯವೂ ಆಗಲಾರದು. ಆದರೆ ಅಪೌರುಷೇಯಗಳಾದ ವೇದಗಳಾದರೋ ಪುರುಷದೋಷ ನಿಬಂಧನದೋಷಗಳಿಂದ ದೂರವಾಗಿವೆ. ಈ ವೈದಿಕವಾಙ್ಮಯವು ಯಾರಿಂದಲೂ ರಚಿಸಲ್ಪಟ್ಟದ್ದಲ್ಲ. ಅನಾದಿಯಾದುದು ನಿತ್ಯವಾದುದು ಮತ್ತು ಸ್ವತಃ ಪ್ರಮಾಣವಾಗಿವೆ. "ನಾವಿದ್ಯಮಾನಂ ಬ್ರುವತೇ ವೇದಾಃ ಧ್ಯಾತುಂ ನ ವೈದಿಕಾಃ" ಇತ್ಯಾದಿ ಪ್ರಮಾಣಗಳಿಂದ ವೇದಗಳು ಎಂದಿಗೂ ಸುಳ್ಳನ್ನು ಹೇಳುವುದಿಲ್ಲ. ವೇದಾನುಸಾರಿಗಳಾದ ವೈದಿಕರೂ ಎಂದೂ ಇಲ್ಲದ್ದನ್ನು ಹೇಳುವುದಿಲ್ಲ. ಸ್ವತಃ ಪ್ರಮಾಣವಾದ ವೇದದಿಂದ ಯಥಾರ್ಥವಾಗಿ ಅತೀಂದ್ರಿಯ ಪದಾರ್ಥಗಳ ನಿಶ್ಚಯವು ಉಂಟಾಗುತ್ತಲಿದೆ. ವೈದಿಕ ವಿದ್ವಾಂಸರಿಗೆ ವಿಷಯಪ್ರತಿಪಾದನೆಯಲ್ಲಿ ವೇದದ ಬಲವೇ ಬಲ. ವೇದವೇ ಬಲವಾದ ಆಧಾರ. ಅದನ್ನು ಯಾರೂ ಅಲ್ಲಗಳೆಯುವಂತಿಲ್ಲ. ಅಲ್ಲಾಡಿಸುವಂತಿಲ್ಲ. ಅನಾದಿ ನಿತ್ಯವಾದ ವೇದವಾಣಿಯಿಂದ ಸಿದ್ಧವಾದ ಪ್ರಮೇಯಕ್ಕೆ ಯಾವ ಕಾಲದಲ್ಲೂ ಬಾಧವೆಂಬುದೇ ಇಲ್ಲ. ಅಂತಹ ಪ್ರಬಲಪ್ರಮಾಣದ ಮುಂದೆ ಸಂಭಾವಿತ ದೋಷ ಭೂಯಿಷ್ಠವಾದ ಲೌಕಿಕವಾಕ್ಯವು ಜೊಳ್ಳು ಹೊಟ್ಟನಂತೆ ಯಥಾರ್ಥಜ್ಞಾನ ಜನಕವಲ್ಲ. ಅದರ ಬೆಂಬಲದಿಂದ ಪ್ರತಿವಾದಿಗಳು ಏನನ್ನೂ ಸಾಧಿಸಲಾರರು, ಮತ್ತು ಪ್ರಬಲವೇದಸಿದ್ಧವಾದುದರ ವಿಷಯವನ್ನೂ ಅಲ್ಲಗಳೆಯಲಾರರು ಎಂದು ಅಭಿಪ್ರಾಯ.

## ಶ್ರೀ ಭಾಗವತ ಸ್ಕಂಧ ೪, ಅಧ್ಯಾಯ ೮, ಶ್ಲೋಕ ೨೨-೨೩

ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ ।
ಪ್ರಣೇಮುಃ ಸಹಸೋತ್ಥಾಯ ಬ್ರಹ್ಮೇಂದ್ರತ್ರ್ಯಕ್ಷನಾಯಕಾಃ ॥ ೧೬೧ ॥

ತತ್ತೇಜಸಾ ಹತರುಚಃ ಸನ್ನಜಿಹ್ವಾಃ ಸಸಾಧ್ವಸಾಃ ।
ಮೂರ್ಧ್ನಿ ಕೃತಾಂಜಲಿಪುಟಾ ಉಪತಸ್ಥುರಧೋಕ್ಷಜಮ್ ॥ ೧೬೨ ॥

ಇತಿ ಭಾಗವತೋಕ್ತ್ಯಾ ತೇ ಬ್ರಹ್ಮರುದ್ರಾದಯಃ ಸುರಾಃ ।
ವಿಷ್ಣುಭಕ್ತಸ್ಯ ದಕ್ಷಸ್ಯ ದ್ರೋಹಾಚ್ಚಕಿತಚೇತಸಃ ।
ತದ್ಭಾಸಾ ಹತಭಾಸಶ್ಚ ಕಿಂ ವಾಚ್ಯಮಿತಿಶಂಕಯಾ ॥ ೧೬೩ ॥

ಮುಖಾಂತರ್ಲೀನಜಿಹ್ವಾಶ್ಚ ಶುಷ್ಯದ್ರದನಪಂಕ್ತಯಃ ।
ಗೃಹ್ಣೀಯಾದ್ವಾ ನ ಗೃಹ್ಣೀಯಾದ್ವೇತಿ ಚಿತ್ತಸ್ಥಸಾಧ್ವಸಾತ್ ॥ ೧೬೪ ॥

ವೇಪಮಾನಾಖಿಲಾಂಗಾಶ್ಚ ಸಹಸೋತ್ಥಾಯ ಸರ್ವಶಃ ।
ಕೃತಾಂಜಲಿಪುಟಾ ಮೂರ್ಧ್ನಾ ಪ್ರಣೇಮುಃ ಕಿಲ ಕೇಶವಮ್ ॥ ೧೬೫ ॥

ಇಮೇ ಸಮಾಸ್ತಸ್ಯ ಕಥಂ ವದಂತು ಪ್ರತಿವಾದಿನಃ ॥ ೧೬೬ ॥

ಈ ಮೇಲಿನ ಭಾಗವು ಶ್ರೀಮದ್ಭಾಗವತದ ನಾಲ್ಕನೇ ಸ್ಕಂಧದ ಎಂಟನೆಯ ಅಧ್ಯಾಯದ ೨೨-೨೩ ಶ್ಲೋಕಗಳಿಂದ ಪ್ರಾರಂಭವಾಗಿದೆ. ಇದು ದಕ್ಷಪ್ರಜೇಶ್ವರರ ಯಜ್ಞದ ಪ್ರಸಕ್ತಿಯಿಂದ ಕೂಡಿದ ಕಥಾಭಾಗವನ್ನು ಮುಂದೆ ವಿವರಿಸಲಾಗುತ್ತದೆ. ದಕ್ಷ ಪ್ರಜಾಪತಿಯ ವಿಚಾರವು ಶ್ರೀ ಭಾಗವತದ ನಾಲ್ಕನೇ ಸ್ಕಂಧದ ಎರಡನೇ ಅಧ್ಯಾಯದ ನಾಲ್ಕನೇ ಶ್ಲೋಕದಿಂದ ವಿದುರಮೈತ್ರೇಯ ಸಂವಾದರೂಪವಾಗಿ ಪ್ರಾರಂಭವಾಗಿದೆ. ಇದು ಈ ನಾಲ್ಕನೇ ಸ್ಕಂಧದ ೮ನೇ ಅಧ್ಯಾಯದ ಅರವತ್ತನೇ ಶ್ಲೋಕ ಪೂರ್ತಿಯಾಗಿ ಮೈತ್ರೇಯರಿಂದ ವಿದುರನಿಗೆ ಉಕ್ತವಾಗಿದೆ. ದಕ್ಷನ ಶಿಕ್ಷಾರೂಪವಾದ ಈ ರುದ್ರದೇವರ ಈ ಕಾರ್ಯವನ್ನು ನಾನು (ಮೈತ್ರೇಯನಾದ ನಾನು) ಬೃಹಸ್ಪತ್ಯಾಚಾರ್ಯರ ಅವತಾರಭೂತನಾದ ಉದ್ಧವನಿಂದ ಕೇಳಿದ್ದೇನೆಂದು ಮೈತ್ರೇಯರು ವಿದುರನಿಗೆ ತಿಳಿಸಿದ್ದಾರೆ.

ದಕ್ಷರೆಂಬ ಹೆಸರಿನವರು ಇಬ್ಬರಿರುತ್ತಾರೆ. ಸ್ವಾಯಂಭುವಮನ್ವಂತರದವರೊಬ್ಬರು ಬ್ರಹ್ಮದೇವರ ಮಕ್ಕಳು. ಅವರ ಹೆಂಡತಿಯೇ ಸ್ವಾಯಂಭುವಮನುವಿನ

ಮಗಳಾದ ಪ್ರಸೂತಿದೇವಿಯು. ಅವಳಿಗೆ ಹದಿನಾರು ಜನ ಮಕ್ಕಳು. ಆ ಪೈಕಿ ಧರ್ಮಪ್ರಜಾಪತಿಯ ಹೆಂಡತಿಯರು ಹದಿಮೂರು ಜನ. ಆ ಹದಿಮೂರುಮಂದಿ ಶ್ರದ್ಧಾ, ಮೈತ್ರೀ, ದಯಾ, ಶಾಂತಿಃ, ತುಷ್ಟಿಃ, ಪುಷ್ಟಿಃ, ಕ್ರಿಯಾ, ಉನ್ನತಿಃ, ಬುದ್ಧಿಃ, ಮೇಧಾ, ತಿತಿಕ್ಷಾ, ಹ್ರೀಃ, ಮೂರ್ತಿಃ ಎಂದು ಧರ್ಮಪ್ರಜಾಪತಿಯ ಪತ್ನಿಯರು, ಹದಿನಾಲ್ಕನೆಯವಳು ಸ್ವಾಹಾದೇವಿ ಅಗ್ನಿದೇವನ ಹೆಂಡತಿ. ಹದಿನೈದನೆಯವಳು ಸ್ವಧಾದೇವಿ. ಇವಳೇ ಅಗ್ನಿಷ್ವಾತ್ತರೆಂಬ ಪಿತೃದೇವತೆಗಳ ಹೆಂಡತಿಯು. ಹದಿನಾರನೆಯವಳೇ ದಾಕ್ಷಾಯಣೀ ಸತೀ ರುದ್ರದೇವರ ಹೆಂಡತಿಯು. ಚಾಕ್ಷುಷ ಮನ್ವಂತರದಲ್ಲಿ ದಕ್ಷಪ್ರಚೇತರಿಂದ ವಾರ್ಕ್ಷಿಯೆಂಬ ಮಾರಿಷಾದೇವಿಯಲ್ಲಿ ಹುಟ್ಟಿದವನು ಮತ್ತೊಬ್ಬನು ದಕ್ಷನಾಮಕನಿರುತ್ತಾನೆ. ಅವನ ಹೆಂಡತಿಯು ಪಂಚಜನ ಪ್ರಜಾಪತಿಯ ಮಗಳಾದ ಅಸಿಕ್ನಿಯು. ಪಂಚಜನ ಪ್ರಜಾಪತಿಗೆ ವೀರಣ ಎಂದು ಮತ್ತೊಂದು ಹೆಸರು. ಅಸಿಕ್ನೀಗೆ ವೀರಿಣೀ ಎಂದು ಮತ್ತೊಂದು ಹೆಸರುಂಟು. ಅವರ ಮಕ್ಕಳು ಹರ್ಯಶ್ವ ಮತ್ತು ಶಬಲಾಶ್ವರು. ಅವರೆಲ್ಲಾ ನಾರದರ ಉಪದೇಶದಿಂದ ಯತಿಗಳಾದರು. ಅಸಿಕ್ನಿಯಲ್ಲಿ ದಕ್ಷನಿಂದ ಅರವತ್ತುಜನ ಕನ್ಯೆಯರು ಜನಿಸಿದರು. ಆ ಪೈಕಿ ಧರ್ಮಪ್ರಜಾಪತಿಗೆ ಹತ್ತುಜನರನ್ನೂ, ಕಶ್ಯಪರಿಗೆ ಹದಿಮೂರು ಜನರನ್ನೂ, ಮತ್ತೆ ತಾರ್ಕ್ಷ್ಯನಾಯಕರಾದವರಿಗೆ ಮತ್ತೆ ನಾಲ್ಕು ಜನರನ್ನೂ, ಒಟ್ಟು ಕಶ್ಯಪರಿಗೆ ಹದಿನೇಳು ಜನರನ್ನೂ, ಚಂದ್ರನಿಗೆ ಇಪ್ಪತ್ತೇಳು ಜನರನ್ನೂ, ಭೂತನಿಗೆ ಇಬ್ಬರನ್ನೂ, ಅಂಗಿರಸನಿಗೆ ಇಬ್ಬರನ್ನೂ ಕೃಶಾಶ್ವನಿಗೆ ಇಬ್ಬರನ್ನೂ, ಒಟ್ಟು ಅರವತ್ತುಜನರನ್ನು ಕೊಟ್ಟು ಮದುವೆಮಾಡಿದನು. ಇದು ಮತ್ತೊಬ್ಬನಾದ ಚಾಕ್ಷುಷಮನ್ವಂತರದ ದಕ್ಷನ ವಿಚಾರ. ಪ್ರಕೃತಸ್ವಾಯಂಭುವ ಮನ್ವಂತರದ ರುದ್ರದೇವರ ಮಾವನಾದ ದಕ್ಷನ ವಿಚಾರವಾಗಿರುವ ವಿವರವನ್ನು "ತಮುಪಾಗತಮಾಲಕ್ಷ್ಯ" ಎಂದು ಶ್ರೀವಾದಿರಾಜರು ಉದಾಹರಿಸಿರುತ್ತಾರೆ.

ಹಿನ್ನೆಲೆ—

ಹಿಂದೆ ಪ್ರಜೇಶ್ವರರು ಸೇರಿ ಪ್ರಾರಂಭಿಸಿದ್ದ ಸತ್ರಯಾಗಕ್ಕೆ ಆಗಮಿಸಿದ ದಕ್ಷ ಪ್ರಜೇಶ್ವರರು ಅಲ್ಲಿ ಸೇರಿದ್ದವರಲ್ಲಿ ಬ್ರಹ್ಮದೇವರು ಮತ್ತು ರುದ್ರದೇವರು ಹೊರತಾಗಿ ಎಲ್ಲರಿಂದಲೂ ಪುರಸ್ಕರಿಸಲ್ಪಟ್ಟವರಾದರೂ, ತನಗೂ ಹಿರಿಯವರಾದ ಚತುರ್ಮುಖ ಬ್ರಹ್ಮದೇವರನ್ನು ಕುರಿತು ನಮಸ್ಕಾರಮಾಡಿ, ಆ ಚತುರ್ಮುಖ ಬ್ರಹ್ಮದೇವರಿಂದ ಆಜ್ಞಪ್ತರಾಗಿ ತಮ್ಮ ಆಸನದಲ್ಲಿ ಕುಳಿತರು. ತಮ್ಮ ಹದಿನಾರು ಹೆಣ್ಣುಮಕ್ಕಳಲ್ಲಿ

ಹದಿಮೂರು ಹೆಣ್ಣುಮಕ್ಕಳನ್ನು ಧರ್ಮಪ್ರಜಾಪತಿದೇವನಿಗೂ, ಒಬ್ಬಳನ್ನು ಅಗ್ನಿ ದೇವನಿಗೂ, ಮತ್ತೊಬ್ಬಳನ್ನು ಪಿತೃದೇವತೆಗಳಿಗೂ, ಕಿರಿಯಪುತ್ರಿಯಾದ ಸತೀದೇವಿ ಯನ್ನು ರುದ್ರದೇವರಿಗೂ ಕೊಟ್ಟು ಮದುವೆಮಾಡಿದ್ದರು.

ಭ್ರಾತೃಪತ್ನೀ ಗುರೋಃ ಪತ್ನೀ, ರಾಜಪತ್ನೀ ತಥೈವ ಚ ।
ಪತ್ನೀಮಾತಾ ಸ್ವಮಾತಾ ಚ ಪಂಚೈತಾಃ ಮಾತರಃ ಸ್ಮೃತಾಃ ॥

ಎಂಬ ಶಾಸ್ತ್ರ ಪ್ರಮಾಣದ ವಚನದಂತೆ ರುದ್ರದೇವರ ಪತ್ನಿಯಾದ ಸತೀದೇವಿಗೆ ದಕ್ಷರ ಹೆಂಡತಿಯಾದ ಸ್ವಾಯಂಭುವಮನುರಾಜರ ಮಗಳಾದ ಪ್ರಸೂತಿಯು ತಾಯಿಯಾದಮೇಲೆ ಅಳಿಯಂದಿರಾದ ರುದ್ರದೇವರಿಗೂ ತಾಯಿಸಮಾನರಾದುದ ರಿಂದ ಮಾವಂದಿರಾದ ದಕ್ಷರು ತಂದೆಯಾದುದರಿಂದ, ಆ ಯಜ್ಞಸಭೆಗೆ ದಕ್ಷರು ಬಂದಕೂಡಲೇ ರುದ್ರದೇವರು ಬಂಧುವಿನ ರೀತಿಯಲ್ಲಿ ಮಾವನಿಗೆ ಎದ್ದು ನಮಸ್ಕರಿಸ ಬೇಕೆಂಬುದನ್ನು ದಕ್ಷರು ನಿರೀಕ್ಷಿಸಿದ್ದರು. ಆದರೆ ಆ ಸಮಯದಲ್ಲಿ ರುದ್ರದೇವರು ಶ್ರೀ ಮಹಾವಿಷ್ಣುವಿನ ಧ್ಯಾನಾಸಕ್ತರಾಗಿದ್ದುದರಿಂದ ತಾರತಮ್ಯದಲ್ಲಿ ಕಿರಿಯರಾದ ದಕ್ಷಾಂತರ್ಯಾಮಿಯಾದ ಪರಮಾತ್ಮನನ್ನು ವಿಧಿಪ್ರಕಾರವಾಗಿ ಚಿಂತಿಸಿದುದರಿಂದ ಕರ್ತವ್ಯಲೋಪರಹಿತರಾಗಿದ್ದುದರಿಂದ ರುದ್ರದೇವರು ದೋಷರಹಿತರಾಗಿಯೇ ಏಕಾಂತಧ್ಯಾನಾಸಕ್ತರಾಗಿ ಬಹಿರ್ವಿಮುಖರಾಗಿದ್ದರು. ಮತ್ತು ತಾರತಮ್ಯದಲ್ಲಿ ಹಿರಿಯರಾದವರು ಕಿರಿಯರಾದವರಿಗೆ ನಮಸ್ಕಾರಾದಿಗಳನ್ನು ಮಾಡುವುದು ಶಾಸ್ತ್ರ ವಿಹಿತವಲ್ಲ. ಮತ್ತೇನೆಂದರೆ ಪರಮಾತ್ಮನು ಸರ್ವಾಂತರ್ಯಾಮಿಯಾಗಿರುವುದರಿಂದ ಅಂತಹ ಅಂತರ್ಯಾಮಿಯಾದ ಪರಮಾತ್ಮನನ್ನು ಅಂತರಂಗದಲ್ಲಿ ಚಿಂತಿಸುವುದೇ ವಿಹಿತವಾದ ಮಾರ್ಗ. ಅದೇ ರೀತಿಯನ್ನು ರುದ್ರದೇವರು ಅನುಸರಿಸಿದರು. ಇದನ್ನರಿಯದೇ ದಕ್ಷರು ಮಾವನಾದ ನನಗೆ ನಮಸ್ಕಾರ ಮಾಡಲಿಲ್ಲವೆಂದು ಕೋಪಾವಿಷ್ಟರಾಗಿ ರುದ್ರರನ್ನು ನಾನಾ ರೀತಿಯಾಗಿ ಕಟುವಾದ ಭಾಷೆಯಿಂದ ನಿಂದಿಸಿದರು. ದೂಷಿಸಿದ್ದು ಮಾತ್ರವಲ್ಲದೇ "ಯಜ್ಞದಲ್ಲಿನ ಯಾಗಭಾವವು ಇಂದ್ರಾದಿಗಳೊಂದಿಗೆ ರುದ್ರನಿಗೆ ಇಲ್ಲದೇ ಹೋಗಲಿ ಎಂದು" ಶಾಪವನ್ನಿತ್ತರು.

ಈ ರೀತಿ ಸ್ವೋತ್ತಮರಾದ ರುದ್ರದೇವರ ವಿಷಯದಲ್ಲಿ ಅಪಚಾರವನ್ನು ಮಾಡಬಾರದೆಂದು ಎಷ್ಟು ಇತರರು ಹೇಳಿದರೂ ಕೇಳದೇ ಕೋಪಾವಿಷ್ಟರಾಗಿ ಆ ಸಭೆಯಿಂದ ದಕ್ಷರು ಮನೆಗೆ ಹೊರಟುಹೋದರು.

ದಕ್ಷರು ರುದ್ರದೇವರಿಗೆ ಮಾಡಿದ ನಿಂದೆಗೂ, ಶಾಪವಚನಕ್ಕೂ ಕೋಪ ಗೊಂಡ ರುದ್ರದೇವರ ಭೃತ್ಯರಾದ ನಂದಿಕೇಶ್ವರರು ಅತಿಯಾದ ಕೋಪದಿಂದ ದಕ್ಷರಿಗೆ ಭಯಂಕರವಾದ ಶಾಪವನ್ನು ಕೊಟ್ಟರು. ಆ ದಕ್ಷರ ಶಾಪಕ್ಕೆ ಪ್ರತಿಭಟಿಸದೇ ಅನುಮೋದಿಸಿದ ಅಲ್ಲಿ ಸೇರಿದ್ದ ಬ್ರಾಹ್ಮಣರಿಗೆಲ್ಲಾ ಶಾಪವನ್ನಿತ್ತರು.

ಪ್ರಾರಬ್ಧಕರ್ಮಪ್ರಭಾವದಿಂದ ಅಧಿಕಾರಿ ಚೇತನನಿಗೆ ಬಂದೊದಗಿದ ಈ ತೆರನಾದ ಶಾಪವು ತಾತ್ಕಾಲಿಕವಾದುದೇ ಹೊರತು ಸಾರ್ವಕಾಲಿಕವಲ್ಲ. ಅಧಿಕಾರಿ ಯಾದ ಮುಕ್ತಿ ಯೋಗ್ಯ ಚೇತನನ ಜ್ಞಾನಕ್ಕಾಗಲಿ, ಮುಕ್ತಿ ಫಲಕ್ಕಾಗಲಿ, ನಿಯತವಾದ ತಾರತಮ್ಯಕ್ಕಾಗಲಿ, ಇದಕ್ಕೆ ಶಾಪದಿಂದ ಯಾವ ಸ್ಥಿರವಾದ ಬಾಧಕವೂ ಆಗುವಂತಿಲ್ಲ. ಅಂತಹ ಶಾಪದ ಬಾಧಕವು ತಾತ್ಕಾಲಿಕವಾದುದು. ನಂದಿಕೇಶ್ವರರ ಶಾಪದಿಂದ ಕುಪಿತರಾದ ದಕ್ಷಾನುಯಾಯಿಗಳಾಗಿದ್ದ ಬ್ರಾಹ್ಮಣರಲ್ಲಿ ಭೃಗುಗಳು ಕಾಪಾಲಿಕರೇ ಮೊದಲಾದ ರುದ್ರವ್ರತಧಾರಿಗಳಿಗೆಲ್ಲಾ ಶಾಸ್ತ್ರಾರ್ಥ ಜ್ಞಾನಶೂನ್ಯರಾಗಲಿ ಎಂಬುದೇ ಮೊದಲಾದ ಶಾಪವನ್ನು ನಂದಿಕೇಶ್ವರರ ಭೃತ್ಯರಿಗೆ ಪ್ರತಿಶಾಪವನ್ನಿತ್ತರು.

ಭೃಗುಗಳ ಪ್ರತಿಶಾಪಕ್ಕೆ ಸ್ವಲ್ಪ ಆತಂಕಗೊಂಡವರಂತೆ ಕಂಡ ರುದ್ರದೇವರು ಆ ಯಜ್ಞಶಾಲೆಯಿಂದ ಹೊರಟುಹೋದರು.

ಈ ರೀತಿ ವಿಘ್ನಪರಂಪರೆಯು ಬಂದಾಗ್ಯೂ ಆ ಸತ್ರಯಾಗಕ್ಕೆ ಸರ್ವೋತ್ತಮ ನಾದ ಶ್ರೀಹರಿಯೇ ಉದ್ದಿಷ್ಟ ಪ್ರಧಾನದೇವತೆಯಾದುದರಿಂದ, ಆ ಶ್ರೀಹರಿಯ ಅನುಗ್ರಹದ ಬಲದಿಂದ ಸಾವಿರ ವರ್ಷಗಳ ಅವಧಿಯ ಆ ಸತ್ರಯಾಗವು ನಡೆದು ಗಂಗಾ ಯಮುನಾ ಸಂಗಮಕ್ಷೇತ್ರದಲ್ಲಿನ ಅವಭೃತ ಸ್ನಾನದೊಂದಿಗೆ ಪರಿಸಮಾಪ್ತ ವಾಯಿತು.

ದಕ್ಷರು ಅಳಿಯನಾದ ರುದ್ರನನ್ನು ದ್ವೇಷಿಸುತ್ತಲೇ ಇದ್ದರು. ಇದರ ಜೊತೆಗೆ ಚತುರ್ಮುಖ ಬ್ರಹ್ಮದೇವರು ದಕ್ಷರನ್ನು ಎಲ್ಲ ಪ್ರಜೇಶ್ವರರ ಅಧಿಪತಿಯಾಗಿ ಪಟ್ಟಾಭಿಷೇಕಮಾಡಿದ ಮೇಲಂತೂ ದಕ್ಷರ ಅಹಂಭಾವವು ಮತ್ತೂ ಅಧಿಕ ವಾಯಿತು. ರುದ್ರದೇವರಿಗೆ ಸಲ್ಲಬೇಕಾದ ಆಹುತಿಯನ್ನು ಕೊಡದೆ ಹಿಂದಿನ ಯಜ್ಞವು ನಡೆದೇಹೋಯಿತು. ಸಕಲಪ್ರಜೇಶ್ವರರ ಅಧಿಪತಿಯಾಗಿ ಪಟ್ಟಾಭಿಷಿಕ್ತ ರಾದ ದಕ್ಷರು ವಾಜಪೇಯವೆಂಬ ಯಾಗವನ್ನು ಆಚರಿಸಿ ಮತ್ತೆ ಬೃಹಸ್ಪತಿಸವವೆಂಬ

"ವಾಜಪೇಯೇನ ಇಷ್ಟ್ವಾ ಬೃಹಸ್ಪತಿ ಸವೇನ ಯಜೇತ್" ಎಂಬ ವಿಧಿಯಂತೆ ಮತ್ತೊಂದು ಯಾಗವನ್ನಾರಂಭಿಸಿದರು.

ದಕ್ಷರು ಪ್ರಾರಂಭಿಸಿದ ಈ ಬೃಹಸ್ಪತಿಸವನೆಂಬ ಯಾಗಕ್ಕೆ, ಎಲ್ಲ ಬ್ರಹ್ಮರ್ಷಿಗಳೂ, ದೇವರ್ಷಿಗಳೂ, ಸಿದ್ಧರೂ, ಸಾಧ್ಯರೂ, ಪಿತೃಗಳೂ, ಎಲ್ಲಾ ದೇವತೆಗಳೂ ತಮ್ಮ ಪರಿವಾರದೊಂದಿಗೆ ಹೋಗುತ್ತಿದ್ದರು. ವೈಭವೋಪೇತವಾದ ತಮ್ಮ ತಂದೆಯು ಆಚರಿಸುತ್ತಿದ್ದ ಯಾಗಕ್ಕೆ ಇತರರೆಲ್ಲರೂ ಸಪರಿವಾರರಾಗಿ ಹೋಗುತ್ತಿರುವುದನ್ನೂ, ಅವರುಗಳ ಸಡಗರಗಳನ್ನೆಲ್ಲಾ ಗಮನಿಸಿದ, ಸತೀದೇವಿಗೆ, ತನ್ನ ಗಂಡನಾದ ಶಿವನಿಗೂ, ತಂದೆಯಾದ ದಕ್ಷನಿಗೂ ದ್ವೇಷಭಾವವಿರುವುದು ತಿಳಿದಾಗ್ಯೂ ಸ್ತ್ರೀ ಸ್ವಭಾವದಿಂದ, ತನ್ನ ತಾಯಿ ಅಕ್ಕಂದಿರುಗಳನ್ನೆಲ್ಲಾ ನೋಡ ಬೇಕೆಂಬ ಹೆಬ್ಬಯಕೆಯಿಂದ, ತಾನೂ ತನ್ನ ಪತಿಯೂ ಹೋಗಿ ಭಾಗವಹಿಸಿ ಮಾನಮರ್ಯಾದೆಗಳನ್ನು ಮಾಡಿಸಿಕೊಂಡು ಬರಬೇಕೆಂಬ ಚಾಪಲ್ಯದಿಂದ ತನ್ನ ಪತಿದೇವನೊಡನೆ ಸಂಗತಿಯನ್ನು ತಿಳಿಸಿ ಅನೇಕ ಬಗೆಯಾಗಿ ಶಿವನ ಅನುಮತಿ ಯನ್ನು ಬೇಡಿದಳು. ತನ್ನನ್ನು ಯಾವಾಗಲೂ ದ್ವೇಷಿಸುತ್ತಲಿದ್ದ ದಕ್ಷನ ಹಿಂದಿನ ವರ್ತನೆಯನ್ನು ಎತ್ತಿ ಹೇಳಿ ರುದ್ರನು ತಾನೂ ಸಹ ಹೋಗಲು ಒಡಂಬಡಲಿಲ್ಲ. ಮೇಲಾಗಿ ಸತೀದೇವಿಯನ್ನೂ ಹೋಗಲು ಅನುಮತಿಯನ್ನೀಯಲಿಲ್ಲ. ಆದಾಗ್ಯೂ ಅತಿಯಾದ ಸ್ತ್ರೀ ಚಾಪಲ್ಯದಿಂದ ತಾನೊಬ್ಬಳೇ ತಂದೆಯ ಯಾಗಕ್ಕೆ ಹೊರಟೇ ಬಿಟ್ಟಳು. ಆಗ ಶಿವನ ಪರಿವಾರದವರಾದ ಮಣಿಮನ್ಮದನೇ ಮೊದಲಾದ ಅಮುಖ್ಯ ಪರಿವಾರದ ಸಾವಿರಾರು ಭೃತ್ಯರು ದಾಕ್ಷಾಯಣಿಯನ್ನು ಹಿಂಬಾಲಿಸಿದರು.

ದಕ್ಷನ ಯಜ್ಞವಾದರೋ ಅ ತಿ ವಿ ಜೃಂ ಭ ಣೆ ಯಿಂ ದ ಸಾಗುತ್ತಿತ್ತು. ಬ್ರಹ್ಮಲೋಕದವರೆವಿಗೂ ಕೇಳಿಸುತ್ತಲಿದ್ದ ವೇದಘೋಷದಿಂದ ಕೂಡಿದ ಆ ಯಾಗಶಾಲೆಯು ಅತಿ ವಿಜೃಂಭಿಸುತ್ತಿತ್ತು. ಭವಾನಿಯು ಎಷ್ಟೋ ಆಸೆ ಆಕಾಂಕ್ಷೆ ಗಳಿಂದ ಯಾಗಶಾಲೆಯನ್ನು ಹೊಕ್ಕಳು. ಬಂದಂತಹ ಕಿರಿಯ ಪುತ್ರಿಯಾದ ಸತೀದೇವಿಯನ್ನು ತಂದೆಯಾದ ದಕ್ಷನು ಆದರಿಸಲಿಲ್ಲ, ಪುರಸ್ಕರಿಸಲಿಲ್ಲ. ಕಡೆಗೆ ಒಂದು ಸವಿಮಾತನ್ನೂ ಸಹ ಆಡಿಸದೇ ಅಪಮಾನ ಮಾಡಿಬಿಟ್ಟನು. ದಕ್ಷನ ಹೆದರಿಕೆಯಿಂದ ಮತ್ತಾರೂ ಸಹ ಸತೀದೇವಿಗೆ ಕೊಡಬೇಕಾದ ಗೌರವವನ್ನೂ ಕೊಡಲಿಲ್ಲ. ಆದರೆ ತಾಯಿಯಾದ ಪ್ರಸೂತಿದೇವಿ ಮತ್ತು ಸತೀದೇವಿಯ ಅಕ್ಕಂದಿರು ಮಾತ್ರ ಆದರದಿಂದ ಪ್ರೇಮಪೂರ್ವಕವಾಗಿ ಆಲಿಂಗಿಸಿ ಪುರಸ್ಕರಿಸಿದರು. ಆದರೆ

ಇದರಿಂದ ತೃಪ್ತಿಪಡದ ಸತೀದೇವಿಗೆ ತನ್ನ ತಂದೆಯ ವರ್ತನೆಗಾಗಿ ಅತಿಯಾದ ದುಃಖವಾಯಿತು. ಪೂಜ್ಯರಾದವರ ನಿಂದೆಯು ಎಲ್ಲಿ ನಡೆಯುವುದೋ ಅಲ್ಲಿ ಶಕ್ತಿವಂತನು ನಿಂದಕರ ನಾಲಿಗೆಯನ್ನು ಸೀಳಬೇಕು. ಅದಕ್ಕೆ ತಕ್ಕ ಶಕ್ತಿಯು ಇಲ್ಲವಾದರೆ ಕಿವಿಗಳನ್ನು ಮುಚ್ಚಿಕೊಂಡು ದೂರ ಸರಿಯಬೇಕು. ಅದನ್ನೂ ಮಾಡದವನು ಆ ಹಿರಿಯರ ನಿಂದೆಯನ್ನು ಕೇಳಿದುದರಿಂದ ಉಂಟಾದ ಪಾಪದ ಪರಿಹಾರಕ್ಕಾಗಿ ಪ್ರಾಣವನ್ನಾದರೂ ಬಿಡಬೇಕೆಂಬ ಧರ್ಮವನ್ನರಿತ ದಾಕ್ಷಾಯಣಿಯು ತನ್ನ ಪತಿದೇವನಾದ ಶಿವನನ್ನು ನಿಂದಿಸಿದ ದ್ರೋಹಿಯಾದ ತನಗೆ ತಂದೆಯಾದ ದಕ್ಷನಿಂದ ತನಗೆ ಬಂದಿರುವ ಪ್ರಾಕೃತವಾದ ದೇಹವನ್ನೇ ತೃಣವನ್ನಾಗಿ ಬಗೆದು ದೇಹಾಭಿಮಾನರಹಿತಳಾಗಿ, ತನ್ನ ತಂದೆಯ ತಪ್ಪನ್ನು ಎಲ್ಲರಿಗೂ ತಿಳಿಯುವಂತೆ ಮಾಡಿ, ಯಜ್ಞಶಾಲೆಯ ಉತ್ತರದಿಕ್ಕಿನಲ್ಲಿ ಕುಳಿತು ಪೀತಾಂಬರಧಾರಿಯಾಗಿ, ಮೌನದಿಂದ ಆಚಮನಮಾಡಿ ಕಣ್ಣುಗಳನ್ನು ಮುಚ್ಚಿಕೊಂಡು ಯೋಗಮಾರ್ಗದಿಂದ ಜಿತಾಸನಳಾಗಿ ರೇಚಕಪೂರಕಗಳ ಮೂಲಕ, ಪ್ರಾಣ ಮತ್ತು ಅಪಾನ ವಾಯುಗಳನ್ನು ಊರ್ಧ್ವಗಮನವುಳ್ಳವುಗಳನ್ನಾಗಿ ಮಾಡಿ, ಸುಷುಮ್ನಾ ನಾಡಿಯ ಮೂಲಕ ಉದಾನವಾಯುವನ್ನು ಮೇಲಕ್ಕೇರಿಸಿ ನಾಭಿಚಕ್ರಕ್ಕೆ ತಂದು, ನಾಭಿ-ಚಕ್ರದಿಂದ, ಮೆಲ್ಲಗೆ ಹೃದಯದಲ್ಲಿ ನಿಲ್ಲಿಸಿ ಹೃದಯದಲ್ಲಿನ ವಾಯುವನ್ನು ಕಂಠ ಪ್ರದೇಶಕ್ಕೆ ತಂದು, ಕಂಠದಿಂದ ಹುಬ್ಬುಗಳ ಮಧ್ಯಕ್ಕೆ ತಂದುಕೊಂಡು, ತಾನೂ ಅಲ್ಲಿಯೇ ನಿಂತು, ತನ್ನ ಭೌತಿಕ ದೇಹವನ್ನು ಸುಟ್ಟು ಬೂದಿಮಾಡುವ ವಾಯು ಅಗ್ನಿಗಳ ಉತ್ಪತ್ತಿಗೆ ಕಾರಣನಾದ ತದಂತರ್ಯಾಮಿಯಾದ ಶ್ರೀಹರಿಯನ್ನು ಧ್ಯಾನ ಮಾಡಿದಳು. ವಾಯು ಅಗ್ನಿಗಳ ಅಂತರ್ಯಾಮಿಯಾದ ಶ್ರೀಹರಿಯ ಧ್ಯಾನಾ ನಂತರದಲ್ಲಿ ಸ್ವೋತ್ತಮದೇವತೆಗಳನ್ನು ತಾರತಮ್ಯಕ್ರಮದಿಂದ ಚಿಂತಿಸುತ್ತಾ, ಈ ಪ್ರಾಣತ್ಯಾಗ ಮೂಲಕವಾಗಿ ತನ್ನ ಪತಿಯ ನಿಂದಾಶ್ರವಣದಿಂದ ಉಂಟಾದ ಪಾಪ ದಿಂದ ಬಿಡುಗಡೆಯನ್ನು ಪಡೆದವಳಾಗಿ, ಅವಳ ಪ್ರಾಣಪಕ್ಷಿಯು ದೇಹದಿಂದ ಹೊರ ಬಂದ ಕೂಡಲೇ ಧ್ಯಾನದಿಂದ ಉಂಟಾದ, ತೇಜಸ್ಸಿನಿಂದ ಸಮಾಧಿಜಾಗ್ನಿಯಿಂದ ಅವಳ ಪ್ರಾಕೃತದೇಹವು ಸುಟ್ಟು ಬೂದಿಯಾಯಿತು. ಈ ಭಯಂಕರ ಘಟನೆಯನ್ನು ಕಂಡು ಭೂಮಿ, ಆಕಾಶದಲ್ಲಿ ವಾಸಿಸುವವರಿಗೆಲ್ಲಾ ಅಯ್ಯೋ ಅಯ್ಯೋ ಏನು ಪ್ರಮಾದವಾಯಿತು ಎಂದು ಗೋಳಾಡಿದರು. ಇಂತಹ ಘೋರ ದುರಂತಕ್ಕೆ ಕಾರಣನಾದ ದಕ್ಷನನ್ನು ಎಲ್ಲರೂ ಆಕ್ಷೇಪಿಸಿದರು, ದೂಷಿಸಿದರು.

ಈ ಬಗೆಯಾದ ತನ್ನ ಮಗಳ ದುರಂತವನ್ನು ನೋಡಿದ ದಕ್ಷನು ಅತಿಯಾಗಿ ದುಃಖತಪ್ತನಾದನು. ಪಶ್ಚಾತ್ತಾಪಪಟ್ಟನು. ತನ್ನನ್ನು ತಾನೇ ನಾನಾಬಗೆಯಾಗಿ ದೂಷಿಸಿಕೊಂಡನು. ಸತೀದೇವಿಯ ಮರಣದಿಂದ ಕೋಪಗೊಂಡ ರುದ್ರನ ಅನುಚರರು ಭೂತಗಣಗಳು ವೀರಾವೇಶದಿಂದ ಆಯುಧಗಳಿಂದ ದಕ್ಷನನ್ನು ಕೊಲ್ಲಲು ಬಂದಾಗ, ಪೂಜ್ಯರಾದ ಭೃಗುಮಹರ್ಷಿಗಳು, ಯಜ್ಞದ ವಿಘ್ನ ಪರಿಹಾರಕ್ಕಾಗಿ "ಅಪಾಹತಾ ಅಸುರಾ ರಕ್ಷಾಂಸಿ ಪಿಶಾಚಾಃ" ಎಂಬ ಯಜುರ್ವೇದದ ಮಂತ್ರದಿಂದ ದಕ್ಷಿಣಾಗ್ನಿಯಲ್ಲಿ ಹೋಮಮಾಡಿದಾಗ, ತಪಸ್ಸಿನಿಂದ ಸೋಮಭಾಗವನ್ನು ಹೊಂದಿದ ಪ್ರಬಲರಾದ ಋಭವ ಎಂಬ ಹೆಸರಿನ ಸಾವಿರಾರು ದೇವತೆಗಳು ಬಂದು ಆಯುಧಗಳಿಂದ, ಆ ಭೂತಗಣಗಳನ್ನೂ ಬಗ್ಗು ಬಡಿದಾಗ ಅವರೆಲ್ಲಾ ದಿಕ್ಕಾಪಾಲಾಗಿ ಓಡಿದರು.

ಆ ಭೂತಗಣಗಳ ಮೂಲಕವಾಗಿಯೂ ನಾರದರಿಂದಲೂ ದಾಕ್ಷಾಯಣೀ ದೇವಿಯ ಮರಣವಾರ್ತೆಯನ್ನು ಶಿವನು ಕೇಳಿ ಕೋಪಾವೇಶದಿಂದ ತನ್ನ ಮಿಂಚಿನಂತೆ ತೇಜಸ್ವಿಯಾದ ಜಟೆಯನ್ನು ಕಿತ್ತು ಭೂಮಿಯ ಮೇಲೆ ಎಸೆದ ಕೂಡಲೇ ಆಕಾಶವನ್ನು ಮುಟ್ಟುವ ಸಾವಿರ ಬಾಹುಗಳನ್ನುಳ್ಳ, ಕೆಂಗಣ್ಣುಳ್ಳ ಭಯಂಕರವಾದ ಕೋರೆಹಲ್ಲುಗಳುಳ್ಳ, ಬೆಂಕಿಯಂತೆ ಕೆಂಪಾದ ಕೂದಲುಳ್ಳ, ಅನೇಕ ಬಗೆಯಾದ ಆಯುಧಗಳನ್ನು ಹಿಡಿದಿರುವ ವೀರಭದ್ರನು ಹುಟ್ಟಿದನು. ಆ ವೀರಭದ್ರನು ಬದ್ಧಾಂಜಲಿಯಾಗಿ ತನ್ನ ಕಾರ್ಯವೇನೆಂದು ರುದ್ರನನ್ನು ಕೇಳಿದನು. ರುದ್ರನು ತನ್ನ ಭೂತಗಣಗಳಿಗೆ ವೀರಭದ್ರನನ್ನು ಅಧಿಪತಿಯಾಗಿ ಮಾಡಿ, ಎಲೈ ವೀರಭದ್ರನೇ ನೀನು ನನ್ನ ಭೂತಗಣಸಹಿತನಾಗಿ ಹೋಗಿ ದಕ್ಷನ ಯಜ್ಞವನ್ನು ಧ್ವಂಸಮಾಡಿ, ಅವನನ್ನು ಸಂಹಾರಮಾಡೆಂದು ಹೇಳಿದನು. ಶಿವನ ಅಪ್ಪಣೆಯಂತೆ ವೀರಭದ್ರನು ಭೂತಗಣಸಹಿತನಾಗಿ ದಕ್ಷನ ಯಜ್ಞಶಾಲೆಗೆ ಹೋಗಿ ಎಲ್ಲವನ್ನೂ ಧ್ವಂಸಗೊಳಿಸಿ ದಕ್ಷನನ್ನು ಕೆಡವಿ ಎಷ್ಟು ಪ್ರಯತ್ನ ಮಾಡಿದರೂ ಅವನನ್ನು ಸಂಹರಿಸಲಾಗಲಿಲ್ಲ. ಆಗ ಶಿವನನ್ನು ಸ್ಮರಿಸಿದಾಗ ಶಿವನೇ ಬಂದು ಯಜ್ಞಪಶುವಿನಂತೆ ದಕ್ಷನನ್ನೇ ಯಜ್ಞಪಶುವನ್ನಾಗಿ ಸಂಕಲ್ಪಿಸಿ ಅವನ ದೇಹದಿಂದ ಅವನ ತಲೆಯನ್ನು ಕತ್ತರಿಸಿ ಬೇರ್ಪಡಿಸಿದನು. ಕೋಪಾವಿಷ್ಟನಾದ ರುದ್ರದೇವರು ಆ ತಲೆಯನ್ನು ದಕ್ಷಿಣಾಗ್ನಿಯಲ್ಲಿ ಹೋಮಮಾಡಿ ಸುಟ್ಟುಬಿಟ್ಟರು. ಇದಾದನಂತರ ಕೈಲಾಸಕ್ಕೆ ಹಿಂದಿರುಗಿ ಅಲ್ಲಿದ್ದ ಅತಿ ವಿಶಾಲವಾದ ಆಲದಮರದ ಬುಡದಲ್ಲಿ ಶ್ರೀ ಹರಿಧ್ಯಾನಾಸಕ್ತರಾಗಿ ಕುಳಿತರು.

ಈ ರೀತಿ ದಕ್ಷನು ಪ್ರಾರಂಭಿಸಿದ "ಬೃಹಸ್ಪತಿಸವ" ಎಂಬ ವಾಜಪೇಯ ಯಾಗದ ಅನಂತರದಲ್ಲಿ ಮಾಡಬೇಕಾಗಿದ್ದ ಯಾಗವು ಪೂರ್ತಿಯಾಗದೇ ಮಧ್ಯದಲ್ಲಿ ನಿಂತುಹೋಯಿತು. ಶ್ರೀಹರಿಯ ಪ್ರಸಾದವು ಅವನ ಅಪರೋಕ್ಷಕ್ಕೆ ಹೇಗೆ ಅತಿ ಮುಖ್ಯವೋ ಅದರಂತೆ ತಾರತಮ್ಯದಿಂದ ನಮಗಿಂತಲೂ ಉತ್ತಮರಾದವರ ಅನುಗ್ರಹವೂ ಅತ್ಯಾವಶ್ಯಕ. ಸ್ವೋತ್ತಮದ್ರೋಹವು ಘಾತಕ ಎಂಬ ಪ್ರಮೇಯಕ್ಕೆ ದಕ್ಷ ಪ್ರಜಾಪತಿಯ ಕಥೆಯೇ ಸಾಕ್ಷಿಯಾಗಿದೆ.

ದಕ್ಷನ ಯಜ್ಞವು ರುದ್ರಪರಿವಾರದಿಂದ ಧ್ವಂಸವಾದನಂತರ ಇಂದ್ರ ಮೊದಲಾದ ದೇವತಾವೃಂದವು ಬ್ರಹ್ಮನ ಬಳಿಗೆ ಹೋಗಿ ನಡೆದ ಸಂಗತಿಗಳನ್ನೆಲ್ಲಾ ವಿಜ್ಞಾಪಿಸಿಕೊಂಡರು. ಉಪೇಂದ್ರ ಮತ್ತು ಧರ್ಮಪುತ್ರರಾದ ತಾಪಸರೂಪಿ ನಾರಾಯಣರು ಆ ಯಜ್ಞದಲ್ಲಿದ್ದರೂ ಸಹ ಚತುರ್ಮುಖ ಬ್ರಹ್ಮ ಮತ್ತು ಮೂಲ ವಿಷ್ಣುಪರಮಾತ್ಮನು ಆ ಯಜ್ಞಕ್ಕೆ ಬರಬೇಕಾಗಿದ್ದರೂ ಸಹ ಬಂದಿರಲಿಲ್ಲ.

ಬ್ರಹ್ಮನು ದೇವತೆಗಳ ಸಂಕಟವನ್ನೆಲ್ಲಾ ಕೇಳಿ ಮುಮುಕ್ಷುವಾದವನು ಎಂದಿಗೂ ಸ್ವೋತ್ತಮರಲ್ಲಿ ದ್ರೋಹವನ್ನು ಎಸಗಬಾರದು. ಆದರೆ ದಕ್ಷನು ಅವನಿಗಿಂತಲೂ ಉತ್ತಮನಾದ ರುದ್ರನ ವಿಷಯದಲ್ಲಿ ಅಪರಾಧವನ್ನು ಮಾಡಿದ್ದಾನೆ. ರುದ್ರನನ್ನು ದೂಷಿಸಿದ್ದು ಮಾತ್ರವಲ್ಲ. ಶಾಪವಚನವನ್ನೂ ಆಡಿದ್ದಾನೆ. ಯಜ್ಞಭಾಗಕ್ಕೆ ನ್ಯಾಯವಾಗಿ ಭಾಗಿಯಾಗಬೇಕಾಗಿದ್ದ ಶಿವನಿಗೆ ಅದನ್ನು ಕೊಡದೆ ಅಪರಾಧ ಮಾಡಿದ್ದಾನೆ. ರುದ್ರನಾದರೋ ಬಹಳ ಕರುಣಾಳು. ತನ್ನಲ್ಲಿ ಭಕ್ತಿ ಮಾಡತಕ್ಕ ಭಕ್ತರಲ್ಲಿ ಕ್ಷಿಪ್ರಪ್ರಸಾದ ದೇವತೆ. ಬೇಗ ಒಲಿಯುವ ದೇವತೆ. ಅವನನ್ನು ಪ್ರಸನ್ನೀಕರಿಸಿಕೊಳ್ಳಿರಿ. ಈ ಕಷ್ಟಪರಿಹಾರಕ್ಕೆಲ್ಲಾ ಆ ರುದ್ರದೇವನ ಅನುಗ್ರಹಸಂಪಾದನೆಯೇ ಪರಿಹಾರೋಪಾಯ" ಎಂದು ಮುಂತಾಗಿ ಬ್ರಹ್ಮದೇವನು ದೇವತೆಗಳಿಗೆ ಹಿತೋಪದೇಶವನ್ನು ಮಾಡಿ ಆ ದೇವತೆಗಳ ಸಹಿತವಾಗಿ ತಾನೂ ಸಹ ರುದ್ರನು ಕುಳಿತಿದ್ದ ಕೈಲಾಸದಲ್ಲಿನ ವಟವೃಕ್ಷದ ಸಮೀಪಕ್ಕೆ ತೆರಳಿ, ದರ್ಭಾಸನದಲ್ಲಿ ಕುಳಿತ ನಾರದಾದಿಗಳಿಗೆ ಪರಮಾತ್ಮನಾದ ಶ್ರೀಹರಿಯ ತತ್ವವನ್ನು ಉಪದೇಶ ಮಾಡುತ್ತಿದ್ದ ರುದ್ರನ ಬಳಿಗೆ ಬಂದನು. ದೇವತೆಗಳ ಸಹಿತವಾಗಿ ಬ್ರಹ್ಮನನ್ನು ಕಂಡ ಕೂಡಲೇ ರುದ್ರನು ಸಾಷ್ಟಾಂಗಪ್ರಣಾಮ ಮಾಡಿದನು. ಮಿಕ್ಕ ದೇವತೆಗಳೆಲ್ಲಾ ರುದ್ರನಿಗೆ ಭಕ್ತಿಯಿಂದ ನಮನಗೈದರು. ಬ್ರಹ್ಮದೇವರು ಶಿವಾಂತರ್ಯಾಮಿಯಾದ ಶ್ರೀಹರಿಯು ಸಂತುಷ್ಟನಾದರೆ, ಅವನಿಂದ ನಿಯಮ್ಯನಾದ ರುದ್ರನೂ ದೇವತೆಗಳ

ವಿಷಯದಲ್ಲಿ ವಿಷ್ಣುಭಕ್ತನಾದ ದಕ್ಷನ ವಿಷಯದಲ್ಲಿ ಪ್ರಸನ್ನನಾಗುತ್ತಾನೆಂದು ಶಿವಾಂತರ್ಯಾಮಿಯಾದ ಶ್ರೀಹರಿಯನ್ನು

"ಜಾನೇ, ತ್ವಾಂ, ಈಶವಿಶ್ವಸ್ಯ ಜಗತೋ ಯೋನಿ ಬೀಜಯೋಃ ।
ಶಕ್ತೇಃ ಶಿವಸ್ಯ ಚ ಪರಂ ಯತ್ತದ್ಬ್ರಹ್ಮನಿರಂತರಮ್" ॥

ಇತ್ಯಾದಿಯಾಗಿ ಶಿವಾಂತರ್ಯಾಮಿಯಾದ ಶ್ರೀಹರಿಯನ್ನು ಸಾಕ್ಷಾತ್ಕರಿಸುತ್ತಾ ಸ್ತೋತ್ರಮಾಡಿದನು. ಜೀವೋತ್ತಮರಾದ ಋಜುಗಣಾವರೇಣ್ಯರ ಭಕ್ತಿಪೂರ್ವಕವಾದ ಸ್ತೋತ್ರಕ್ಕೆ ಪ್ರಾರ್ಥನೆಗೆ ಶಿವಾಂತರ್ಯಾಮಿಯಾದ ಶ್ರೀಹರಿಯು ಪ್ರಸನ್ನನಾದ ಕೂಡಲೇ ಶಿವನೂ ಸಹ ಪ್ರಸನ್ನನಾದನು. ಬ್ರಹ್ಮದೇವರ ಸಲಹೆಯಂತೆ ಶಿವನು ದಕ್ಷನ ವಿಷಯದಲ್ಲಿ ಹಿಂದಿನ ಕೋಪವನ್ನು ತ್ಯಜಿಸಿ, ಅವನು ಪ್ರಾರಂಭಿಸಿದ ಯಾಗವು ಪೂರ್ತಿಗೊಳಿಸುವಿಕೆಗೆ ಒಪ್ಪಿ, ಎಲ್ಲರ ಸಮೇತವಾಗಿ ಪುನಃ ದಕ್ಷನ ಯಾಗ ಶಾಲೆಗೆ ಬಂದು, ಅಲ್ಲಿದ್ದ ಯಜ್ಞೋಪಯೋಗಿಯಾಗಿದ್ದ ಮೇಕೆಯೊಂದರ ಕುತ್ತಿಗೆ ಯನ್ನೇ, ಹಿಂದೆ ನಂದಿಕೇಶ್ವರನು ದಕ್ಷನಿಗೆ ಮೇಕೆ ತಲೆ ಬರಲೆಂದು ಶಾಪವಿತ್ತ ವಚನದಂತೆ ದಕ್ಷನ ಮುಂಡಕ್ಕೆ ಜೋಡಿಸಿದ ಕೂಡಲೇ ದಕ್ಷನು ಎದ್ದು ನಿಂತನು. ಹಿಂದೆ ದಕ್ಷನು ಶಿವನನ್ನು ದೂಷಿಸುತ್ತಿದ್ದಾಗ ದಕ್ಷಪಕ್ಷಪಾತಿಯಾದ ಭೃಗುವು ತನ್ನ ಗಡ್ಡವನ್ನು ತೋರಿಸುತ್ತಾ ನಕ್ಕಿದ್ದರಿಂದ ಕೋಪಗೊಂಡ ವೀರಭದ್ರನು ಯಾವ ಗಡ್ಡವನ್ನು ಕಿತ್ತೊಗೆದಿದ್ದನೋ, ಆ ಗಡ್ಡವು ಹಿಂದಿನಂತಾಯಿತು. ಯಾವ ಭಗನು ಹಿಂದೆ ಶಿವನ ದೂಷಣೆಗೆ ಕಣ್ಣಿನಿಂದ ಸೂಚಿಸಿ ಪ್ರೇರಿಸಿದುದರಿಂದ ಕುಪಿತನಾದ ವೀರಭದ್ರನು ಆ ಭಗನ ಕಣ್ಣನ್ನೇ ಕಿತ್ತು ಹಾಕಿದ್ದನೋ ಅವನಿಗೆ ಆ ಕಣ್ಣುಗಳು ಮಿತ್ರನ ಕಣ್ಣುಗಳಿಂದ ನೋಡುವಂತಾಯಿತು. ಹಿಂದೆ ಜೂಜಾಟದಲ್ಲಿ ಬಲರಾಮನು ದಂತವಕ್ರನ ಹಲ್ಲುಗಳನ್ನು ಉದುರಿಸಿದ್ದಂತೆ ವೀರಭದ್ರನು ಪೂಷನ ಹಲ್ಲುಗಳನ್ನು ಕಿತ್ತುಹಾಕಿದ್ದನು. ಶಿವನ ದಯೆಯಿಂದ ಹಿಟ್ಟನ್ನೇ ಹವಿರ್ಭಾಗವಾಗಿ ಹೊಂದಿರುವ ಪೂಷನಿಗೆ ಯಜಮಾನನ ಹಲ್ಲುಗಳಿಂದ ಅಗಿಯುವಂತಾದವು. ಅವಯವಗಳನ್ನು ಕಳೆದುಕೊಂಡಿದ್ದ ದೇವತೆಗಳ ಅವಯವಗಳೆಲ್ಲಾ ಹಿಂದಿನಂತಾದುವು. ಹಿಂದೆ ವೀರಭದ್ರನಿಂದ ತೋಳುಗಳನ್ನು ಕಳೆದುಕೊಂಡಿದ್ದ ಪುರೋಹಿತರ ತೋಳುಗಳು ಅಶ್ವಿನೀದೇವತೆಗಳ ತೋಳುಗಳಿಂದ ತೋಳುಗಳನ್ನು ಉಳ್ಳವರಾದರು. ಕೈಗಳನ್ನು ಕಳೆದುಕೊಂಡಿದ್ದವರ ಕೈಗಳೆಲ್ಲಾ ಪೂಷನ ಕೈಗಳಿಂದಲೇ ಕೈಯನ್ನುಳ್ಳವರಾದರು. ಭೃಗುವಿಗೆ ಮೇಕೇಗಡ್ಡವೇ ಗಡ್ಡದ ಜಾಗಕ್ಕೆ ಬಂತು. ಮೇಕ ತಲೆಯನ್ನು ಪಡೆದು

ಉಜ್ಜೀವಿತನಾದ ದಕ್ಷನು ತನ್ನ ಹಿಂದಿನ ಎಲ್ಲಾ ಅಪರಾಧಗಳನ್ನು ಕ್ಷಮಿಸಿ ಅನುಗ್ರಹಿಸುವಂತೆ ಶಿವನನ್ನು ಪ್ರಾರ್ಥಿಸಿ ಅವನ ಕೃಪೆಗೆ ಪಾತ್ರನಾದನು. ಈ ರೀತಿ ಶಿವಾಂತರ್ಯಾಮಿಯಾದ ಶ್ರೀಹರಿಯ ದಯೆಯಿಂದ ಶಿವನು ಪ್ರಸನ್ನನಾದುದರಿಂದ ಎಲ್ಲವೂ ಸುಗಮವಾದನಂತರ ನಿಂತುಹೋಗಿದ್ದ ಯಜ್ಞವನ್ನು ದಕ್ಷರು ಬ್ರಹ್ಮದೇವರ ಅಪ್ಪಣೆಯಂತೆ ಉಪಾಧ್ಯಾಯರಿಂದ ಸಹಿತರಾದ ಋತ್ವಿಕ್ಕುಗಳು ಮತ್ತೆ ಪ್ರಾರಂಭಿಸಿದರು. ಆಗ ಹಿಂದೆ ಕಲುಷಿತವಾಗಿದ್ದುದರ ದೋಷಪರಿಹಾರಕ್ಕಾಗಿ ಪ್ರಾಯಶ್ಚಿತ್ತ ರೂಪವಾಗಿ ಬ್ರಾಹ್ಮಣವರ್ಯರು ವಿಷ್ಣುವನ್ನು ಉದ್ದೇಶಿಸಿ ಮೂರು ಆಸನಗಳನ್ನುಳ್ಳ ಪುರೋಡಾಶಹವಿಸ್ಸನ್ನು ಮಂತ್ರಪೂರ್ವಕವಾಗಿ ಹೋಮಿಸಿದರು. ಪುರೋಹಿತರೊಂದಿಗೆ ಮಂತ್ರಪೂರ್ವಕವಾಗಿ ಹವಿಸ್ಸನ್ನು ಹೋಮಮಾಡುತ್ತಿರುವಾಗ ಆ ಭಕ್ತರ ಭಕ್ತಿಪೂರ್ವಕವಾದ ಧ್ಯಾನದಿಂದ ತೃಪ್ತನಾದ ಶ್ರೀಹರಿಯು ಆ ಯಜ್ಞಶಾಲೆಯಲ್ಲಿ ಅಭಿವ್ಯಕ್ತನಾದನು. ಈ ಸಂದರ್ಭದಲ್ಲಿನ ವಿಚಾರವನ್ನು ತಿಳಿಸುವ ಶ್ರೀಮದ್ಭಾಗವತದ ೪ನೇ ಸ್ಕಂಧದ ೭ನೇ ಅಧ್ಯಾಯದ ೨೨, ೨೩ನೇ ಶ್ಲೋಕಗಳನ್ನೇ ಶ್ರೀ ವಾದಿರಾಜರು "ತಮುಪಾಗತಮಾಲಕ್ಷ್ಯ ಸರ್ವೇ ಸುರಗಣಾದಯಃ" ಇತ್ಯಾದಿಯಾದ ೬ ಶ್ಲೋಕಗಳಲ್ಲಿ ಶ್ರೀಹರಿಯ ಸರ್ವೋತ್ತಮತ್ವವನ್ನು ವಿವರಿಸಿರುತ್ತಾರೆ.

ಅತ್ಯುಜ್ಜ್ವಲಕಾಂತಿ ಪುಂಜದಿಂದ ರಂಜಿತವಾದ ಆಭರಣಗಳಿಂದ ಪ್ರಜ್ವಲಿಸುತ್ತಿರುವ ಶ್ರೀಹರಿಯನ್ನು ಕಂಡಕೂಡಲೇ ಬ್ರಹ್ಮಾದಿದೇವತೆಗಳು ಭಕ್ತಿಯಿಂದ ನಮಸ್ಕರಿಸಿ ಸ್ತೋತ್ರ ಮಾಡಿದರು. ಇದರಿಂದ ಬ್ರಹ್ಮಾದಿ ಸರ್ವದೇವತೆಗಳೆಲ್ಲರೂ ಭಕ್ತಿಪೂರ್ವಕವಾಗಿ ಕೇಶವನನ್ನು ಸ್ತೋತ್ರಮಾಡಿರುವಾಗ ಇಂತಹ ಸರ್ವೋತ್ತಮನಾದ ಶ್ರೀಹರಿಗೆ ಈ ಮಿಕ್ಕ ದೇವತೆಗಳು ಸಮರೆಂದು ಪ್ರತಿವಾದಿಗಳು ಹೇಗೆ ಹೇಳುವರು ಎಂದು ವಾದಿರಾಜರು ಪ್ರಶ್ನಿಸಿದ್ದಾರೆ.

"ಇಮೇ ಸಮಾಸ್ತಸ್ಯ ಕಥಂ ವದಂತು ಪ್ರತಿವಾದಿನಃ"

"ಯಜ್ಞಶಾಲೆಯಲ್ಲಿ ಅಭಿವ್ಯಕ್ತನಾದ ಶ್ರೀಹರಿಗೆ ಬ್ರಹ್ಮಾದಿದೇವತೆಗಳೆಲ್ಲರೂ ನಮಸ್ಕರಿಸಿದರು. ವಿಷ್ಣುಭಕ್ತನಾದ ದಕ್ಷನ ಹಿಂದೆ ಮಾಡಿದ ದ್ರೋಹಕ್ಕಾಗಿ, ಶಿವನ ದ್ರೋಹಕ್ಕಾಗಿ ಭಯಪಟ್ಟ ಮನಸ್ಸುಳ್ಳವರಾದರು. ಪರಮಾತ್ಮ ದಿವ್ಯ ತೇಜಸ್ಸಿನಿಂದ ತೇಜೋಹೀನರಾಗಿ ಪರಮಾತ್ಮನ ಸನ್ನಿಧಾನದಲ್ಲಿ ಏನನ್ನು ಹೇಳಬೇಕೆಂಬುದೇ ಅವರಿಗೆ ತೋರಲಿಲ್ಲ. ನಾಲಿಗೆಯೇ ಮುಂದುವರಿಯಲಿಲ್ಲ.

ಬಾಯೆಲ್ಲಾ ಒಣಗಿಹೋದುವು. ಗಡಗಡನೆ ನಡುಗುತ್ತಾ ದಕ್ಷನನ್ನ ಸ್ವೀಕರಿಸ ಬೇಕೋ ಬೇಡವೋ ಎಂಬ ಗೊಂದಲಕ್ಕೆ ಒಳಗಾಗಿ ಮನಸ್ಸಿನ ದುಗುಡದಿಂದ ಕಂಪಿಸುತ್ತಾ, ಕೂಡಲೇ ಎದ್ದು ಕೈಮುಗಿದುಕೊಂಡು ತಲೆಬಾಗಿ ಶ್ರೀಹರಿಗೆ ಪ್ರಣಾಮಗೈದರು. ಹೀಗಿರುವಲ್ಲಿ ಮಿಕ್ಕದೇವತೆಗಳು ಶ್ರೀಹರಿಗೆ ಹೇಗೆ ಸಮರಾದರು? ಪ್ರತಿವಾದಿಗಳು ಹೇಳಲಿ.

ಶರಂ ಧನುಷಿ ಸಂಧಾಯ ಧೂರ್ಜಟಿರ್ಜಗದೀಶ್ವರಃ ॥ ೧೬೬ ॥

ಭಗವತ್ತೇಜಸಾ ಗುಪ್ತೋ ದದಾಹ ತ್ರಿಪುರಂ ನೃಪ ।
ಇತ್ಥಂ ಶ್ರೀಮದ್ಭಾಗವತೇ ಯಸ್ತು ಪ್ರಸ್ತೋಯತೇ ಹರಿಃ ॥ ೧೬೭ ॥

ಕಸ್ತಸ್ಯ ಸಮತಾಮೇತಿ ವದನ್ತು ಪ್ರತಿವಾದಿನಃ ।
ಶಿವೋಽಪಿ ಭಗವದ್ದತ್ತಶಕ್ತ್ಯಾ ತ್ರಿಪುರವಾಸಿನಃ ॥ ೧೬೮ ॥

ಅದಹತ್ಕಿಲ ಸಂಗ್ರಾಮೇ ಕಃ ಶಕ್ತಃ ತಂ ಪ್ರಭುಂ ವಿನಾ ।

ಶ್ರೀಮನ್ಮಹಾಭಾರತದ ಕರ್ಣಪರ್ವದಲ್ಲಿ ಇಪ್ಪತ್ತನಾಲ್ಕನೇ ಅಧ್ಯಾಯದಲ್ಲಿ ರುದ್ರದೇವರು ಮಾಡಿದ ತ್ರಿಪುರಾಸುರ ಸಂಹಾರದ ಕಥೆಯು ಉಕ್ತವಾಗಿದೆ. ತ್ರಿಪುರಾಸುರರು ತಾರಕಾಸುರನ ಮಕ್ಕಳು. ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲೀ ಎಂದು ಅವರ ಹೆಸರು. ಅವರು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ತ್ರಿಪುರತ್ವ ವನ್ನು ಪಡೆದರು. ಅವರಲ್ಲಿ ತಾರಾಕ್ಷನದು ಕಾಂಚನಪುರ. ಕಮಲಾಕ್ಷನದು ರಾಜತಪುರ. ವಿದ್ಯುನ್ಮಾಲೀದು ಆಯಸಪುರ. ರುದ್ರದೇವರು ಅವರನ್ನು ದಹಿಸಿದರು. ಆದರೆ ಜಗದೀಶ್ವರನಾದ ಧೂರ್ಜಟಿಯು ಸರ್ವೋತ್ತಮನಾದ ಶ್ರೀಹರಿಯ ತೇಜಸ್ಸಿನಿಂದ ರಕ್ಷಿತನಾಗಿ ಧನುಸ್ಸಿನಲ್ಲಿ ಶರಸಂಧಾನವನ್ನು ಮಾಡಿ ಪರಮಾತ್ಮನಿಂದ ಅನುಗ್ರಹಿಸಲ್ಪಟ್ಟ ಶಕ್ತಿಯಿಂದಲೇ ತ್ರಿಪುರಾಸುರ ಸಂಗ್ರಾಮದಲ್ಲಿ ತ್ರಿಪುರವಾಸಿಗಳನ್ನು ಸುಟ್ಟನು "—ಎಂಬ ಈ ಕಥಾ ಭಾಗದಿಂದ ಪ್ರಬಲರಾದ ತ್ರಿಪುರಾಸುರರ ನಿಗ್ರಹವನ್ನು ರುದ್ರನು ಶ್ರೀಹರಿದತ್ತವಾದ ಶಕ್ತಿಯಿಂದಲೇ ಮಾಡಿದನೆಂದಮೇಲೆ ಅಪರಿಿತಶಕ್ತಿಸಂಪನ್ನನಾದ ಪ್ರಭುವಾದ ಆ ಶ್ರೀಹರಿಗೆ ಸಮರಾರು? ಈ ಕಥಾ ಭಾಗದಿಂದಲೂ ಶ್ರೀಹರಿಯ ಸರ್ವೋತ್ತಮತ್ವವು ವ್ಯಕ್ತವಾಗಿದೆ. ಆದಕಾರಣ ಅಂತಹ ಶ್ರೀಹರಿಗೆ ಯಾರುತಾನೇ ಸಮರು ಪ್ರತಿವಾದಿಗಳೇ ಹೇಳಲಿ.

ತ್ರಿಪುರಾಸುರ ಸಂಹಾರದ ವಿಷಯವು ಶ್ರೀ ಭಾಗವತದ ಏಳನೇ ಸ್ಕಂಧದ ಹತ್ತನೇ ಅಧ್ಯಾಯದಲ್ಲಿಯೂ ಸಹ ಯುಧಿಷ್ಠಿರ-ನಾರದ-ಸಂವಾದ ರೂಪವಾಗಿ ನಾರದರಿಂದ ರಾಜನಾದ ಯುಧಿಷ್ಠಿರನಿಗೆ ಹೇಳಲ್ಪಟ್ಟಿದೆ. ಈ ಹತ್ತನೆಯ ಅಧ್ಯಾಯದ ಐವತ್ತಮೂರನೇ ಶ್ಲೋಕದಿಂದ ಎಪ್ಪತ್ತನೆಯ ಶ್ಲೋಕ ಪೂರ್ತಿಯಾಗಿ ಉಕ್ತ ವಾಗಿದೆ. ಒಮ್ಮೆ ದೇವತೆಗಳಿಂದ ದೈತ್ಯರೆಲ್ಲಾ ಯುದ್ಧದಲ್ಲಿ ಪರಾಜಿತರಾದರು. ತಮ್ಮ ಅಪಜಯವನ್ನು ಸಹಿಸಲಾರದೇ ಅಸುರರು ತಮ್ಮ ಆಚಾರ್ಯನಾದ ಮಯನಿಗೆ ಶರಣಾಗತರಾದರು. ಆಗ ಮಾಯಿಗಳ ಪರಮಾಚಾರ್ಯನಾದ ಮಯನು ಮಾಯಾಪ್ರಭಾವದಿಂದ ಚಿನ್ನದ, ಬೆಳ್ಳಿಯ ಮತ್ತು ಕಬ್ಬಿಣದ ಮೂರು ಪಟ್ಟಣಗಳನ್ನು ನಿರ್ಮಿಸಿ ಅದಕ್ಕೆ ಯಾರಿಂದಲೂ ಯಾವ ವಿಧವಾಗಿಯೂ ಅಪಾಯವು ಉಂಟಾಗದಂತೆ ಭದ್ರಪಡಿಸಿದನು. ದೈತ್ಯರು ಆ ನಗರದಲ್ಲಿದ್ದುಕೊಂಡು ದೇವತೆಗಳ ಮೇಲಿನ ಹಿಂದಿನ ದ್ವೇಷದಿಂದ ಕೂಡಿದವರಾಗಿ ದೇವತೆಗಳಿಂದೊಡಗೂಡಿದ ಮೂರು ಲೋಕಗಳನ್ನೂ ವಿನಾಶಗೊಳಿಸಿದರು. ಆಗ ತ್ರಿಪುರಾಲಯರಾದ ದೈತ್ಯರಿಂದ ಉಂಟಾಗಿರುವ ಹಿಂಸೆಯನ್ನು ಈಶ್ವರನಲ್ಲಿಗೆ ಹೋಗಿ ದೇವತೆಗಳು ತಮ್ಮನ್ನು ರಕ್ಷಿಸಿ ಆ ರಾಕ್ಷಸರ ಬಾಧೆಯನ್ನು ಪರಿಹರಿಸಬೇಕೆಂದು ಭಕ್ತಿಯಿಂದ ಪ್ರಾರ್ಥಿಸಿದರು. ತ್ರಿಪುರಹನನವು ರುದ್ರನಿಂದಲೇ ಆಗಬೇಕೆಂದು ಶ್ರೀಹರಿಯ ಸಂಕಲ್ಪವಿದ್ದುದರಿಂದ ಶ್ರೀಹರಿಯ ತೇಜಸ್ಸಿನಿಂದ ರಕ್ಷಿತನಾಗಿ ಅಜೇಯನಾಗಿದ್ದ ರುದ್ರನು ಧನುಸ್ಸಿನಲ್ಲಿ ಬಾಣವನ್ನು ಏರಿಸಿ ಅದರಿಂದ ಆ ಮೂರು ಪಟ್ಟಣಗಳನ್ನು ವಿನಾಶಗೊಳಿಸಿ ಆ ಅಸುರರ ಪ್ರಾಣವನ್ನು ತೆಗೆದನು. ಆದರೆ ಮೃತರಾದ ಆ ದೈತ್ಯರ ದೇಹಗಳನ್ನೆಲ್ಲಾ ಅಸುರಾಚಾರ್ಯನಾದ ಮಯನು ಅಮೃತ ಸಂಜೀವಿನಿ ಎಂಬ ಸಿದ್ಧಾಮೃತ ರಸದಿಂದ ಕೂಡಿದ ಕೂಪದ ರಸದಲ್ಲಿ (ಭಾವಿಯ ಅಮೃತರಸದಲ್ಲಿ ಅದ್ದಿ) ಅದ್ದಿದಾಗ ಆ ದೈತ್ಯರು ಮತ್ತೆ ಉಜ್ಜೀವಿತರಾಗಿ ಮಹಾಪರಾಕ್ರಮದಿಂದ ಮತ್ತೆ ಎದುರ್ಗೊಂಡಾಗ ಭಯಂಕರರಾದ ಅವರನ್ನು ಕಂಡು ರುದ್ರದೇವನು ಚಿಂತಾಕ್ರಾಂತನಾದನು. ಆಗ ಸರ್ವೋತ್ತಮನಾದ ಶ್ರೀವಿಷ್ಣುವು ಒಂದು ಉಪಾಯವನ್ನು ಮಾಡಿದನು. ಮಯನ ಮಾಯೆಗಿಂತಲೂ ಪರಮಾತ್ಮನ ಮಾಯೆಯು ಅಪರಿಮಿತವಾದ ಮಹಿಮೆ ಯುಳ್ಳದ್ದು. ಅದೇನೆಂದರೆ ಶ್ರೀಹರಿಯು ಗೋರೂಪನಾದನು. ಬ್ರಹ್ಮನು ಕರುವಿ ನಂತಾದನು. ಈ ಹಸು ಕರುಗಳು ತ್ರಿಪುರದ ಪಟ್ಟಣಕ್ಕೆ ಹೋಗಿ ಅಲ್ಲಿದ್ದ ಭಾವಿಯಲ್ಲಿನ ಅಮೃತರಸವನ್ನು ಪೂರ್ತಿಯಾಗಿ ಕುಡಿದುಬಿಟ್ಟವು. ಮೋಹಗೊಂಡ

ಅಸುರರು ಈ ಹಸು-ಕರುಗಳ ವ್ಯಾಪಾರವನ್ನು ನೋಡುತ್ತಲೇ ಇರುವವರಾದಾಗ್ಯೂ ಭಗವಂತನ ಮಾಯಾ ಪ್ರಭಾವದಿಂದ ತಡೆಯಲಿಲ್ಲ. ಅಸುರರಿಗೆ ಆಗತಕ್ಕ ಜಯವು ಕೆಲವು ಕಾಲದವರೆವಿಗೆ ಮಾತ್ರ. ಶಾಶ್ವತವಾದ ಜಯವು ದೇವತೆಗಳಿಗೆ ಎಂಬುದೇ ದೈವಗತಿ ರಹಸ್ಯ. ಇದನ್ನರಿತ ಮಾಯಿಗಳ ಆಚಾರ್ಯನಾದ ಮಯನು ಈ ಜೀವರಾಶಿಯಲ್ಲಿ ಬೇರೆ ಯಾವ ದೇವತೆಯೇ ಆಗಲಿ, ಅಸುರನೇ ಆಗಲಿ ಬೇರೊಬ್ಬನು ಯಾರೇ ಆಗಲಿ ಶ್ರೀಹರಿಯಂತೆ ಸಮರ್ಥನಲ್ಲ. ಅವನ ಸಂಕಲ್ಪದಂತೆ ಎಲ್ಲವೂ ನಡೆಯುತ್ತದೆ. ಆದಕಾರಣ ಸುಮ್ಮನಿರುವುದೇ ಲೇಸೆಂದು ಸುಮ್ಮನಿದ್ದನು. ಅಮೃತಸಂಜೀವಿನೀರಸ ಪೂರ್ತಿ ಗೋವತ್ಸರೂಪಿಗಳಾದ ಬ್ರಹ್ಮ, ವಿಷ್ಣು ದೇವತೆಗಳು ಪಾನಮಾಡಿದ ನಂತರ ರುದ್ರನು ಯುದ್ಧಸನ್ನದ್ಧನಾಗಿ ಪರಮಾತ್ಮನ ತೇಜಸ್ಸಿನಿಂದ ರಕ್ಷಿತನಾಗಿ ತ್ರಿಪುರಾಸುರರನ್ನು ನಾಶಪಡಿಸಿದನು. ಈ ತ್ರಿಪುರಾಸುರ ಸಂಹಾರದ ಒಳ ರಹಸ್ಯದಿಂದಲೂ ಶ್ರೀಹರಿಯೇ ರುದ್ರನಿಗೆ ಶಕ್ತಿಪ್ರದನಾದುದರಿಂದ ಅವನಿಗಿಂತಲೂ ಉತ್ತಮನೆಂದೂ ಸರ್ವೋತ್ತಮನೆಂದೂ ಸಿದ್ಧವಾಗುತ್ತದೆ. ಹೀಗಿರುವಲ್ಲಿ ರುದ್ರಾದಿಗಳು ಶ್ರೀಹರಿಗೆ ಸಮರು ಹೇಗಾದಾರು? ಪ್ರತಿವಾದಿಗಳೇ ಹೇಳಲಿ ಎಂದು ಅಭಿಪ್ರಾಯ.

**ಬ್ರಹ್ಮಾ ತದುಪಧಾರ್ಯಾಥ ಸಹ ದೇವೈಃ ತಯಾ ಸಹ ॥ ೧೬೯ ॥**

**ಜಗಾಮ ಸತ್ರಿನಯನಃ ತೀರಂ ಕ್ಷೀರಪಯೋನಿಧೇಃ ।**
**ಇತಿ ಭಾಗವತೋಕ್ತ್ಯಾ ಚ ಬ್ರಹ್ಮರುದ್ರಾದಯಃ ಸುರಾಃ ॥ ೧೭೦ ॥**

**ಶರಣಾಗತಭೂಕಾರ್ಯಕರಣೇ ಶಕ್ತಿವರ್ಜಿತಾಃ ।**
**ಧರಾಕಾರ್ಯಾಯ ಪುಂಸೂಕ್ತಮಂತ್ರಮುಚ್ಚಾರ್ಯ ಭಕ್ತಿತಃ ॥ ೧೭೧ ॥**

**ಯಂ ಭೇಜುಃ ತತ್ಸಮಃ ಕಃ ಸ್ಯಾತ್ ವದಂತು ಪ್ರತಿವಾದಿನಃ ।**

ಈ ಭಾಗವು ಶ್ರೀಮದ್ಭಾಗವತದ ಹತ್ತನೇ ಸ್ಕಂಧದ ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯದಲ್ಲಿ ಶ್ರೀ ಶುಕಾಚಾರ್ಯರು ಪರೀಕ್ಷಿತ್ ರಾಜನಿಗೆ ವಾಸುದೇವನ ಮಾಹಾತ್ಮ್ಯವನ್ನು ವಿವರಿಸುವಾಗ ಪ್ರಸಕ್ತವಾಗಿದೆ.

ಅಹಂಕಾರಿಗಳಾದ ರಾಜರಿಂದಲೂ, ಆ ರೂಪದಿಂದ ಭೂಮಿಯಲ್ಲಿ ಜನಿಸಿದ ದೈತ್ಯರಿಂದಲೂ, ಅವರ ಅಧಿಕಾಧಿಕಗಳಾದ ಸೈನ್ಯಗಳಿಂದಲೂ ಆಕ್ರಮಿಸಲ್ಪಟ್ಟ

ಭೂಭಾಗದಲ್ಲಿ ಅಧರ್ಮವು ತಾನೇತಾನಾಗಿ ತಾಂಡವಾಡುತ್ತಿರಲಾಗಿ ಧರ್ಮ ಮಾರ್ಗಕ್ಕೆ ಗ್ಲಾನಿಯು ಉಂಟಾದಾಗ, ಆ ಅಧರ್ಮದ ಭಾರವನ್ನು ಸಹಿಸಲಾರದ ಭೂಮಾತೆಯು, ಗೋರೂಪಧಾರಿಣಿಯಾಗಿ ಕಣ್ಣೀರಿಡುತ್ತಾ ತನ್ನ ಸಂಕಟವನ್ನು ಬ್ರಹ್ಮದೇವನ ಬಳಿಗೆ ಹೋಗಿ ವಿಜ್ಞಾಪಿಸಿಕೊಂಡಳು. ಆ ಧರಾದೇವಿಯ ಸಂಕಟ ವನ್ನು ಕೇಳಿದ ಬ್ರಹ್ಮದೇವನು ದೇವತೆಗಳಿಂದಲೂ, ಆ ಭೂದೇವಿಯಿಂದಲೂ, ಕೂಡಿದವನಾಗಿ ರುದ್ರನೊಡನೆ ಕ್ಷೀರಸಮುದ್ರದ ಬಳಿಗೆ ತೆರಳಿ ಶ್ರೀಹರಿ ಮಹಿಮೆಗೆ ಮೀಸಲಾದ ಪುರುಷಸೂಕ್ತ ಮಂತ್ರದಿಂದ ಸ್ತೋತ್ರಮಾಡಿದನು. ರಾಕ್ಷಸರ ಕಾಟದಿಂದ ಉಂಟಾದ ಭೂಭಾರದ ಹರಣ ಕಾರ್ಯದಲ್ಲಿ, ಬೇರೆ ಯಾರೊಬ್ಬರಿಗೂ ಶಕ್ತಿಯಿಲ್ಲದುದರಿಂದಲೇ ಬ್ರಹ್ಮಾದಿದೇವತೆಗಳು ಯಾವ ವಿಷ್ಣುವಿಗೇ ಶರಣಾಗತ ರಾದರೋ ಅಂತಹ ಅಚಿಂತ್ಯ ಶಕ್ತಿಸಂಪನ್ನನಾದ ಶ್ರೀಹರಿಗೆ ಸಮರಾರು? ಪ್ರತಿವಾದಿಗಳು ಹೇಳಲಿ.

ಬ್ರಹ್ಮಾ ಭವಶ್ಚ ತತ್ರೇತ್ಯ ಮುನಿಭಿಃ ನಾರದಾದಿಭಿಃ ॥ ೧೭೨ ॥

ದೇವೈಃ ಸಾನುಚರೈಃ ಸಾರ್ಧಂ ಗೀರ್ಭಿರ್ವಿಷ್ಣುಮಥಾಸ್ತುವನ್ ।
ಯ ಇತ್ಥಂ ಗರ್ಭಸಂಸ್ಥಸ್ಸನ್ ಶಿಶುರ್ಬ್ರಹ್ಮಶಿವಾದಿಭಿಃ ॥ ೧೭೩ ॥

ಸ್ತುತಃ ಸಮಸ್ತಸ್ಯ ಕಃ ಸ್ಯಾದ್ವದಂತು ಪ್ರದಿವಾದಿನಃ ।

ಈ ಮೇಲಿನ ಪದ್ಯಭಾಗವು ಶ್ರೀಮದ್ಭಾಗವತದ ಹತ್ತನೇ ಸ್ಕಂಧದ ಪೂರ್ವಾರ್ಧದ ದೇವಕೀ ಗರ್ಭದಲ್ಲಿದ್ದ ವಿಷ್ಣುವನ್ನು ಬ್ರಹ್ಮಾದಿಗಳು ಸ್ತುತಿಸಿದ ಅಭಿಪ್ರಾಯವನ್ನು ವಿವರಿಸುವ ಎರಡನೇ ಅಧ್ಯಾಯದಲ್ಲಿ ಉಕ್ತವಾಗಿದೆ.

ಭೂಭಾರಹರಣಕ್ಕಾಗಿ ಪರಮಾತ್ಮನು "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯ-ಹಮ್ ॥ (ಭಗವದ್ಗೀತಾ) ಎಂಬ ಗೀತಾಚಾರ್ಯನ ನುಡಿಯಂತೆ ಅಧರ್ಮದ ವಿನಾಶಕ್ಕಾಗಿ ಧರ್ಮದ ಉಜ್ಜೀವನಕ್ಕಾಗಿ ಅವತಾರವನ್ನೆತ್ತುವುದು ಪ್ರಸಿದ್ಧ ವಾಗಿದೆ. ದೈತ್ಯರ ಕಾಟದಿಂದ ದುಃಖಿತಳಾದ ಭೂದೇವಿಯ ಪ್ರಾರ್ಥನೆಯಂತೆ ಬ್ರಹ್ಮಾದಿದೇವತೆಗಳು ಕ್ಷೀರಸಮುದ್ರಕ್ಕೆ ಹೋಗಿ ಪರಮಾತ್ಮನನ್ನು ಪ್ರಾರ್ಥಿಸಿದಾಗ ಶ್ರೀಹರಿಯು ತಾನು ವಸುದೇವನ ಮಗನಾಗಿ ದೇವಕೀದೇವಿಯ ಗರ್ಭದಿಂದ ಅಭಿವ್ಯಕ್ತನಾಗುತ್ತೇನೆಂದು ಅಭಯವನ್ನಿತ್ತಂತೆ, ದೇವಕೀಗರ್ಭದಲ್ಲಿ ಸನ್ನಿಹಿತ

ನಾಗಿದ್ದ ಶ್ರೀಕೃಷ್ಣಪರಮಾತ್ಮನನ್ನು ಬ್ರಹ್ಮದೇವರು, ರುದ್ರದೇವರು ನಾರದಾದಿ ಮುನಿಗಳು, ಅನುಚರರಿಂದೊಡಗೂಡಿದ ದೇವತೆಗಳು ಎಲ್ಲರೂ ಬಂದು ಗರ್ಭದಲ್ಲಿದ್ದ ಶಿಶುರೂಪಿಯಾದ ಶ್ರೀವಿಷ್ಣುವನ್ನು ಸ್ತೋತ್ರಮಾಡಿದರು. ಈ ರೀತಿ ಸಕಲ ರಿಂದಲೂ ಸ್ತೋತ್ರಮಾಡಲ್ಪಟ್ಟ ಆ ಶ್ರೀಹರಿಗೆ ಸಮಾನರು ಯಾರು ತಾನೇ ಇರುವರು? ಪ್ರತಿವಾದಿಗಳು ಹೇಳಲಿ.

**ಯದರೋದೀಃ ಸುರಶ್ರೇಷ್ಠ ಸೋದ್ವೇಗ ಇವ ಬಾಲಕಃ || ೧೭೪ ||**

**ತತಸ್ತ್ವಾಮಭಿಧಾಸ್ಯಂತಿ ನಾಮ್ನಾ ರುದ್ರ ಇತಿ ಪ್ರಜಾಃ ।**

(ಭಾ. ಸ್ಕಂ. ೩, ಅ. ೧೩, ಶ್ಲೋ. ೧೦)

ಈ ಪದ್ಯವು ಶ್ರೀಮದ್ಭಾಗವತದ ಮೂರನೇ ಸ್ಕಂಧದಲ್ಲಿ ಹದಿಮೂರನೇ ಅಧ್ಯಾಯದಲ್ಲಿ ಹತ್ತನೆಯ ಪದ್ಯವಾಗಿದೆ.

ಸರ್ವೋತ್ತಮನಾದ ಶ್ರೀಹರಿಯ ಸರ್ವೋತ್ತಮತ್ವಜ್ಞಾನವು ಮೋಕ್ಷ ಸಾಧನವು. ಅದರಂತೆ ತಾರತಮ್ಯ ಜ್ಞಾನವೂ ಮೋಕ್ಷಕ್ಕೆ ಪ್ರಯೋಜಕವಾದುದರಿಂದ ಮೂರನೇ ಸ್ಕಂಧದಲ್ಲಿ ಬ್ರಹ್ಮ ಮೊದಲಾದ ದೇವತೆಗಳ ತಾರತಮ್ಯವನ್ನು ಸೃಷ್ಟಿ ಕ್ರಮದಿಂದ ವಿವರಿಸುತ್ತಾರೆ.

ಚತುರ್ಮುಖ ಬ್ರಹ್ಮದೇವರು

"ತಮಸ್ತು ಶಾರ್ವರಂ ಪ್ರೋಕ್ತಂ, ಮೋಹಶ್ಚೈವ ವಿಪರ್ಯಯಃ ।
ತದಾಗ್ರಹೋ ಮಹಾಮೋಹಃ ತಾಮಿಸ್ರಂ ಕ್ರೋಧ ಉಚ್ಯತೇ ॥
ಮರಣಂ ತ್ವಂಧತಾಮಿಸ್ರಂ ಅವಿದ್ಯಾಪಂಚಪರ್ವಿಕಾ"

ಎಂಬ ಪ್ರಮಾಣದಂತೆ ಮೊದಲು ತಮಃ ಕತ್ತಲೆ (ಅಜ್ಞಾನ) ಮೋಹ (ವಿಪರೀತ ಜ್ಞಾನ) ಮಹಾಮೋಹ (ವಿಪರೀತಜ್ಞಾನದಲ್ಲಿ ಆಗ್ರಹ) ತಾಮಿಸ್ರ (ಕ್ರೋಧ) ಅಂಧತಾಮಿಸ್ರ (ಮರಣ) ಎಂಬುದಾಗಿ ಪ್ರಸಿದ್ಧವಾದ ಐದು ಅಜ್ಞಾನದ ವೃತ್ತಿಗಳನ್ನು ಸೃಷ್ಟಿಮಾಡಿದರು. ಪಾಪಕಾರಣಗಳಾದ ಇವುಗಳ ಸೃಷ್ಟಿಯಿಂದ ತೃಪ್ತಿಪಡದ ಬ್ರಹ್ಮದೇವರು ತಮ್ಮ ಮನಸ್ಸಿನ ವಿಶೇಷಾಕಾರವಾದ ಪರಿಶುದ್ಧತೆಗಾಗಿ ಮತ್ತೆ ಶ್ರೀ ಹರಿಯ ಧ್ಯಾನವನ್ನು ಮಾಡಿ ಸನಕ, ಸನಂದ, ಸನತ್ಸುಜಾತ ಮತ್ತು ಸನತ್ಕುಮಾರ ರೆಂಬ ಆಜನ್ಮ ಬ್ರಹ್ಮಚಾರಿಗಳಾದ ಸನ್ಯಾಸಿಗಳಾದ ಯೋಗಿವರೇಣ್ಯರನ್ನು ಸೃಷ್ಟಿ ಮಾಡಿದರು. ಇವರ ಸೃಷ್ಟಿಯಾದ ತರುವಾಯ ಇವರುಗಳನ್ನು ಕುರಿತು "ಎಲ್ಲೈ

ಮಕ್ಕಳಿರಾ ! ಪ್ರಜೆಗಳನ್ನು ಸೃಷ್ಟಿಸಿರಿ ಎಂದು ಅಪ್ಪಣೆ ಮಾಡಿದರು. ಕೇವಲ ನಿವೃತ್ತಿ ಮಾರ್ಗದಲ್ಲಿದ್ದು ಯಾವಾಗಲೂ ಶ್ರೀಹರಿಯ ಧ್ಯಾನದಲ್ಲಿಯೇ ತಲ್ಲೀನರಾಗಿದ್ದ ಸನಕಾದಿಗಳು, ಬ್ರಹ್ಮದೇವರು ಹೇಳಿದ ಸೃಷ್ಟಿಕಾರ್ಯಕ್ಕೆ ಒಡಂಬಡಲಿಲ್ಲ. ಇದರಿಂದ ಬ್ರಹ್ಮದೇವರಿಗೆ ಕೋಪಬಂತು. ಸಹಿಸಲಸಾಧ್ಯವಾದ ಆ ಕೋಪವನ್ನು ತಮ್ಮ ಬುದ್ಧಿಯಿಂದ ತಡೆದವರಾದರೂ ಸಹ ಅದನ್ನು ನಿಗ್ರಹಿಸುವುದರೊಳಗಾಗಿಯೇ ಸದ್ಯದಲ್ಲಿಯೇ ನಿಗ್ರಹದ ಮುಂಚಿನ ಕ್ಷಣದಲ್ಲಿಯೇ ಬ್ರಹ್ಮದೇವ ಭ್ರೂಮಧ್ಯಭಾಗ ದಿಂದ (ಅಂದರೆ ಹುಬ್ಬುಗಳ ಮಧ್ಯಭಾಗದಿಂದ) ಕಪ್ಪು ಹುಬ್ಬುಗಳು ಕೆಂಗಣ್ಣು ಗಳನ್ನುಳ್ಳ ಬಾಲಕನೋರ್ವನು ಜನಿಸಿದನು. ಸದ್ಯದಲ್ಲಿಯೇ ಜನಿಸಿದುದರಿಂದ ಈ ಬಾಲಕನಿಗೆ ಸದ್ಯೋಜಾತನೆಂದೂ, ಕಪ್ಪು ಹುಬ್ಬು ಕೆಂಪು ಕಣ್ಣನ್ನುಳ್ಳ ಕಾರಣ, ನೀಲಲೋಹಿತನೆಂದೂ ಎರಡು ಹೆಸರುಗಳು ಈ ಬಾಲಕನಿಗೆ ಬಂದವು.

ಇಂದ್ರ ಮೊದಲಾದ ದೇವತೆಗಳಿಗಿಂತಲೂ ಮೊದಲು ಜನಿಸಿದ ಈ ಬಾಲಕನು ಹುಟ್ಟಿದಕೂಡಲೇ ಅಳಲಾರಂಭಿಸಿದನು. ಆದ್ದರಿಂದಲೇ ಇಂದಿಗೂ ಹುಟ್ಟಿದ ಮಕ್ಕಳೆಲ್ಲಾ ಅಳುವುದು ಅನುಭವಸಿದ್ಧವಾಗಿದೆ. ಬ್ರಹ್ಮನ ಹುಬ್ಬಿನಿಂದ ಹುಟ್ಟಿದ ಸದ್ಯೋಜಾತನಾದ, ನೀಲಲೋಹಿತನಾದ ಈ ಬಾಲಕನು, "ಎಲೈ ತಂದೆಯೇ, ನನಗೆ ಹೆಸರನ್ನೂ, ಆವಾಸಕ್ಕೆ ಜಾಗಗಳನ್ನೂ ವ್ಯವಸ್ಥೆ ಮಾಡಿಕೊಡೆಂದು" ಪ್ರಾರ್ಥಿಸಿದನು.

ಆಗ ಬ್ರಹ್ಮದೇವರು, ಆ ಬಾಲಕನ ಪ್ರಾರ್ಥನೆಯಂತೆ ಆ ಬಾಲಕನನ್ನು ಕುರಿತು—

ಇಂದ್ರಾದಿದೇವತೆಗಳಿಂದ ಶ್ರೇಷ್ಠನಾದ ಮಗನೇ, ಯಾವ ಕಾರಣದಿಂದ ನೀನು ಹುಟ್ಟಿದಕೂಡಲೇ ಉದ್ವೇಗದಿಂದ ಅತ್ತೆಯೋ ಆ ನಿಮಿತ್ತದಿಂದ ಜನರು ನಿನ್ನನ್ನು "ರುದ್ರ" ಎಂಬ ಹೆಸರಿನಿಂದ ಕರೆಯುತ್ತಾರೆ. ನಿನಗೆ ಹನ್ನೊಂದು ಸ್ಥಾನಗಳನ್ನು ಕಲ್ಪಿಸಿಕೊಡುತ್ತೇನೆ. ಅವು ಮನಸ್ಸು, ಇಂದ್ರಿಯಗಳು, ಪ್ರಾಣ, ಆಕಾಶ, ವಾಯು, ಬೆಂಕಿ, ನೀರು, ಭೂಮಿ, ಸೂರ್ಯ, ಚಂದ್ರ ಮತ್ತು ತಪಸ್ಸು ಎಂಬುದಾಗಿ ಹನ್ನೊಂದು ನಿನ್ನ ಆವಾಸಕ್ಕೆ ಸ್ಥಾನಗಳು. ಎಲೈ ರುದ್ರನೇ, ನಿನಗೆ, ಧೀ, ವೃತ್ತಿ, ಅಶಲಾ, ಉಮಾ, ನಿಯುತ್, ಸರ್ಪಿ, ಇಲಾ, ಅಂಬಿಕಾ, ಇರಾವತೀ, ಸುಧಾ, ದೀಕ್ಷಾ ಎಂಬುದಾಗಿ ಹನ್ನೊಂದು

ಜನ ಸ್ತ್ರೀಯರು. ಈ ಸ್ತ್ರೀಯರ ಮೂಲಕವಾಗಿ ಅನೇಕ ಪ್ರಜೆಗಳನ್ನು ಸೃಷ್ಟಿ ಮಾಡು—ಎಂದು ಆಜ್ಞಾಪಿಸಿದನು.

ಈ ರೀತಿ ಪರಮಾತ್ಮನ ಜ್ಯೇಷ್ಠಪುತ್ರರಾದ ಬ್ರಹ್ಮದೇವರ ಹುಬ್ಬುಗಳಿಂದ ಹುಟ್ಟಿದ ಅಂದರೆ ಪರಮಾತ್ಮನಿಗೆ ಮೊಮ್ಮಗನಾದ, ಹುಟ್ಟಿದ ನಂತರ ಅವನ ಅಳುವಿಕೆಯಿಂದ, (ರೋದನದಿಂದ) ರುದ್ರನೆಂದು ವಿಖ್ಯಾತನಾದ ರುದ್ರನು, ಸರ್ವೋತ್ತಮನಾದ ಶ್ರೀಹರಿಗೆ ಹೇಗೆ ತಾನೇ ಸಮನಾದಾನು ?

ರುದ್ರನನ್ನು ಸರ್ವೋತ್ತಮನೆಂದು ವಾದಿಸುವವರಾದ ಪ್ರತಿವಾದಿಗಳೇ ಹೇಳಲಿ.

ತಸ್ಯಾಪಿ ದರ್ಶಯಾಮಾಸ ಸ್ವವೀರ್ಯಂ ಗತಕಲ್ಮಷಃ || ೧೭೫ ||

ಯಚ್ಚಕಾರ ಗಲೇ ನೀಲಂ ತಚ್ಚ ಸಾಧೋರ್ವಿಭೂಷಣಮ್ ।
ಇತಿ ಭಾಗವತೇ ಸ್ಕಂಧೇ ತೃತೀಯೇ ಚಾಷ್ಟಮೇ ವಚಃ || ೧೭೬ ||

ದ್ವೇಧಾಪ್ಯಶಕ್ತತಾಮಾಹ ತಸ್ಯ ಚಾರ್ಥೋ ವಿಚಾರ್ಯತಾಮ್ ।
ಕ್ಷೀರಾಲಾಭಾತ್ ಶಿಶುರಿವ ಸ್ತನಾದೀನಾಮಲಾಭತಃ || ೧೭೭ ||

ಯದರೋದೀತ್ ಸ್ವಪಿತರಂ ಪ್ರತಿರುದ್ರಸ್ತತಃ ಕಿಲ ।
ಪಿತ್ರೈವ ರುದ್ರನಾಮಾನಂ ಚಕಾರ ಸ್ವಸುತಂ ಹರಮ್ || ೧೭೮ ||

ಯತೋ ಗಲೇ ನೀಲಿಮಾಖ್ಯಂ ಕಲ್ಮಷಂ ಸರ್ವಸಮ್ಮತಮ್ ।
ಗರೋಽಸೌ ಗಿರಿಶಗ್ರೀವೇ ಸ್ವವೀರ್ಯಾಂಕಮಥಾತ್ ಕಿಲ || ೧೭೯ ||

ರುದ್ರರೋದನ ವಿಷಯವು ಶ್ರೀಮದ್ಭಾಗವತದ ಮೂರನೇ ಸ್ಕಂಧದ ಹದಿಮೂರನೇ ಅಧ್ಯಾಯದಲ್ಲಿ ಉಕ್ತವಾಗಿದೆ. ಸಮುದ್ರಮಥನ ಮತ್ತು ಸಮುದ್ರವನ್ನು ಮಥನಮಾಡಿದನಂತರ ಮೊದಲು ಹುಟ್ಟಿದ ಹಾಲಾಹಲ ವಿಷದ ಪಾನ ಮಾಡಿ, ರುದ್ರನು ನೀಲಗ್ರೀವ ಅಥವಾ ವಿಷಕಂಠ ಎಂದು ಕರೆಯಲ್ಪಡತಕ್ಕ ಸಂಗತಿಯು ಶ್ರೀಮದ್ಭಾಗವತದ ಎಂಟನೇ ಸ್ಕಂಧದ ಏಳನೇ ಅಧ್ಯಾಯದ ನಲವತ್ತ ಮೂರನೇ ಶ್ಲೋಕದಲ್ಲಿ ಪ್ರಸಕ್ತವಾಗಿದೆ.

ರೋದನಾದ್ರುದ್ರನಾಮಾ ಯೋ ನೀಲಗ್ರೀವೋ ವಿಷೋಲ್ಬಣಾತ್ ।

ಹಾಲಾಹಲ ವಿಷಪಾನದ ವಿವರವು ಈ ರೀತಿ ಇದೆ.

ಅಮೃತಮಥನಕಾಲದಲ್ಲಿ ಕ್ಷೀರಸಮುದ್ರದಿಂದ ಮೊದಲು ಹಾಲಾಹಲವೆಂಬ ಭಯಂಕರವಾದ ವಿಷವು ಹುಟ್ಟಿತು. ಆ ಹಾಲಾಹಲ ವಿಷದ ಪಾನವನ್ನು ಮಾಡುವ ವಿಶಿಷ್ಟ ಶಕ್ತಿಯು ಶ್ರೀಹರಿಗೆ ಇರುವುದಾದರೂ ಪರಮಾತ್ಮನು ಅದನ್ನು ಪಾನ ಮಾಡಲಿಲ್ಲ. ತನ್ನ ಭಕ್ತನಾದ ಪ್ರಧಾನ ವಾಯುದೇವನಿಗೆ ಅದರ ಕೀರ್ತಿಯು ಬರಲೆಂದು ಪ್ರಧಾನವಾಯುದೇವರಿಗೆ ಅಪ್ಪಣೆಮಾಡಿದಾಗ ಅದನ್ನು ಪರಮಾತ್ಮನ ಪ್ರೇರಣೆಯಿಂದ ಪ್ರಧಾನವಾಯುದೇವನೇ ಪೂರ್ತಿಯಾಗಿ ಪಾನಮಾಡಿದನು. ಈ ವಿಷಯವನ್ನು ವೇದವಾಣಿಯೇ ತಿಳಿಸುತ್ತಲಿದೆ.

" ವಾಯುರಸ್ಮಾ ಉಪಾಮನ್ಥತ್ ಪಿನಷ್ಟಿಸ್ಮಾಕುನನ್ನಮಾ ।
ಕೇಶೀ ವಿಷಯಪಾತ್ರೇಣ ಯದ್ರುದ್ರೇಣಾಪಿಬತ್ ಸಹಾ " ॥

ಆ ಶ್ರುತಿಯ ಅರ್ಥವು ಈ ರೀತಿ ಇದೆ.

ಕೇಶೀ=ಪ್ರಶಸ್ತವಾದ ಕೇಶವನ್ನುಳ್ಳ, ಸುಖರೂಪನಾದ ನಾರಾಯಣನೆಂಬ ಈಶನನ್ನುಳ್ಳವನಾದ ಕುನನ್ನಮಾ=ವಾಯುವು (ಪ್ರಧಾನವಾಯುವು) ಕುತ್ಸಿತ ರಾದ ಕಲ್ಯಾದಿದೈತ್ಯರನ್ನು ವಿಶೇಷವಾಗಿ ಅಂಧತಮಸ್ಸಿನಲ್ಲಿ ಮುಳುಗಿಸುವವ ರಾದುದರಿಂದ ಕುನನ್ನಮಾ ಎಂದು ಕರೆಯಲ್ಪಡತಕ್ಕವರಾದ ಪ್ರಧಾನವಾಯು ದೇವರು, ವಿಷಸ್ಯ=ಹಾಲಾಹಲವೆಂಬ ಕಾಲಕೂಟ ವಿಷದ, ಪಾತ್ರೇಣ=ಸುವರ್ಣ ಪಾತ್ರದಿಂದ, ತುಂಬಿಸಲ್ಪಟ್ಟ ಯಾವ ವಿಷವಿತ್ತೋ ಅದನ್ನು, ರುದ್ರೇಣ ಸಹ= ರುದ್ರನೊಡನೆ, ಅಪಿಬತ್=ಕುಡಿದರು, ಕುಡಿದನಂತರ ಉಳಿದ ಸ್ವಲ್ಪ ಭಾಗವಾದ ಆ ವಿಷವನ್ನು, ಅಸ್ಮೈ=ಈ ರುದ್ರನಿಗಾಗಿ, ಉಪಾಮನ್ಥತ್=ಕುಡಿಯಲು ಹೇಗೆ ಯೋಗ್ಯವಾಗುತ್ತದೆಯೋ, ಹಾಗೆ, ಅಮಥ್ನಾತ್=ಚೆನ್ನಾಗಿ ಮಥನ ಮಾಡಿ ಉಜ್ಜಿ ಅದರ ತೀಕ್ಷ್ಣತೆಯನ್ನು ಕಮ್ಮಿ ಮಾಡಿದರು. ಈ ವೇದವಾಕ್ಯದಲ್ಲಿ ಅಸ್ಮೈ ಉಪಾಮಥ್ನಾತ್=ಎಂದು ಇರುವುದರಿಂದ, ತಮಗೋಸ್ಕರ ಮಥನವನ್ನು ಮಾಡಲಿಲ್ಲ. ತಾವು ಅತ್ಯುಗ್ರವಾದ ಆ ವಿಷವನ್ನು ಇದ್ದ ರೀತಿಯಲ್ಲಿಯೇ ಕುಡಿದು ಜೀರ್ಣಿಸಿಕೊಂಡರೆಂದು ಅಭಿಪ್ರಾಯ ವ್ಯಕ್ತಪಡುತ್ತದೆ. ಪಾತ್ರದಲ್ಲಿಯೇ ಮಥನ ವನ್ನು ಮಾಡಿದ್ದರೆ ತಮಗಾಗಿಯೂ ಪಾತ್ರದಲ್ಲಿಯೇ ಮಥನಮಾಡಬೇಕಾಗಿತ್ತು. ಹಾಗೆ ಮಾಡದೇ ಪ್ರಧಾನವಾಯುದೇವರು ತಾವು ಸಂಪೂರ್ಣವಾಗಿ ಅತಿಕರಾಳ ವಾದ ವಿಷಪಾನಮಾಡಿ, ತಮ್ಮ ಕೈಯಲ್ಲಿ ಅವಶಿಷ್ಟವಾದ ಭಾಗವನ್ನೂ ಸಹ

"ಸತ್ವವನ್ನು ಅಂಗೈಯ್ಯಲ್ಲಿ ಉಜ್ಜಿ ತಿಕ್ಕುವಂತೆ" ಆ ಅತ್ಯಲ್ಪ ವಿಷಭಾಗದ ವೀರ್ಯವನ್ನು ತಿಕ್ಕಿ, ನಿರ್ವೀರ್ಯವಾಗಿ ಮಾಡಿದನಂತರ ಅದನ್ನು ರುದ್ರನಿಗೆ ಕೊಟ್ಟರು. ಅದನ್ನು ಕುಡಿದಕೂಡಲೇ ಅದು ಕುತ್ತಿಗೆಗೆ ಬರುವಷ್ಟರಲ್ಲಿಯೇ ರುದ್ರನು ಮೂರ್ಛಿತನಾಗಿ ಬಿದ್ದನು. ದಯಾಮಯನಾದ ಶ್ರೀಹರಿಯು ರುದ್ರನ ಮೇಲಿನ ಕರುಣೆಯಿಂದ ತನ್ನ ಕೈಯಿಂದ ರುದ್ರನಿಗೆ ಸ್ಪರ್ಶ ಮಾಡಿದನಂತರ ರುದ್ರನು ಎಚ್ಚೆತ್ತನು. ವಿಷವು ಕುತ್ತಿಗೆಯಲ್ಲಿಯೇ ನಿಂತುಬಿಟ್ಟಿತು. ವಿಷವನ್ನು ಕುಡಿದಾಗ ರುದ್ರನು ಅದರ ಬಾಧೆಯನ್ನು ತಡೆಯಲಾರದೇ ಅತ್ತುಬಿಟ್ಟನು. ಈ ರೋದನ ಕಾರಣದಿಂದಲೂ ಶಿವನಿಗೆ ರುದ್ರನೆಂದು ಹೆಸರುಂಟಾಯಿತು.

ಕುತ್ತಿಗೆಯಲ್ಲಿ ಶ್ರೀಹರಿಕರಸ್ಪರ್ಶಪ್ರಭಾವದಿಂದ ವಿಷವು ಅಲ್ಲೇ ನಿಂತು ಬಿಟ್ಟಿದ್ದರಿಂದ ರುದ್ರನಿಗೆ ನೀಲಗ್ರೀವನೆಂದೂ, ವಿಷಕಂಠನೆಂದೂ ಹೆಸರುಗಳು ಉಂಟಾದುವು. ಆದರೆ ಹಾಲಾಹಲದ ಸಂಪೂರ್ಣ ಭಾಗವನ್ನು ಪಾನಮಾಡಿದಾಗ್ಯೂ ಸಹ ಪ್ರಧಾನವಾಯುದೇವನಿಗೆ ಲೇಶಮಾತ್ರವೂ ದುಃಖವಾಗಲಿಲ್ಲ. ಇದು ಅತಿ ಗೋಪ್ಯವಾದ ಅರ್ಥವಾದುದರಿಂದ ಪುರಾಣಾದಿಗಳಲ್ಲಿ ಸ್ಪಷ್ಟವಾಗಿ ಎಲ್ಲೂ ಹೇಳಿಲ್ಲ. ಅಲ್ಪ ವಿಷಪಾನಮಾತ್ರದಿಂದಲೇ ಶಿವನಿಗೆ ತಲೆಶೂಲೆಯ ಬಾಧೆಯು ಕಾಡಿಸುತ್ತಲಿದೆ. ಅದರ ಪರಿಹಾರಕ್ಕಾಗಿ ವಿಷ್ಣುಪಾದೋದಕವನ್ನು ಅಂದರೆ ಗಂಗೆಯನ್ನು ಧಾರಣ ಮಾಡಿದ್ದಾನೆ. ಮತ್ತು ಸದಾ ಅಭಿಷೇಕಪ್ರಿಯನಾಗಿರುತ್ತಾನೆ. ಮತ್ತು ಅತಿ ಶೀತಲಕಿರಣನಾದ ಚಂದ್ರನನ್ನು ತಲೆಯಲ್ಲಿ ಧರಿಸಿ ಚಂದ್ರಚೂಡನಾಗಿದ್ದಾನೆ. ಆ ಹಾಲಾಹಲದ ಅತ್ಯಲ್ಪಭಾಗವು ಪ್ರಧಾನವಾಯುದೇವರಿಂದ ಕೈಯ್ಯಲ್ಲಿ ತಿಕ್ಕಲ್ಪಟ್ಟು ನಿರ್ವೀರ್ಯವಾದ ಭಾಗವನ್ನೂ ಶಿವನು ಧರಿಸಿದುದೂ ಶ್ರೀಹರಿಯ ಮಂತ್ರಜಪದ ಮಹಿಮೆಯಿಂದಲೇ ಎಂಬುದನ್ನು ಪುರಾಣವಾಕ್ಯಗಳು ತಿಳಿಸುತ್ತಲಿವೆ. ಮಹಾಭಾರತ ತಾತ್ಪರ್ಯ ನಿರ್ಣಯದಲ್ಲಿ ಹತ್ತನೇ ಅಧ್ಯಾಯದಲ್ಲಿ ಕಾಲ ಕೂಟ ವಿಷದ ಪಾನದ ವಿಚಾರವಾಗಿ ಶ್ರೀಮದಾಚಾರ್ಯರು ವಿವರವನ್ನು ತಿಳಿಸಿರುತ್ತಾರೆ.

ತದಾ ಜಗದ್ವ್ಯಾಪಿವಿಷಂ ಸಮುತ್ಥಿತಂ
ತ್ವದಾಜ್ಞಯಾ ವಾಯುರಧಾತ್ಕರೇ ನಿಜೇ ॥ ೧೩ ॥
ಕಲೇಃ ಸ್ವರೂಪಂ ತದತೀವ ದುಸ್ಸಹಂ
ವರಾದ್ವಿಧಾತುಃ ಸಕಲೈಶ್ಚ ದುಸ್ಸ್ಪೃಶಮ್ ।
ಕರೇ ವಿಮಥ್ಯಾಸ್ತಬಲಂ ವಿಧಾಯ
ದದೌ ಸ ಕಿಂಚಿದ್ಗಿರಿಶಾಯ ವಾಯುಃ ॥ ೧೪ ॥

ಸ ತತ್ಪಿಬನ್ ಕಂಠಗತೇನ ತೇನ ನಿಪಾತಿತೋ ಮೂರ್ಛಿತ ಆಶು ರುದ್ರಃ ।
ಹರೇಃ ಕರಸ್ಪರ್ಶಬಲಾತ್ಸಸಂಜ್ಞಾಂ
ಅವಾಪ ನೀಲೋಽಸ್ಯ ಗಲಸ್ತದಾಸೀತ್ ॥ ೧೫ ॥

ಅಥ ತ್ವದಾಜ್ಞಾಂ ಪುರತೋ ನಿಧಾಯ
ನಿಧಾಯ ಪಾತ್ರೇ ತಪನೀಯರೂಪೇ ।
ಸ್ವಯಂ ತ್ವನಿರ್ಮರ್ಥ್ಯ ಬಲೋಪಪನ್ನಂ
ಪಪೌ ಸ ವಾಯುಸ್ತದುತಾಸ್ಯ ಜೀರ್ಣಮ್ ॥ ೧೬ ॥

ಅತ್ಯಲ್ಪಪಾನಾಚ್ಚ ಬಭೂವ ಕೂಲಾ
ಶಿವಸ್ಯ ಶೀರ್ಷ್ಣಸ್ಯ ಕರಾವಶಿಷ್ಟಮ್ ।
ಅಭೂತ್ ಕಲಿಸ್ಸರ್ವಜಗತ್ಸುಪೂರ್ಣಂ
ಪೀತ್ವಾ ವಿಕಾರೋ ನ ಬಭೂವ ವಾಯೋಃ ॥ ೧೭ ॥

(ಮಹಾಭಾರತ ತಾತ್ಪರ್ಯ ನಿರ್ಣಯ, ಅ. ೧೬, ಶ್ಲೋ. ೧೪–೧೭.)

ಈ ಶ್ಲೋಕಗಳ ಅಭಿಪ್ರಾಯವನ್ನು ಹಿಂದೆಯೇ ತಿಳಿಸಲಾಗಿದೆ.

ತಂ ದೃಷ್ಟ್ವಾ ಘೋರಸಂಕಾಶಂ ಪ್ರಾದುರ್ಭೂತಂ ಮಹಾವಿಷಂ ।
ಧ್ಯಾತ್ವಾ ನಾರಾಯಣಂ ದೇವಂ ಹೃದಯೇ ಗರುಡಧ್ವಜಮ್ ॥
॥ ಇತಿ ಬ್ರಹ್ಮಾಂಡಪುರಾಣವಚನಮ್ ॥

ಯೇನ ಜೀರ್ಣಂ ಗರಲಂ ಕಂಠಸ್ಥಂ ಚ ಕಪಾಲಿನಃ ।
ಅಂತರಾತ್ಮಧೃತಂ ತಸ್ಯ ಹೃದಯೇ ಗರುಡಧ್ವಜಮ್ ॥ ಇತಿ ॥

ಮತ್ತು ಗರುಡಪುರಾಣದಲ್ಲಿ ಪಾರ್ವತಿಯನ್ನು ಕುರಿತು ವಿಷಪಾನದ ರಹಸ್ಯವನ್ನು ರುದ್ರನು ಪಾರ್ವತೀದೇವಿಗೆ ತಿಳಿಸುತ್ತಲಿದ್ದಾನೆ.

ಅಪ್ರಕಾಶಮಿದಂ ದೇವಿ ಗುಹ್ಯಾದ್ಗುಹ್ಯತರಂ ಪದಮ್ ।
ಪುರಾಹಮಬ್ಧಿಮಥನೇ ಪತಗೇಂದ್ರವಿಷಾವಹಮ್ ॥
ಅವಧ್ಯಂ ಗರಲಂ ಘೋರಂ ಅಭುಂಜಮಮೃತಂ ಯಥಾ ॥ ಇತಿ ಗಾರುಡೇ ॥

ಮತ್ತು ಮಂತ್ರಶಾಸ್ತ್ರದಲ್ಲೂ ಈ ವಿಷಯವು ಪ್ರತಿಪಾದಿತವಾಗಿದೆ.

ಅಚ್ಯುತಾನಂತಗೋವಿಂದಮಂತ್ರತೋಽಪ್ಸು ಶುಭಂ ಪರಮ್ ।
ಓಂ ನಮಸ್ಸಂಪುಟೀಕೃತ್ಯ ಜಪನ್ ವಿಷಧರೋಽಹರತ್
॥ ಇತಿ ಮಂತ್ರಶಾಸ್ತ್ರ ವಚನಮ್ ॥

ಬೇರೆ ಬೇರೆ ಪುರಾಣಗಳಲ್ಲೂ ಸಹ ಪರಮಾತ್ಮನ ಅಚ್ಯುತ, ಅನಂತ, ಗೋವಿಂದ ಎಂಬ ನಾಮತ್ರಯ ಪ್ರಭಾವದಿಂದಲೇ ರುದ್ರನು ವಿಷಪಾನ ಮಾಡಿದ ನೆಂಬುದಾಗಿ ಹೇಳಲ್ಪಟ್ಟಿದೆ.

ನಾಮತ್ರಯಪ್ರಭಾವಾಚ್ಚ ವಿಷ್ಣೋಸ್ಸರ್ವಗತಸ್ಯ ವೈ ।
ವಿಷಂ ತದಭವಜ್ಜೀರ್ಣಂ ಲೋಕಸಂಹಾರಕಾರಣಮ್
॥ ಇತಿ ಪುರಾಣವಚನಮ್ ॥

ಆದರೆ ಇದಕ್ಕೆ ವಿರುದ್ಧವಾಗಿ ಕೆಲವು ತಾಮಸಪುರಾಣಗಳಲ್ಲಿ "ಅಮೃತ-ಮಥನ"ದ ಕಾಲದಲ್ಲಿ ಕಾಲಕೂಟ ವಿಷವು ಹುಟ್ಟಿದಾಗ ಅದನ್ನು ನಿಯಂತ್ರಿಸಲು ಅಶಕ್ತರಾದ ವಿಷ್ಣುವೇ ಮೊದಲಾದ ದೇವತೆಗಳು ಓಡಿಹೋದರೆಂದೂ ಸರ್ವಲೋಕ ರಕ್ಷಣೆಗಾಗಿ ಶಿವನೇ ವಿಷವನ್ನೆಲ್ಲಾ ಪಾನಮಾಡಿದನೆಂದೂ ಹಿಂದೆ ಹೇಳಿದ ಸಾತ್ವಿಕ ಗಳಾದ ಅನೇಕ ಪುರಾಣಗಳಲ್ಲಿ ಹೇಳಿರುವುದಕ್ಕೆ ವಿಪರೀತವಾಗಿ ಹೇಳಲಾಗಿದೆ. ಸಾತ್ವಿಕ, ರಾಜಸ, ತಾಮಸಗಳೆಂದು ವಿಭಾಗಿಸಲ್ಪಟ್ಟಿರುವ ಪುರಾಣಗಳಲ್ಲಿ ಸಾತ್ವಿಕ ಪುರಾಣಗಳು ಮಾತ್ರ ಅಪೌರುಷೇಯವಾದ ವೇದಾನುಸಾರಿಯಾದುದರಿಂದ ಅವುಗಳು ಮಾತ್ರ ಪ್ರಮಾಣಗಳೇ ಹೊರತು, ತಾಮಸಜನರ ಮೋಹನಕ್ಕಾಗಿ ರಚಿತಗಳಾಗಿರುವ ರಾಜಸತಾಮಸ ಪುರಾಣಗಳು ಪ್ರಮಾಣಗಳಲ್ಲ. ಅವುಗಳಿಂದ ಯಾವ ಪ್ರಮೇಯವೂ ಸಿದ್ಧಿಸುವುದಿಲ್ಲ.

ಸಾತ್ವಿಕ ಪುರಾಣಗಳು ಯಾವುವೆಂದರೆ :—

ವೈಷ್ಣವಂ ನಾರದೀಯಂ ಚ ತಥಾ ಭಾಗವತಂ ಶುಭಂ ।
ಗಾರುಡಂ ಚ ತಥಾ ಪಾದ್ಮಂ ವಾರಾಹಂ ಶುಭದರ್ಶನೇ ॥
ಷಡೇತಾನಿ ಪುರಾಣಾನಿ ಸಾತ್ವಿಕಾನಿ ಮತಾನಿ ವೈ ॥

ರಾಜಸಪುರಾಣಗಳು ಯಾವುವೆಂದರೆ :—

ಬ್ರಹ್ಮಾಂಡಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ತಥೈವ ಚ ।
ಭವಿಷ್ಯದ್ವಾಮನಂ ಬ್ರಾಹ್ಮಂ ರಾಜಸಾನಿ ನಿಬೋಧ ಮೇ ॥

ತಾಮಸಪುರಾಣಗಳು ಯಾವುವೆಂದರೆ :—

ಮಾತ್ಸ್ಯಂ ಕೌರ್ಮಂ ತಥಾ ಲೈಂಗಂ ಶೈವಂ ಸ್ಕಾಂದಂ ತಥೈವ ಚ ।
ಆಗ್ನೇಯಂ ಚ ಷಡೇತಾನಿ ತಾಮಸಾ ನಿರಯಪ್ರದಾಃ ॥

ಈ ರೀತಿ ಸಾತ್ವಿಕ, ರಾಜಸ, ತಾಮಸಪ್ರಭೇದದಿಂದ ಕೂಡಿದ ಹದಿನೆಂಟು ಪುರಾಣಗಳಲ್ಲಿ ಎಲ್ಲೆಲ್ಲಿ ಪರಸ್ಪರ ವಿರೋಧವು ಕಂಡುಬರುತ್ತದೆಯೋ ಆ ಅಂಶದಲ್ಲಿ ಸಾತ್ವಿಕದಲ್ಲಿ ಹೇಳಿರುವುದನ್ನೇ ಸ್ವೀಕರಿಸಬೇಕು. ಏತಕ್ಕೆಂದರೆ ರಾಜಸತಾಮಸಗಳಲ್ಲಿ ಹೇಳಿರುವ ಅತಿವಿಸ್ತಾರವಾದ ಅನೇಕ ಅಂಶಗಳು ಅಪೌರುಷೇಯವಾದ ವೇದಕ್ಕೆ ವಿರುದ್ಧವಾದುದರಿಂದ ಅವೆಲ್ಲವನ್ನೂ ಸ್ವೀಕರಿಸುವಂತಿಲ್ಲ. ಸಾತ್ವಿಕ ಪುರಾಣಗಳು ವೇದಕ್ಕೆ ವ್ಯಾಖ್ಯಾರೂಪವಾಗಿ ವೇದಾರ್ಥಗಳನ್ನು ಉದಾಹರಣಗಳ ಮೂಲಕವಾಗಿ ತಿಳಿಸಿಕೊಡತಕ್ಕವುಗಳಾಗಿರುವುದರಿಂದ ಅವುಗಳು ಪ್ರಮಾಣಗಳಾಗಿವೆ. "ಇತಿಹಾಸಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್" ಪುರಾಣಗಳು ಸಮಾಧಿಭಾಷಾ, ದರ್ಶನಭಾಷಾ, ಗುಹ್ಯಭಾಷಾ, ಎಂಬ ಮೂರು ಭಾಷೆಗಳಿಂದ ಅರ್ಥವನ್ನು ಪ್ರತಿಪಾದಿಸುವುಗಳಾಗಿವೆ. ಒಂದುನೂರು ರೀತಿಗಳ ಜ್ಞಾನವು ಯಾರಿಗೆ ಇಲ್ಲವೋ ಭಾಷಾತ್ರಯಗಳ ಪರಿಚಯವು ಯಾರಿಗೆ ಇಲ್ಲವೋ ಅಂತಹವನಿಗೆ ಪುರಾಣಾರ್ಥಗಳನ್ನು ತಿಳಿಸುವ ಅಧಿಕಾರವೇ ಇಲ್ಲ. ಯಥಾ ಶ್ರುತವಾದ ಅರ್ಥವನ್ನೇ ನಂಬಿ ವಿವರಿಸುವವನಿಗೆ ನರಕಪ್ರಾಪ್ತಿಯಾಗುತ್ತದೆಂದು ಪ್ರಮಾಣವಾಕ್ಯವು ತಿಳಿಸುತ್ತಲಿದೆ.

ಭಾಷಾತ್ರಯಂ ನ ಜಾನಾತಿ ರೀತೀನಾಂ ಶತಮೇವ ಚ ।
ಪುರಾಣಾರ್ಥಂ ವದನ್ ವಿಪ್ರಃ ನಿರಯಂ ಯಾತಿ ನ ಸಂಶಯಃ ॥ ಇತಿ ॥

ರಾಜಸ ಮತ್ತು ತಾಮಸ ಪುರಾಣಗಳಲ್ಲಿ ದರ್ಶನ ಭಾಷಾದಿಂದ ಶಿವನೇ ಮೊದಲಾದ ಇತರ ದೇವತೆಗಳಿಗೆ ಸಂಬಂಧಿಸಿದಂತೆ ಅಧಿಕ ಗ್ರಂಥಭಾಗದಿಂದ ಆಯಾ ದೇವತೆಗಳನ್ನು ಸರ್ವೋತ್ತಮದೇವತೆಗಳೆಂದು ನಿರೂಪಿಸಿರುವುದಾಗ್ಯೂ ಸಮಾಧಿ ಭಾಷಾದಿಂದ ಆಯಾದೇವತೆಗಳ ಮುಖದಿಂದಲೇ ಶ್ರೀಹರಿಯ ಸರ್ವೋತ್ತಮತ್ವವೂ ಇತರ ದೇವತೆಗಳಿಗೆ ಪರಮಾತ್ಮಾಧೀನತ್ವವೂ ಉಕ್ತವಾಗಿರುವ ಪ್ರಯುಕ್ತ ಸಚ್ಛಾಸ್ತ್ರಗಳೆಂದು ಪರಿಗಣಿಸಲ್ಪಟ್ಟು ವೇದಾದಿಗಳಿಗೆ ಅನುಗುಣವಾದ ಶ್ರೀವಿಷ್ಣುಸರ್ವೋತ್ತಮತ್ವ ಪ್ರತಿಪಾದಕವಾದ ವಾಕ್ಯಗಳಿಗೆ ಪ್ರಾಮಾಣ್ಯವನ್ನು ಒಪ್ಪಿರುವುದರಿಂದ

ಪ್ರಮೇಯವನ್ನು ನಿರೂಪಿಸುವಾಗ ಭಾಷ್ಯಕಾರರು ಸ್ಕಾಂದಾದಿ ತಾಮಸಪುರಾಣ ವಾಕ್ಯಗಳನ್ನು ಉದಾಹರಿಸಿರುವುದು ಸಂಗತವಾಗಿದೆ.

ಸ ಕಾಲಿಯವಿಷಶ್ವಾಸರೂಷಿತೇ ಯಮುನಾಹ್ರದೇ || ೧೮೦ ||

ತದಾನನಸಹಸ್ರೋಗ್ರದಂಷ್ಟ್ರಾಘಾತಶತೈರಪಿ ।
ನಾರೋದೀತ್ ಯೋ ನಾಪಿ ರುಗ್ಣಸ್ತಥಾ ಪೂತನಿಕಾಸ್ತನಮ್ || ೧೮೧ ||

ಕಾಲಕೂಟವಿಷಾಲೇಪದೂಷಿತಂ ಯಃ ಪಿಬನ್ ಶಿಶುಃ ।
ನಾರೋದೀತ್ ನ ಚ ರುಗ್ಣೋಽಭೂತ್
ತಸ್ಯ ಶೂಲೀ ಶಿವಃ ಕಥಮ್ || ೧೮೨ ||

ಸಮತಾಮೇತಿ ಕೃಷ್ಣಸ್ಯ ವದಂತು ಪ್ರತಿವಾದಿನಃ ।

ಹಿನ್ನೆಲೆ ಮತ್ತು ತಾತ್ಪರ್ಯ—

ನೀರನ್ನು ಕುಡಿಯಲು ಬಂದ ಹಸು ಕರು ಮೊದಲಾದ ಎಲ್ಲರನ್ನೂ ವಿಷ ಮಿಶ್ರಿತವಾದ ನೀರಿನಿಂದ ಸಾಯಿಸುತ್ತಲಿದ್ದ ಕಾಲಿಯಸರ್ಪನ ವಾಸಸ್ಥಾನವಾದ ಯಮುನಾನದಿಯ ಆಳವಾದ ಭಯಂಕರವಾದ ಮಡುವಿನಲ್ಲಿ ಕಾಲಿಯಸರ್ಪದ ವಿಷಜ್ವಾಲೆಯಿಂದ ಕಲುಷಿತವಾದುದರಲ್ಲಿ ಶ್ರೀಕೃಷ್ಣಪರಮಾತ್ಮನು ಧುಮುಕಿದಾಗ ಆ ಹ್ರದದಲ್ಲಿದ್ದ ನಾಗನು ಕೋಪಾವಿಷ್ಟನಾಗಿ ನಾಗಕನ್ನಿಕೆಯರಿಂದ ಕೂಡಿ ಶ್ರೀಕೃಷ್ಣ ಪರಮಾತ್ಮನನ್ನು ಮರ್ಮಪ್ರದೇಶದಲ್ಲಿ ಕಚ್ಚಿ ಸುತ್ತುವರಿದು ಬಿಗಿಹಿಡಿದಾಗ್ಯೂ ಸಹ ಶ್ರೀಕೃಷ್ಣನು ಅಳಲಿಲ್ಲ. ಅಥವಾ ನಾಗನಿಂದ ಎಷ್ಟಾವರ್ತಿ ಕಚ್ಚಲ್ಪಟ್ಟರೂ ಸಹ ಶ್ರೀಕೃಷ್ಣನಿಗೆ ಸ್ವಲ್ಪವೂ ಗಾಯವಾಗಲಿಲ್ಲ. ಹಾಗೆಯೇ ಕಾಲಕೂಟವಿಷದ ಆಲೇಪದಿಂದ ದೂಷಿತವಾದ ಪೂತನಿಯ ಮೊಲೆಯುನ್ನುಂಡವನಾದಾಗ್ಯೂ ಅಳಲಿಲ್ಲ. ರೋಗಗ್ರಸ್ತನಾಗಲಿಲ್ಲ. ಆದರೆ ಶಿವನಾದರೋ ಬ್ರಹ್ಮನ ಹುಬ್ಬಿನಿಂದ ಹುಟ್ಟಿದ ಕೂಡಲೇ ಕುಡಿಯಲು ಹಾಲಿಲ್ಲ, ತನಗೆ ಹೆಸರಿಲ್ಲ, ನಿಲ್ಲಲು ಜಾಗವಿಲ್ಲ ಎಂದು ದುಃಖದಿಂದ ಅತ್ತು (ರೋದನಾತ್ ರುದ್ರಃ) ರುದ್ರನೆಂದು ಕರೆಯಲ್ಪಟ್ಟನು. ಪ್ರಧಾನವಾಯುದೇವನು ಕ್ಷೀರಸಮುದ್ರದಲ್ಲಿ ಹುಟ್ಟಿದ ಹಾಲಾಹಲದ ಪ್ರಧಾನ ಭಾಗವನ್ನು ಪಾನಮಾಡಿ ಬಾಕಿ ಉಳಿದ ಅತ್ಯಲ್ಪಭಾಗವನ್ನು ಉಜ್ಜಿ ನಿರ್ವೀರ್ಯ ಮಾಡಿ, ಅತ್ಯಲ್ಪವಾದ ಶೇಷಭಾಗವನ್ನು ರುದ್ರನಿಗೆ ಕೊಟ್ಟಾಗ ರುದ್ರನು ಅತ್ಯಲ್ಪ

ವಾದ ಅದನ್ನು ಪಾನಮಾಡಿದಕೂಡಲೇ ಅತ್ತು ಅದರ ವೇಗವನ್ನು ತಡೆಯಲಾರದೆ ಮೂರ್ಛೆಗೊಂಡು ಪರಮದಯಾಳುವಾದ ಶ್ರೀಹರಿಯ ಹಸ್ತಸ್ಪರ್ಶದಿಂದ ಮತ್ತೆ ಎಚ್ಚೆತ್ತನು. ಆದಾಗ್ಯೂ ಆ ವಿಷದ ಶೂಲೆಯ ಪರಿಹಾರಕ್ಕಾಗಿ ಶೀತಲವಾದ ವಿಷ್ಣುಪಾದೋದಕವನ್ನು ತಲೆಯಮೇಲೆ ಧರಿಸಿದನು. ಇಂತಹ ಶಿವನು ಶ್ರೀಹರಿಗೆ ಹೇಗೆ ತಾನೇ ಸಮನಾದಾನು? ಶಿವನೇ ಸರ್ವೋತ್ತಮನೆಂದು ಶುಷ್ಕವಾದ ವಾದವನ್ನು ಅನುಸರಿಸಿರುವ ಪ್ರತಿವಾದಿಗಳು ಉತ್ತರಕೊಡಲಿ.

ಶ್ರೀಮದ್ಭಾಗವತದ ಹತ್ತನೇ ಸ್ಕಂಧದಲ್ಲಿನ ಶ್ರೀವಿಷ್ಣುಮಾಹಾತ್ಮ್ಯ ಪ್ರತಿಪಾದಕವಾದ ಗ್ರಂಥಭಾಗಕ್ಕೆ ಸಂಬಂಧಿಸಿದ ವೇಣುಗೀತಾಮಾಹಾತ್ಮ್ಯೆಯನ್ನು ವರ್ಣಿಸುವಾಗ ಭೂಮಿಯಲ್ಲಿ ಅವತರಿಸಿದ ಶಿಶುರೂಪನಾದ ಶ್ರೀಕೃಷ್ಣಪರಮಾತ್ಮನ ಅಪರಿಮಿತನಾದ ಶ್ರೀಹರಿತತ್ವದ ಪರಿಮಿತಿಯನ್ನು ಮನಗಾಣದೆ ಬ್ರಹ್ಮ-ರುದ್ರೇಂದ್ರಾದಿ ದೇವತೆಗಳು ಪರಮಾತ್ಮನ ವೇಣುಗಾನ ಕೌಶಲ್ಯಕ್ಕೆ ಮಾರುಹೋಗಿ ಭಕ್ತಿಭಾವದಿಂದ ತಲೆಬಾಗಿ ಕೇಳಿ ಆಶ್ಚರ್ಯಚಕಿತರಾದರು ಮತ್ತು ಬ್ರಹ್ಮಾದಿ ದೇವತೆಗಳೂ ಕೂಡ ಶಿಶುರೂಪಿಯಾದ ಶ್ರೀಕೃಷ್ಣಪರಮಾತ್ಮನ ದಿವ್ಯಗಾನದ ಕೌಶಲ್ಯದ ಇತಿಮಿತಿಯನ್ನು ಮನಗಾಣದೆಹೋದರು. ಅಂದರೆ ಪರಮಾತ್ಮನ ಸಂಗೀತದ ಕೌಶಲ್ಯವನ್ನೆ ಬ್ರಹ್ಮಾದಿದೇವತೆಗಳು ತಿಳಿಯಲು ಅಶಕ್ತರಾಗಿರುವಾಗ ಆ ಸರ್ವೋತ್ತಮ ದೇವತೆಯ ಜಗತ್ತಿನ ಸೃಷ್ಟ್ಯಾದಿ ಕೌಶಲ್ಯವನ್ನಾಗಲಿ, ಅನಾದಿ ಕಾಲದ ಮೊದಲುಗೊಂಡು ಅಸಂಖ್ಯಾತರಾದ ರಾಕ್ಷಸರ ಶಿಕ್ಷಣವನ್ನಾಗಲಿ, ಸಮರ್ಥವಾದ ಅಸಾಧಾರಣವಾದ ಶ್ರೀಹರಿಯ ವೀರ್ಯಧೈರ್ಯ ಔದಾರ್ಯಾದಿ ಗುಣಗಳನ್ನಾಗಲಿ ಸಕಲವನ್ನೂ ಸಮಗ್ರವಾಗಿ ಅರಿಯಲು ಶಕ್ತರಲ್ಲವೆಂಬುದನ್ನು ಹೇಳತಕ್ಕದ್ದೇನಿದೆ? ಇಂತಹ ನಿರವಧಿಕೈಶ್ವರ್ಯಸಂಪನ್ನನಾದ ಜಗನ್ನಿಯಾಮಕನಾದ ಶ್ರೀಕೃಷ್ಣನಿಗೆ ಯಾರುತಾನೆ ಸಮರು ಅಥವಾ ಅಧಿಕರು? ಚತುರ್ಮುಖ ಬ್ರಹ್ಮ, ಶಿವ, ಶಕ್ತಿ, ಸ್ಕಂದ ಮೊದಲಾದ ದೇವತೆಗಳನ್ನು ಉತ್ತಮರೆಂದು ವಾದಿಸುವ ಪ್ರತಿವಾದಿಗಳೇ ಇದಕ್ಕೆ ಉತ್ತರವನ್ನು ಹೇಳಲಿ ಎಂದು ಶ್ರೀವಾದಿರಾಜರು ಪ್ರಶ್ನೆ ಮಾಡಿದ್ದಾರೆ.

ಈ ಸಂಗತಿಯನ್ನು ತಿಳಿಸುವ ಶ್ರೀಮದ್ಭಾಗವತದ ಹತ್ತನೆಯ ಸ್ಕಂಧದಲ್ಲಿನ ಶ್ರೀಕೃಷ್ಣಪರಮಾತ್ಮನ ವೇಣುಗೀತಾ ಮಾಹಾತ್ಮ್ಯವರ್ಣನನನ್ನು ಉದಾಹರಿಸಿ ಶ್ರೀವಾದಿರಾಜರು ಪರಮಾತ್ಮನ ಆಶ್ಚರ್ಯಕರವಾದ ಶಿಶುರೂಪಿಯಾದ ಶ್ರೀಹರಿಯ

ಸಂಗೀತದ ನಿರತಿಶಯವಾದ ಪಾಂಡಿತ್ಯದ ಪ್ರೌಢಿಮೆಯನ್ನು ವರ್ಣಿಸುತ್ತಾ ಬ್ರಹ್ಮಾದಿದೇವತೆಗಳಲ್ಲಿ ಯಾರೂ ಸಹ ಶ್ರೀಹರಿಗೆ ಸಮರಾಗಲಿ ಅಧಿಕರಾಗಲಿ ಇಲ್ಲನೆಂಬ ವಿಷಯವನ್ನು ಸಮರ್ಥಿಸಿದ್ದಾರೆ. ಆ ಗ್ರಂಥ ಭಾಗವು ಈ ಕೆಳಗೆ ಕಂಡಂತಿದೆ.

ಸುಮನಸಸ್ತದುಪಧಾರ್ಯ ಸುರೇಶಾಃ
ಶಕ್ರಶರ್ವಪರಮೇಷ್ಠಿಪುರೋಗಾಃ || ೧೮೩ ||

ಕವಯ ಆನತಕಂಧರಗಾತ್ರಾ
ವಿಸ್ಮಯಂ ಯಯುರನಿಶ್ಚಿತತತ್ವಾಃ ।

ಇತಿ ಭಾಗವತೇ ವೇಣುಗೀತಾ ಮಾಹಾತ್ಮ್ಯವರ್ಣನಮ್ || ೧೮೪ ||

ಕುರ್ವಾಣೇ ದಶಮಸ್ಕಂಧೇ ವಾಕ್ಯಮೇತದುದೀರಿತಮ್ ।
ಯೇಷಾಂ ಸರ್ವಾಸು ವಿದ್ಯಾಸು ಶೋಭನಂ ಚ ಮನೋऽಸ್ತಿ ಹಿ || ೧೮೫ ||

ಅತಃ ಸರ್ವಜ್ಞತಾ ಚಾಸ್ತಿ ತೇಷಾಂ ವಿಖ್ಯಾತಕರ್ಮಣಾಮ್ ।

ಇಂದ್ರ, ರುದ್ರ, ಬ್ರಹ್ಮ ಮೊದಲಾದ ದೇವತೆಗಳು ಶಿಶುರೂಪಿಯಾದ ಶ್ರೀಕೃಷ್ಣಪರಮಾತ್ಮನ ವೇಣುಗಾನವನ್ನು ಕೇಳಿ, ಆ ಗಾನಪಾಂಡಿತ್ಯದ ಪರಿಮಿತಿಯನ್ನು ತಿಳಿಯದೇ ನಮ್ರತೆಯಿಂದ ತಲೆಬಗ್ಗಿಸಿಕೊಂಡು ಭಕ್ತಿಪರವಶರಾಗಿ ಆಶ್ಚರ್ಯಪಟ್ಟರು ಎಂಬ ವಿಷಯವು ಶ್ರೀಮದ್ಭಾಗವತದಲ್ಲಿ ದಶಮಸ್ಕಂಧದಲ್ಲಿ ವೇಣುಗೀತಾಮಾಹಾತ್ಮ್ಯ ವರ್ಣನದಲ್ಲಿ ಉಕ್ತವಾಗಿದೆ.

ಇಂದ್ರಾದಿದೇವತೆಗಳಿಗೆ ಸಾಮಾನ್ಯವಾಗಿ ಎಲ್ಲಾ ವಿದ್ಯೆಗಳಲ್ಲೂ ಮನಸ್ಸಿನ ಸಂಚಾರವಿರುವುದರಿಂದ ತಾರತಮ್ಯಾನುಸಾರಿಯಾದ ಸರ್ವಜ್ಞತೆಯು ಇರುತ್ತದೆ. ಆ ಇಂದ್ರಾದಿದೇವತೆಗಳು ವಿಖ್ಯಾತಗಳಾದ ಕಾರ್ಯಗಳನ್ನುಳ್ಳವರಾಗಿರುತ್ತಾರೆ.

ಶರ್ವಶಕ್ರಬ್ರಹ್ಮಪೂರ್ವಗೀರ್ವಾಣಾಸ್ತೇ ಹರೇಃ ಶಿಶೋಃ || ೧೮೬ ||

ತದ್ವೇಣುಗೀತಕೌಶಲ್ಯಮವತೀರ್ಣಸ್ಯ ಭೂತಲೇ ।
ಶ್ರೋತುಂ ಕೌತೂಹಲಯುತಾಃ ಕಂಧರಂ ಗಾತ್ರಮೇವ ಚ || ೧೮೭ ||

ನಮ್ರೀಕೃತ್ಯ ಸ್ವಲೋಕಾದಪ್ಯಧೋಭಾಗೇ ಪ್ರದರ್ಶಿತಮ್ ।
ಶ್ರುತ್ವಾವಧಾರ್ಯ ಮನಸಾ ಸ್ವಾಜ್ಞಾತಾಂ ಪೂರ್ವತಾತತಾಮ್ ॥ ೧೮೮ ॥

ನಿಶ್ಚಿತ್ಯ ಹರಿತತ್ವಸ್ಯೇಯತ್ತಾ ನಾಸ್ತೀತಿ ಧೀಯುತಾಃ ।
ಮಹಾಂತಂ ವಿಸ್ಮಯಂ ಸರ್ವೇ ಯಯುರಿತ್ಯಾಹ ವಾಗಿಯಮ್ ॥ ೧೮೯ ॥

ಜಗತ್ತಿನಲ್ಲಿ ಪ್ರಸಿದ್ಧವಾದ ದೈತ್ಯಹನನ ಮೊದಲಾದ ಅದ್ಭುತ ಕೆಲಸಗಳನ್ನು ನಡೆಸಿರುವ ಇಂದ್ರ, ರುದ್ರ, ಚತುರ್ಮುಖ ಬ್ರಹ್ಮ ಮೊದಲಾದ ದೇವತೆಗಳು ಭೂಮಿಯಲ್ಲಿ ಅವತರಿಸಿದ ಶಿಶುರೂಪನಾದ ಶ್ರೀಕೃಷ್ಣಪರಮಾತ್ಮನು ಇಂದ್ರಾದಿ ಲೋಕಗಳಿಗೆ ಕೆಲಭಾಗದಲ್ಲಿರುವ ಈ ಭೂಭಾಗದಲ್ಲಿ ನುಡಿಸಿದ ವೇಣುಗಾನವನ್ನು ತಮ್ಮ ಲೋಕಗಳಲ್ಲಿಯೇ ಇದ್ದು ದೇಹವನ್ನು ಬಗ್ಗಿಸಿ ತಲೆಯನ್ನು ಬಗ್ಗಿಸಿಕೊಂಡು ಕೇಳುತ್ತಾ, ತಮಗೆ ಅದುವರೆವಿಗೆ ಎಂದೂ, ಎಲ್ಲೂ ಕೇಳದಿರುವ ಗಾನಶಾಸ್ತ್ರದ ವೈಖರಿಯನ್ನು ಕೇಳುತ್ತಾ ಆಶ್ಚರ್ಯದಿಂದ ಚಕಿತರಾದರು.

ಶ್ರೀಹರಿತತ್ವಕ್ಕೆ ಇತಿಮಿತಿಯೇ ಇಲ್ಲವೆಂದು ನಿಶ್ಚಯಿಸಿದವರಾಗಿ ಆಶ್ಚರ್ಯ ಪಟ್ಟರು.

ಯೇಽಸ್ಯ ಸಂಗೀತಕೌಶಲ್ಯಮಪಿ ನಾನ್ತಂ ವಿಜಾನತೇ ।
ತೇ ದೇವಾಃ ಸೃಷ್ಟಿಸಂಹಾರಸ್ಥಿತ್ಯಾದಿಷು ಚ ಕೌಶಲಮ್ ॥ ೧೯೦ ॥

ಅನಾದಿಕಾಲಮಾರಭ್ಯಾನಂತರಾಕ್ಷಸಶಿಕ್ಷಣೇ ।
ಸಮರ್ಥವೀರ್ಯಧೈರ್ಯಾದಿಕೌಶಲ್ಯಂ ಜಗದೀಶಿತುಃ ॥ ೧೯೧ ॥

ನ ಜಾನಂತೀತಿ ಕಿಂ ವಾಚ್ಯಮೀದೃಶೇನ ಮಹಾತ್ಮನಾ ।
ಕಃ ಸಮೋ ವಾ ಅಧಿಕೋ ವಾ ಸ್ಯಾದ್ವದಂತು ಪ್ರತಿವಾದಿನಃ ॥ ೧೯೨ ॥

ಯಾವ ಇಂದ್ರಾದಿದೇವತೆಗಳು ಕಡೇಪಕ್ಷ ಪರಮಾತ್ಮನ ಸಂಗೀತದ ಪಾಂಡಿತ್ಯದ ಪರಮಾವಧಿಯನ್ನೂ ಸಹ ತಿಳಿಯಲಾರರೋ, ಅಂತಹವರು ಶ್ರೀಹರಿಯ ಜಗತ್ತಿನ ಸೃಷ್ಟ್ಯಾದಿವ್ಯಾಪಾರದ ಚಮತ್ಕಾರವನ್ನಾಗಲಿ, ಅನಾದಿಕಾಲ ದಿಂದಲೂ ಪರಮಾತ್ಮನು ನಡೆಸುತ್ತಲಿರುವ ಅಸಂಖ್ಯಾಕರಾದ ರಾಕ್ಷಸರ ಸಂಹಾರ ಕ್ರಿಯೆಯನ್ನಾಗಲಿ, ಆ ಶ್ರೀಹರಿಯ ಧೈರ್ಯವೀರ್ಯ ಔದಾರ್ಯಾದಿಗಳ ಕೌಶಲ್ಯ

ವನ್ನು ಹೇಗೆ ತಾನೇ ತಿಳಿಯಲು ಶಕ್ತರಾದಾರು. ಇಂತಹ ಮಹಾಮಾಹಾತ್ಮ್ಯ ವನ್ನುಳ್ಳ ಶ್ರೀಹರಿಗೆ ಯಾರು ತಾನೇ ಸಮರು ಅಥವಾ ಅಧಿಕರು, ಪ್ರತಿವಾದಿಗಳು ಹೇಳಲಿ.

**ಯದ್ವೇಣುನಾ ಶರ್ವಶಕ್ರಪರಮೇಷ್ಠಿಪುರೋಗಮಾಃ ।**
**ಕಮಯೋऽಪ್ಯಾನತಾ ಜಾತಾಃ ಇತ್ಯಾಹ ಭಗವಾನ್ ಶುಕಃ ॥ ೧೯೩ ॥**

ಯಾವ ಪರಮಾತ್ಮನ ವೇಣುವಿನಿಂದ ರುದ್ರ, ಇಂದ್ರ, ಚತುರ್ಮುಖ ಬ್ರಹ್ಮ ಮೊದಲಾದ ದೇವತೆಗಳೂ ಹಾಗೂ ಜ್ಞಾನಿಗಳೂ ತಲೆಬಾಗಿದರೆಂದು ಪೂಜ್ಯರಾದ ಶುಕಾಚಾರ್ಯರು ಪರೀಕ್ಷಿತ್ ರಾಜನಿಗೆ ಹೇಳಿದ್ದಾರೆ

**ಏವಂ ಚ ಸೃಷ್ಟ್ಯತಾ ದೂರೇ ಶಿಷ್ಯತ್ವಸ್ಮದ್ರಮಾಪತೇಃ ।**
**ಗಾನೇऽಪಿ ಕಃ ಸಮೋऽಸ್ಯ ಸ್ಯಾದ್ವದಂತು ಪ್ರತಿವಾದಿನಃ ॥ ೧೯೪ ॥**

ಒಟ್ಟಿನಲ್ಲಿ ಸರ್ವರೀತಿಯಿಂದ ಪರಿಶೀಲಿಸಿದರೂ ಸಹ ನಮ್ಮ ರಮಾಪತಿ ಗಿಂತಲೂ ಬೇರೆಯಾದವರಲ್ಲಿ ಜಗತ್ತಿನ ಸೃಷ್ಟಿ ಮಾಡುವಿಕೆಯು ಅಸಂಭವವೇ ಸರಿ. ಅದು ಹಾಗಿರಲಿ. ಗಾನ ವಿಷಯದಲ್ಲೂ ಸಹ ನಮ್ಮ ಸರ್ವೋತ್ತಮನಾದ ಶ್ರೀಕೃಷ್ಣಪರಮಾತ್ಮನಿಗೆ ಯಾರು ತಾನೆ ಸಮರು ? ಪ್ರತಿವಾದಿಗಳು ಹೇಳಲಿ.

**ಚತುರ್ಮುಖಃ ಪಂಚಮುಖಃ ಷಣ್ಮುಖೋ ದ್ವಿಮುಖೋऽಪಿ ವಾ ।**
**ಸಹಸ್ರವದನೋ ವಾ ಸ್ಯಾದನೇಕೈರ್ವದನೈರಪಿ ॥ ೧೯೫ ॥**

**ಶಿಶೋಃ ಕೃಷ್ಣಸ್ಯೈಕವಕ್ತ್ರಚಿತ್ರಗಾನರಸೋಪಮಮ್ ।**
**ಕಃ ಸಂಗೀತರಸಂ ಕುರ್ಯಾತ್ ವದಂತು ಪ್ರತಿವಾದಿನಃ ॥ ೧೯೬ ॥**

ದೇವತಾವೃಂದದಲ್ಲಿ ಪ್ರಸಿದ್ಧರಾದ ನಾಲ್ಕು ಮುಖವುಳ್ಳ ಬ್ರಹ್ಮನಾಗಲಿ, ಪಂಚಮುಖನೇ ಆಗಲಿ, ಷಣ್ಮುಖನೇ ಆಗಲಿ, ಎರಡು ಮುಖದವನೇ ಆಗಲಿ ಅಥವಾ ಸಹಸ್ರಮುಖವನ್ನುಳ್ಳ ಆದಿಶೇಷನೇ ಆಗಲಿ ತಮ್ಮ ಅನೇಕ ಮುಖಗಳಿಂದ ನಮ್ಮ ಪುಟ್ಟ ಮಗುವಾದ ಶ್ರೀಕೃಷ್ಣನ ಚಿಕ್ಕ ಬಾಯಿಯಿಂದ ಹೊಮ್ಮುವ ವಿಚಿತ್ರವಾದ ಗಾನರಸ ಸ್ವಾರಸ್ಯಕ್ಕೆ ಸಮನಾದ ಆನಂದಕರವಾದ ಸಂಗೀತವನ್ನು ಹಾಡಬಲ್ಲರೇನು? ಪ್ರತಿವಾದಿಗಳು ಹೇಳಲಿ.

**ಶಾಪಪ್ರಸಾದಯೋರೀಶಾಃ ಬ್ರಹ್ಮವಿಷ್ಣುಶಿವಾದಯಃ ।**
**ಸದ್ಯಶ್ಶಾಪಪ್ರಸಾದೋಽಂಗ ಶಿವೋ ಬ್ರಹ್ಮಾ ಚ ನಾಚ್ಯುತಃ ॥ ೧೯೭ ॥**

ವಿಷ್ಣು, ಬ್ರಹ್ಮ, ಶಿವಾದಿದೇವತೆಗಳು, ಶಾಪವನ್ನು ಕೊಡಲು ಸಮರ್ಥರು, ಅನುಗ್ರಹವನ್ನು ಮಾಡಲೂ ಸಹ ಶಕ್ತರು. ಆದರೆ ಬ್ರಹ್ಮರುದ್ರಾದಿಗಳ ಶಾಪವಾಗಲಿ ಪ್ರಸಾದವಾಗಲಿ ಅದು ತಾತ್ಕಾಲಿಕವಾದುದು. ಅಚ್ಯುತನದು ಹಾಗಲ್ಲ. ಶ್ರೀಹರಿಯ ಶಾಪವಾಗಲಿ, ಪ್ರಸಾದವಾಗಲಿ ಅದು ಶಾಶ್ವತವಾದುದು. ಅದಕ್ಕೆ ಎಂದಿಗೂ ಚ್ಯುತಿಯು ಇರುವುದಿಲ್ಲ.

**ಇತಿ ಭಾಗವತೋಕ್ತ್ಯಾ ಚ ವರಂ ದತ್ವೈವಮಾರಕೌ ।**
**ಕಥಂ ಬ್ರಹ್ಮಶಿವೌ ಭಕ್ತಪಾಲನೈಕಧುರಂಧರಾತ್ ॥ ೧೯೮ ॥**

**ವಿಭೀಷಣಧ್ರುವಾದೀನಾಂ ಆಕಲ್ಪಾಂತಪದಪ್ರದಾತ್ ।**
**ಹರೇರೂನಚರಿತ್ರೌ ನ ವದಂತು ಪ್ರತಿವಾದಿನಃ ॥ ೧೯೯ ॥**

ಶಾಪಪ್ರಸಾದಯೋರೀಶಾಃ ಎಂಬ ಶ್ಲೋಕವು ಶ್ರೀಮದ್ಭಾಗವತದ ಹತ್ತನೇ ಸ್ಕಂಧದ ಉತ್ತರಾರ್ಧದ ಎಂಭತ್ತೆಂಟನೇ ಅಧ್ಯಾಯದಲ್ಲಿ ಪರೀಕ್ಷಿತ್ ರಾಜನಿಗೆ ಶುಕಾಚಾರ್ಯರ ಉಪದೇಶರೂಪವಾದ ಹನ್ನೆರಡನೇ ಶ್ಲೋಕವಾಗಿದೆ. ಇದಕ್ಕೆ ಉದಾಹರಣೆಯಾಗಿ ವೃಕಾಸುರನ ಕಥೆಯು ನಿರೂಪಿತವಾಗಿದೆ.

ಸರ್ವೋತ್ತಮನಾದ ಶ್ರೀಹರಿಯು "ನ ಮೇ ಭಕ್ತಃ ಪ್ರಣಶ್ಯತಿ" ಎಂದು ಅಭಯವನ್ನಿತ್ತಿದ್ದಾನೆ. ಭಕ್ತರನ್ನು ರಕ್ಷಿಸುವ ದೀಕ್ಷಾಬದ್ಧನಾಗಿದ್ದಾನೆ. ಅದರಂತೆ ವಿಭೀಷಣ, ಧ್ರುವ ಮೊದಲಾದ ಭಕ್ತರಿಗೆ ಶಾಶ್ವತವಾದ ಪದವಿಗಳನ್ನು ಅನುಗ್ರಹಿಸಿದ್ದಾನೆ. ಬ್ರಹ್ಮನಾಗಲಿ, ರುದ್ರನಾಗಲಿ ತಾವು ತಮ್ಮನ್ನು ಕುರಿತು ತಪಸ್ಸನ್ನಾಚರಿಸಿದ ದೈತ್ಯದಾನವರಿಗೆ ವರಗಳನ್ನಿತ್ತಿದ್ದಾರೆ. ಆದರೆ ಆ ವರರೂಪವಾದ ಅನುಗ್ರಹಗಳು ಕೆಲವು ಕಾಲದವರೆವಿಗೆ ಮಾತ್ರ ಅವರುಗಳಿಗೆ ತಾರಕವಾಗಿವೆ. ಕೆಲವು ಕಾಲದಮೇಲೆ ಅದೇ ಅವರುಗಳಿಗೆ ಮಾರಕಗಳಾಗಿ ಕಂಡಿವೆ. ಹೀಗಿರುವಲ್ಲಿ ಬ್ರಹ್ಮಾದಿಗಳು ಶ್ರೀಹರಿಗಿಂತಲೂ ಕಮ್ಮಿಯಾದ ಚರಿತ್ರೆಯುಳ್ಳವರಲ್ಲವೇನು? ಪ್ರತಿವಾದಿಗಳು ಹೇಳಲಿ.

**ದೇವಾಸುರಮನುಷ್ಯೇಷು ಯೇ ಭಜಂತ್ಯಶಿವಂ ಶಿವಮ್ ।**
**ಪ್ರಾಯಸ್ತೇ ಧನಿನೋ ಬ್ರಹ್ಮನ್ ನ ತು ಲಕ್ಷ್ಮೀಪತಿಂ ಹರಿಮ್ ॥ ೨೦೦ ॥**

**ಏತದ್ವೇದಿತುಮಿಚ್ಛಾಮಿ ಸಂದೇಹೋऽತ್ರಮಹಾನ್ ಹಿ ನಃ ।**
**ವಿರುದ್ಧಶೀಲಯೋಃ ಪ್ರಭ್ವೋಃ ವಿರುದ್ಧಾಭಜತಾಂಗತಿಃ ॥ ೨೦೧ ॥**

ಈ ಶ್ಲೋಕವು ಶ್ರೀಮದ್ಭಾಗವತದ ದಶಮಸ್ಕಂಧದ ಉತ್ತರಾರ್ಧದ ಎಂಭತ್ತೆಂಟನೆಯ ಅಧ್ಯಾಯದಲ್ಲಿ ಪರೀಕ್ಷಿತ್ ರಾಜನು ಶುಕಾಚಾರ್ಯರನ್ನು ಕುರಿತು ಪ್ರಶ್ನೆ ಮಾಡುವ ಸಂದರ್ಭದಲ್ಲಿ ಮೊದಲನೆಯ ಶ್ಲೋಕವಾಗಿದೆ.

ಎಲೈ ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರೇ ! ದೇವತೆಗಳಾಗಲಿ, ದೈತ್ಯರಾಗಲಿ, ಮಾನವರಾಗಲಿ ಈ ಗುಂಪುಗಳಲ್ಲಿ ಯಾರು ಶ್ಮಶಾನವಾಸಿಯಾಗಿ ರುಂಡಮುಂಡ ಮಾಲಾಧಾರಿಯಾಗಿ ದಕ್ಷನ ಶಾಪಕ್ಕೆ ಗುರಿಯಾದ ಶಿವನನ್ನು ಭಜಿಸುತ್ತಾರೆಯೋ ಪ್ರಾಯಃ ಅವರು ನಶ್ವರವಾದ ಧನವುಳ್ಳವರಾಗಿ ಕಂಡುಬರುತ್ತಾರೆ. ಆದರೆ ಶ್ರೀ ಲಕ್ಷ್ಮೀಪತಿಯನ್ನು ಭಜಿಸುವವರು ಆ ರೀತಿ ಇಲ್ಲ. ಇದಕ್ಕೆ ಕಾರಣವೇನು ? ಅದನ್ನು ತಿಳಿಯಲು ಅಪೇಕ್ಷಿಸುತ್ತೇನೆ. ಈ ವಿಷಯದಲ್ಲಿ ನನಗೆ ಬಹಳ ಸಂದೇಹವಿದೆ. ವಿರುದ್ಧವಾದ ಸ್ವಭಾವದಿಂದ ಕೂಡಿದ ಪ್ರಭುಗಳನ್ನು ಸೇವಿಸುವವರಿಗೆ ವಿರುದ್ಧವಾದ ಫಲವೇ ಕಂಡುಬಂದಿದೆ.

**ಇತಿ ಭಾಗವತೇ ರಾಜ್ಞಾ ಪೃಷ್ಟೋ ವಕ್ತಿ ಶುಕಃ ಕಿಲ ।**

ಮೇಲೆಕಂಡ ಪ್ರಕಾರವಾಗಿ ಪರೀಕ್ಷಿತ್ ರಾಜರು ಶುಕಾಚಾರ್ಯರನ್ನು ಪ್ರಶ್ನಮಾಡಿದಾಗ ಶುಕಾಚಾರ್ಯರು ಉತ್ತರವನ್ನು ಹೇಳುತ್ತಾರೆ.

**ಹರಿಂ ಗುಣತ್ರಯಾತೀತಂ ಸರ್ವಜ್ಞಂ ಸರ್ವಸಾಕ್ಷಿಣಮ್ ॥ ೨೦೨ ॥**

**ನೈರ್ಗುಣ್ಯಾಖ್ಯವಿಮುಕ್ತೇಶ್ಚ ದಾತಾರಂ ಭಜತಾಂ ಸತಾಮ್ ।**
**ಹರಂ ತು ತ್ರಿಗುಣೈರ್ಬದ್ಧಂ ಭಜತಾಮಪಿ ಬಂಧಕಮ್ ॥ ೨೦೩ ॥**

ಶ್ರೀಹರಿಯಾದರೋ ಸತ್ವಗುಣ, ರಜೋಗುಣ ಮತ್ತು ತಮೋಗುಣಗಳೆಂಬ ಪ್ರಾಕೃತಗಳಾದ ಬಂಧಕಗಳಾದ ಗುಣಗಳಿಗೆ ದೂರನಾದವನು. ಗುಣತ್ರಯ-ಬದ್ಧನಲ್ಲ, ಮತ್ತು ನಿರುಪಚರಿತಸರ್ವಜ್ಞ. ಸರ್ವಾಂತರ್ಯಾಮಿಯಾಗಿದ್ದಾನೆ.

ಸರ್ವಕ್ಕೂ ಸಾಕ್ಷಿಯಾಗಿದ್ದಾನೆ. ಶಿವನಾದರೋ ಸತ್ವ, ರಜಸ್ಸು, ತಮಸ್ಸು ಗಳೆಂಬ ಪ್ರಾಕೃತಗಳಾದ ಗುಣತ್ರಯಗಳಿಂದ ಬದ್ಧನಾಗಿರುವ ಕಾರಣ ತನ್ನನ್ನು ಭಜಿಸುವವರಿಗೂ ಬಂಧಕನಾಗಿರುತ್ತಾನೆ. ಶ್ರೀಹರಿಯಾದರೋ ತಾನು ಗುಣತ್ರಯಾ ತೀತನಾಗಿರುವುದರಿಂದ ತನ್ನನ್ನು ಸೇವಿಸುವವರಾದ ಸಜ್ಜನರಿಗೆ ಪ್ರಾಕೃತಗಳಾದ ಬಂಧಕಗಳಾದ ಗುಣತ್ರಯಗಳ ಸಂಬಂಧವಿಲ್ಲದ ಮೋಕ್ಷಸುಖವನ್ನೇ ಕೊಡುತ್ತಾನೆ.

**ಯತೋಽಭೂತ್ ಬಂಧಕೋ ರುದ್ರಃ ಸುರಾಣಾಮಗ್ರಣೀರಪಿ ।**
**ಹರಿಸ್ತು ಬಂಧವಿಧುರೋ ಬದ್ಧಾನಾಂ ಮೋಚಕೋಽಪ್ಯಭೂತ್ ॥ ೨೦೪ ॥**
**ತತೋಽಪಿ ಕಃ ಸಮೋ ವಿಷ್ಣೋಃ ವದಂತು ಪ್ರತಿವಾದಿನಃ ।**

ದೇವತೆಗಳಲ್ಲಿ ಮುಖಂಡನಾಗಿದ್ದಾಗ್ಯೂ ಸಹ ಶಿವನು ಬಂಧಕನೇ ಆಗಿರು ತ್ತಾನೆ. ಶ್ರೀಹರಿಯಾದರೋ ಸ್ವಯಂಬಂಧದಿಂದ ರಹಿತನಾಗಿರುವ ಕಾರಣ ತನ್ನ ಭಕ್ತರನ್ನು ಬಂಧನದಿಂದ ಬಿಡುಗಡೆ ಮಾಡಿ ಶಾಶ್ವತ ಸುಖರೂಪವಾದ ಮೋಕ್ಷವನ್ನೇ ಕರುಣಿಸುತ್ತಾನೆ. ಈ ಒಂದು ಅಸಾಧಾರಣವಾದ ಕಾರಣದಿಂದಲೂ ಸಹ ನಮ್ಮ ಶ್ರೀಹರಿಗೆ ಯಾರುತಾನೆ ಸಮರು? ಪ್ರತಿವಾದಿಗಳು ಹೇಳಲಿ.

**ಶಿವಃ ಶಕ್ತಿಯುತಃ ಶಶ್ವತ್ ತ್ರಿಲಿಂಗೋ ಗುಣಸಂವೃತಃ ॥ ೨೦೫ ॥**
**ವೈಕಾರಿಕಃ ತೈಜಸಶ್ಚ ತಾಮಸಶ್ಚೇತ್ಯಹಂ ತ್ರಿಧಾ ।**
**ತತೋ ವಿಕಾರಾ ಹ್ಯಭವನ್ ಷೋಡಶಾಮೀಷು (ವರ್ತ್ಮಸು) ಪಂಚಸು ೨೦೬**
**ಉಪಾಧಾವನ್ವಿಭೂತೀನಾಂ ಸರ್ವಾಸಾಮಶ್ನುತೇ ಗತಿಮ್ ।**

ಶಿವನು ಶಕ್ತಿ ಸಹಿತನಾಗಿದ್ದಾನೆ. ಯಾವಾಗಲೂ ತ್ರಿಲಿಂಗನಾಗಿದ್ದಾನೆ. ಸದಾ ಸತ್ವಾದಿಪ್ರಾಕೃತಗುಣಗಳಿಂದ ಆವರಿಸಲ್ಪಟ್ಟಿದ್ದಾನೆ. ಪ್ರಾಕೃತವಾದ ಅಹಂಕಾರ ತತ್ವಕ್ಕೆ ಅಭಿಮಾನಿಯಾಗಿದ್ದಾನೆ. ಪ್ರಾಕೃತವಾದ ಅಹಂತತ್ವವು ವೈಕಾರಿಕ, ತೈಜಸ, ತಾಮಸ ಎಂಬುದಾಗಿ ಮೂರು ವಿಧವಾಗಿದೆ.

ಅದರಿಂದಲೇ ಐದು ಬಗೆಗಳಾದ ಪಂಚತನ್ಮಾತ್ರೆಗಳೂ, ಹದಿನಾರು ಕಲೆಗಳೂ ಅವುಗಳ ವಿಕಾರಗಳಾದ ಪಂಚಮಹಾಭೂತಗಳೂ ಉಂಟಾಗಿವೆ. ಶಿವನನ್ನು ಆರಾಧಿಸುವವರಿಗೆ ಗುಣಗಳ ವಿಕಾರಾತ್ಮಕಗಳಾದ ಪ್ರಾಕೃತ ಪದಾರ್ಥಗಳ ಪ್ರಾಪ್ತಿಯೇ ಗತಿಯು.

**ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ || ೨೦೭ ||**

**ಸ ಸರ್ವದೃಕ್ ಉಪದ್ರಷ್ಟಾ ತಂ ಭಜನ್ ನಿರ್ಗುಣೋ ಭವೇತ್ ।**

ಶ್ರೀ ಹರಿಯಾದರೋ ಪ್ರಾಕೃತಗುಣರಹಿತನಾಗಿದ್ದಾನೆ. ಸಾಕ್ಷಾತ್ ಪುರುಷ ಶಬ್ದವಾಚ್ಯನು. ಪೂರ್ಣಾಗಣ್ಯ ಗುಣೋದಾರನು. ಪೂರ್ಣ ಷಡ್ಗುಣ. ಜಡಪ್ರಕೃತಿ ಮತ್ತು ಚೇತನ ಪ್ರಕೃತಿಗಳಿಗಿಂತಲೂ ವಿಲಕ್ಷಣನು. ಸರ್ವೋತ್ತಮನು. ಸರ್ವತ್ರ ದೃಷ್ಟಿಯುಳ್ಳವನು. ಎಲ್ಲ ಪದಾರ್ಥಗಳ ಒಳಗೂ ಹೊರಗೂ ಇದ್ದು ಸಾಕ್ಷಾತ್ತಾಗಿ ಎಲ್ಲವನ್ನೂ ನೋಡುತ್ತಿರುವವನು. ಎಲ್ಲಕ್ಕೂ ನಿಯಾಮಕನು. ಇಂತಹ ಪ್ರಾಕೃತಗುಣರಹಿತನಾದ ಶ್ರೀಹರಿಯನ್ನು ಸೇವಿಸುವ ಭಕ್ತನೂ ಸಹ ಪ್ರಕೃತಿಬಂಧನದಿಂದ ಆ ಶ್ರೀಹರಿಯ ಕೃಪೆಯಿಂದ ಬಿಡುಗಡೆ ಪಡೆಯುತ್ತಾನೆ.

**ಯಾ ಶಕ್ನೋತ್ಯಖಿಲಾನ್ ಬದ್ಧುಂ ಪ್ರಕೃತಿರ್ಜಡರೂಪಿಣೀ || ೨೦೮ ||**

**ಸಾ ಶಕ್ತಿರ್ಬಂಧಿಕಾ ಶಶ್ವತ್ ತಯಾ ಬದ್ಧಃ ಶಿವಃ ಕಿಲ ।**

ಮೂಲ ಜಡಪ್ರಕೃತಿಯು ಎಲ್ಲವನ್ನೂ ಬಂಧಿಸುವ ಶಕ್ತಿಯುಳ್ಳದ್ದಾಗಿದೆ. ಪರಮಾತ್ಮನಿಂದ ಅನುಪ್ರವಿಷ್ಟವಾಗಿ ವಿಶೇಷ ಶಕ್ತಿಯುಳ್ಳದ್ದಾಗಿ ಎಲ್ಲರನ್ನೂ ಬಂಧಿಸುತ್ತದೆ. ಅಂತಹ ಬಂಧಕ ಶಕ್ತಿಯುಳ್ಳ ಪ್ರಕೃತಿಯಿಂದ ಪ್ರಾಕೃತ ಅಹಂಕಾರ ತತ್ವವೆಂಬ ಶರೀರ ಉಳ್ಳವನಾದ ಶಿವನೂ ಸಹ ಅಂತಹ ಪ್ರಕೃತಿಯಿಂದ ಬದ್ಧನೇ ಆಗಿದ್ದಾನಲ್ಲವೇ.

**ಅತ ಏವ ರಜಸ್ಸತ್ವತಮೋಭಿಶ್ಚಿತ್ತದೂಷಕೈಃ || ೨೦೯ ||**

**ಗುಣೈರಾಚ್ಛನ್ನಸಜ್ಞಾನಸ್ವರೂಪತ್ವಾತ್ ಶಿವಂ ಬುಧಾಃ ।**
**ಗುಣಸಂವೃತ ಇತ್ಯಾಹುಸ್ತಾಮಸಾದಿಪ್ರಭೇದತಃ || ೨೧೦ ||**

ಚಿತ್ತವನ್ನು (ಮನಸ್ಸನ್ನು) ಕಲುಷಿತಗೊಳಿಸುವ ಸತ್ವ, ರಜಸ್ಸು, ತಮಸ್ಸು ಗಳೆಂಬ ಗುಣಗಳಿಂದ ಆವೃತವಾದ (ಮುಚ್ಚಲ್ಪಟ್ಟ) ಸ್ವರೂಪವನ್ನು ಉಳ್ಳವನಾದುದ ರಿಂದಲೇ ಜ್ಞಾನಿಗಳು ಶಿವನನ್ನು ಗುಣಸಂವೃತ, ಗುಣಬದ್ಧ ಎಂದು ಕರೆಯುತ್ತಾರೆ.

**ತ್ರಿರೂಪಾಹಂಕಾರತತ್ವಂ ಕಾಮಲೋಭಮದಪ್ರದಮ್ ।**
**ಯಸ್ಯಾಸಾಧಾರಣೋ ಧರ್ಮಃ ತ್ರಿಲಿಂಗಃ ಸ ಶಿವಃ ಕಿಲ || ೨೧೧ ||**

ಸತ್ವಂ, ರಜಃ, ತಮಃ ಎಂಬುದಾಗಿ ಮೂರು ಬಗೆಯಾಗಿರತಕ್ಕ ಅಹಂಕಾರ ತತ್ವವು, ಕಾಮ, ಲೋಭ, ಮದಗಳನ್ನು ಉಂಟುಮಾಡುತ್ತದೆ. ಇವು ಯಾವ ರುದ್ರದೇವನಿಗೆ ಅಸಾಧಾರಣ ಧರ್ಮಗಳಾಗಿವೆಯೋ ಅಂತಹ ಶಿವನು ತ್ರಿಲಿಂಗ ನಾಗಿರುವನಷ್ಟೆ (ಅಥವಾ ತ್ರಿಲಿಂಗನೆಂದು ಕರೆಯಲ್ಪಡತಕ್ಕವನಾಗಿರುತ್ತಾನಷ್ಟೆ).

**ಯಃ ಕ್ರೋಧಾದಚ್ಛಿನತ್ ದಕ್ಷಶಿರಃ ಅಲಾಭಾತ್ ರುರೋದ ಚ ।**
**ಮದಾಂಧತ್ವಾತ್ ಸ್ವಹಸ್ತಸ್ಥಧನುಷಾ ಛಿನ್ನಮಸ್ತಕಃ ॥ ೨೧೨ ॥**

**ಈದೃಶಸ್ಯ ಶಿವಸ್ಯ ಅಹಂತತ್ವವತ್ತಃ ಉಚಿತೈವ ಹಿ ।**

ಯಾವ ಶಿವನು ಕೋಪಾವೇಶದಿಂದ ತನ್ನ ಹೆಂಡತಿಯಾದ ಸತೀದೇವಿಗೆ ತಂದೆಯಾದ ದಕ್ಷ ಪ್ರಜಾಪತಿಯ ತಲೆಯನ್ನೇ ಕತ್ತರಿಸಿ ತುಂಡರಿಸಿದನೋ, ತನ್ನಿಂದ ಹುಟ್ಟಿದ ಸನಕಾದಿಗಳು ತನ್ನ ಆಜ್ಞೆಯಂತೆ ಸೃಷ್ಟಿವ್ಯಾಪಾರಕ್ಕೆ ವಿಮುಖರಾದುದರಿಂದ ಕೋಪಗೊಂಡ ಕಾಲದಲ್ಲಿ ಅಂದರೆ ಸದ್ಯದಲ್ಲಿಯೇ ಬ್ರಹ್ಮನ ಹುಬ್ಬಿನಿಂದ ರುದ್ರನು ಜನಿಸಿದವನಾಗಿ ಜನಿಸಿದ ತನಗೆ ಹುಟ್ಟಿದ ಮಗುವಿಗೆ ಹಾಲಿನ ಅಗತ್ಯವಿರುವುದರಿಂದ ಅಂತಹ ಹಾಲಿಲ್ಲವಾದುದರಿಂದ, ತನಗೊಂದು ಹೆಸರು, ಸ್ಥಾನವು ಇಲ್ಲವಾದುದರಿಂದ ಎಳೇ ಮಗುವಿನಂತೆ ಅತ್ತುಬಿಟ್ಟನೋ, ಮದಾಂಧನಾಗಿದ್ದುದರಿಂದ ಎದೆ ಏರಿಸಿ ಬಾಣದಿಂದ ಸಜ್ಜುಗೊಳಿಸಿದ್ದ ಧನುಸ್ಸನ್ನು ಊರಿಕೊಂಡು ತಲೆಯನ್ನು ಅದರ ಮೇಲೆ ಊರಿಸಿಕೊಂಡು ಕುಳಿತಿದ್ದಾಗ ಕೀಟರೂಪವಾಗಿ ಇಂದ್ರನು ಬಂದು ಆ ಧನುಸ್ಸಿನ ರಜ್ಜುವನ್ನು ಕತ್ತರಿಸಿಬಿಟ್ಟಾಗ ಕತ್ತರಿಸಲ್ಪಟ್ಟ ತಲೆಯುಳ್ಳವನಾದನೋ, ಇಂತಹ ರುದ್ರನಿಗೆ ಅಹಂಕಾರ ತತ್ವಾಭಿಮಾನಿತ್ವವು ಉಚಿತವೇ ಆಗಿದೆಯಷ್ಟೆ.

ಆ ಅಹಂಕಾರ ತತ್ವದ ವಿಕಾರವಾಗಿರುವುದರಿಂದ ವಿಶ್ವ ಪದಾರ್ಥಗಳೂ ವಿಕಾರಗಳೆನಿಸಿರುತ್ತವೆ.

ಇದರ ವಿಕಾರವಾಗಿಯೇ ಹನ್ನೊಂದು ಇಂದ್ರಿಯಗಳೂ ಅಂದರೆ ಪಂಚ ಜ್ಞಾನೇಂದ್ರಿಯಗಳು, ಪಂಚಕರ್ಮೇಂದ್ರಿಯಗಳು, ಮನಸ್ಸು, ಪಂಚತನ್ಮಾತ್ರೆಗಳು (ಶಬ್ದ, ಸ್ಪರ್ಶ, ರೂಪ, ರಸ, ಗಂಧ) ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳು—ಇವೆಲ್ಲವೂ ಅನೇಕ ಬಗೆಯಾದ ವಿಕಾರ ಗಳೆನಿಸಿದೆ. ಇವೆಲ್ಲವೂ ದುಷ್ಟಸಂಸ್ಕಾರಸಂಪನ್ನವಾದ ಆಕಾರವುಳ್ಳವಗಳಾಗಿವೆ.

ಚೆನ್ನಾಗಿ ಪರಿಶೀಲಿಸಲಾಗಿ, ಇಡೀ ಜಗತ್ತಿನ ಪದಾರ್ಥಗಳೆಲ್ಲವೂ ನಾನಾ ಬಗೆಯಾದ ಭೌತಿಕಗಳಾದ ಸಂಪತ್ತುಗಳೂ ನಶ್ವರವಾದ ಪ್ರಾಕೃತ ಪದಾರ್ಥಗಳೆನಿಸಿದ ಇವೆಲ್ಲವೂ ಶಂಭುವಿಗೆ ಹಾನಿಕರವಲ್ಲವೇನು ? ಪ್ರತಿವಾದಿಗಳೇ ಹೇಳಲಿ.

ತತೋ ವಿಕಾರಹೇತುತ್ವಾತ್ ವಿಕಾರಾ ಇತಿ ಕೀರ್ತಿತಾಃ || ೨೧೩ ||

ಏಕಾದಶೇಂದ್ರಿಯಗಣಭೂತಪಂಚಕರೂಪಿಣಃ ।
ನಾನಾಸಂಪತ್ಕರಾಕಾರಾಃ ಪದಾರ್ಥಾಃ ಕಿಲ ಷೋಡಶ || ೨೧೪ ||

ಅಭೂವನ್ ಯಃ ಶಿವಂ ದೇವಂ ಉಪಾಥಾವನ್ ಸ ಪೂರುಷಃ ।
ಅಮೀ ಚ ದುಷ್ಟಸಂಸಾರವರ್ತ್ಮಸೂತ್ಸನ್ನಮೂರ್ತಯಃ || ೨೧೫ ||

ನಾನಾವಿಭೂತಯೋ ಜ್ಞೇಯಾಃ ತಾಸಾಂ ಗತಿಮವಾಪ್ನುಯಾತ್ ।
ಪದಾನಾಂ ಸಂಪದ್ಯೈವೇತ್ಥಂ ಅರ್ಥೋsಭೂದ್ಧಿ ವಿಚಾರಣೇ || ೨೧೬ ||
ಕಿಂ ನೇದಂ ಹಾನಿದಂ ಶಂಭೋಃ ವದಂತು ಪ್ರತಿವಾದಿನಃ ।

ಮೇಲೆಕಂಡ ಪದ್ಯಗಳ ಅಭಿಪ್ರಾಯವನ್ನು ಹಿಂದೆಯೇ ವಿವರಿಸಲಾಗಿದೆ.

ಅಹಂಕಾರಾಭಿಧೇ ತತ್ವೇ ತಾಮಸಾದಿಸ್ವರೂಪಿಣಿ || ೨೧೭ ||

ಸದಾsಭಿಮಾನವಾಂಸ್ತೇನ ತಾಮಸಶ್ಚ ಕ್ವಚಿತ್ ಕ್ವಚಿತ್ ।
ಕ್ವಚಿಚ್ಚ ರಾಜಸಃ ಕ್ವಾಪಿ ನಾನಾರೂಪವಿಕಾರವಾನ್ || ೨೧೮ ||

ಅತಃ ಸ್ವಾಶ್ರಿತವರ್ಗಂ ಚ ಕುರುತೇ ಸ್ವಾತ್ಮವತ್ಕಿಲ ।

ಅಹಂಕಾರವೆಂಬ ಹೆಸರಿನ ತತ್ವವು ಸಾತ್ವಿಕಾಹಂಕಾರ, ರಾಜಸಾಹಂಕಾರ, ತಾಮಸಾಹಂಕಾರವೆಂಬ ಹೆಸರನ್ನುಳ್ಳದುದಾಗಿದೆ. ಅದಕ್ಕೆ ಸರ್ವದಾ ಅಭಿಮಾನಿಯಾದ ರುದ್ರದೇವರು ಕೆಲವು ಸಂದರ್ಭಗಳಲ್ಲಿ ತಾಮಸಕಾರ್ಯವನ್ನೂ, ಕೆಲವು ವೇಳೆ ರಾಜಸ ಕಾರ್ಯವನ್ನೂ, ಕೆಲವು ಸಂದರ್ಭದಲ್ಲಿ ಕೇವಲ ಸಾತ್ವಿಕ ವ್ಯಾಪಾರವನ್ನೂ ಆಚರಿಸುವವನಾಗಿರುತ್ತಾನೆ.

ಅಂತಹ ಗುಣಬದ್ಧನಾದ ಈಶ್ವರನು (ಶಿವನು) ತನ್ನನ್ನು ಆಶ್ರಯಿಸಿದ ಜನರನ್ನೂ ಕೂಡ ತನ್ನಂತೆಯೇ ಆಯಾ ವಿಧವಾದ ಕಾರ್ಯವುಳ್ಳವರನ್ನಾಗಿ ಮಾಡುವುದು ಸ್ವಾಭಾವಿಕವೇ ಆಗಿದೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಪ್ರಾಯಸ್ತೇ ಧನಿನಶ್ಚೇತಿ ಪ್ರಶ್ನಸ್ತಸ್ಮಾತ್ಪರೀಕ್ಷಿತಃ || ೨೧೯ ||
ಧನಸ್ಯ ತನ್ನಿಮಿತ್ತಸ್ಯ ವಿಕಾರಸ್ಯ ಚ ಸೂಚಕಃ ।
ತತ ಈದೃಕ್ ಶಿವಾಜ್ಜಾತಾ ವಿಕಾರಾಃ ಕಿಲ ಷೋಡಶ || ೨೨೦ ||
ಯತೋ ವಿಕ್ರಿಯತೇ ಲೋಕಃ ಸ ವಿಕಾರ ಇತೀರ್ಯತೇ ।

ಹಿಂದೆ ಪರೀಕ್ಷಿತ್ ರಾಜನು "ಪ್ರಾಯಸ್ತೇ ಧನಿನೋ ಬ್ರಹ್ಮನ್ ನತು ಲಕ್ಷ್ಮೀಪತಿಂ ಹರಿಮ್ " ಎಂದು ಪ್ರಾರಂಭಿಸಿ ಶಿವಭಕ್ತರಿಗೆ ನಶ್ವರೈಶ್ವರ್ಯವೂ ಶ್ರೀಹರಿಭಕ್ತರಿಗೆ ಅನಶ್ವರೈಶ್ವರ್ಯವೂ ಉಂಟಾಗಲು ಕಾರಣವೇನು ಎಂದು ಶುಕಾಚಾರ್ಯರನ್ನು ಪ್ರಶ್ನೆ ಮಾಡಿದ್ದಕ್ಕೆ ಶುಕರು ತಕ್ಕ ಸಮಂಜಸವಾದ ಉತ್ತರವನ್ನು ಕೊಟ್ಟಿರುತ್ತಾರೆ. ಶಿವನಿಂದ ನಶ್ವರವಾದ ಧನಾದಿರೂಪವಾದ ಐಶ್ವರ್ಯವು ಉಂಟಾಗಲು ಕಾರಣವನ್ನೂ ವಿಕಾರಭೂತವಾದ ಪದಾರ್ಥಗಳ ಜನನಕ್ಕೆ ನಿಮಿತ್ತವನ್ನೂ, ಷೋಡಶ (ಹದಿನಾರು) ವಿಕಾರಭೂತವಾದ ಪದಾರ್ಥಗಳ ವಿಕಾರಸ್ವರೂಪವನ್ನೂ ಹೇಳಿ ಯಾವ ಕಾರಣದಿಂದ ಈ ಪ್ರಪಂಚವು ವಿಕಾರವನ್ನು ಹೊಂದುತ್ತದೆಯೋ, ಮತ್ತು ಯಾವುದರ ಪರಿಣಾಮರೂಪವಾಗಿದೆಯೋ ಆ ಕಾರಣದಿಂದ ಈ ಜಗತ್ತು ಜಡಪ್ರಕೃತಿಯ ವಿಕಾರವೆಂದು ಕರೆಯಲ್ಪಡುತ್ತದೆ.

ಆಕಾಶವಾಯುಜಂ ತೂರ್ಯಂ ತೇನಾಪಿ ಧನಿತಾ ನೃಣಾಮ್ || ೨೨೧ ||
ಸ್ವರ್ಣರತ್ನಾದಿಕಂ ವಸ್ತು ಯಚ್ಚ ಲೋಕೇ ಪ್ರಕಾಶವತ್ ।
ಧನಮಿತ್ಯುಚ್ಯತೇ ತಚ್ಚ ತೇಜಸಾ ಜಾಯತೇ ಕಿಲ || ೨೨೨ ||
ಮುಕ್ತಾಫಲಂ ಚ ಯಲ್ಲೋಕೇ ಪೇಯಂ ಕ್ಷೀರಘೃತಾದಿಕಮ್ ।
ರಸಾದಿಕಂ ಚ ತತ್ಸರ್ವಂ ಧನಮಿತ್ಯುಚ್ಯತೇ ಜನೈಃ || ೨೨೩ ||
ಅಮ್ಮಯಂ ತದಿದಂ ಸರ್ವಂ ಯಚ್ಚ ಶೋಭನಗಂಧವತ್ ।
ಪುಷ್ಪಂ ನಾನಾವಿಧಂ ತಚ್ಚ ಧನಮಿತ್ಯುಚ್ಯತೇ ಜನೈಃ || ೨೨೪ ||

ಮಧುರವಾದ ಕರ್ಣಾನಂದದಾಯಕವಾದ ಧ್ವನಿವಿಶೇಷರೂಪವಾದ ತೂರ್ಯವೆಂದು ಕರೆಯಲ್ಪಡತಕ್ಕ ವಾದ್ಯವಿಶೇಷವು ಪಂಚಭೂತಗಳ ಪೈಕಿ ಆಕಾಶದಿಂದಲೂ, ವಾಯುತತ್ವದಿಂದಲೂ ಹುಟ್ಟಿರುವುದಾದರೂ ಅದನ್ನು ನಾನಾವಿಧಗಳಾದ ವಾದ್ಯಗಳನ್ನು ಜನರು ಧನವೆಂದೂ ಅದನ್ನು ಉಳ್ಳವರನ್ನು ಧನಿಗಳೆಂದೂ ಕರೆಯುತ್ತಾರೆ.

ಚಿನ್ನವೇನು, ರತ್ನಗಳೇನು ಇವೇ ಮೊದಲಾದ ಪ್ರಕಾಶಮಾನವಾದ ಪದಾರ್ಥಗಳೇನುಂಟೋ ಇವೆಲ್ಲವೂ ಮಿಶ್ರಿತವಾದ ತೇಜಸ್ಸಿನಿಂದ ಹುಟ್ಟಿರುವುದಾದರೂ ಅವನ್ನೆಲ್ಲಾ ಧನಗಳೆಂದು ಜನರು ಕರೆಯುತ್ತಾರೆ.

ಸಮುದ್ರದಲ್ಲಿ ಬಿದ್ದ ಸ್ವಾತೀ ಮಳೆಯ ನೀರೇ ಮುತ್ತು ಎಂದೆನಿಸಿಕೊಳ್ಳುತ್ತದೆ. ಮತ್ತು ಪಾನಾರ್ಹವಾದ ಹಾಲು, ತುಪ್ಪ ಮತ್ತು ರಸಪದಾರ್ಥಗಳಾವುವು ಉಂಟೋ ಅವೆಲ್ಲವೂ ಜಲದ ವಿಕಾರಗಳಾದಾಗ್ಯೂ ಧನಗಳೆಂದು ಹೇಳಿಸಿಕೊಳ್ಳುತ್ತವೆ.

ಯಾವುದು ಲೋಕದಲ್ಲಿ ಸುವಾಸನೆಯುಳ್ಳದ್ದೋ ಅಂತಹ ನಾನಾಬಗೆಯಾದ ಹೂವುಗಳೂ ಕೂಡ ಧನಗಳೆಂದು ಕರೆಯಲ್ಪಡುತ್ತವೆ. ಬಿಳಿಯ ಬಣ್ಣದ, ಹಳದಿ ಬಣ್ಣದ, ಕೆಂಪುಬಣ್ಣದ ಮತ್ತು ಕಪ್ಪುವರ್ಣದ ನಾನಾಬಗೆಯಾದ ವಸ್ತ್ರಗಳೂ, ಧನ, ಧಾನ್ಯಾದಿಗಳೂ ಸಹ ಪಾರ್ಥಿವ ಪದಾರ್ಥಗಳೆನಿಸಿರುವುವೆಲ್ಲಾ ಧನಗಳೆಂದು ಪ್ರಸಿದ್ಧವಾಗಿವೆ.

**ಶ್ವೇತಪೀತಾರುಣಶ್ಯಾಮವರ್ಣಂ ನಾನಾವಿಧಾಂಬರಮ್ ।**
**ಧನಧಾನ್ಯಾದಿ ಭೂಜ್ಞೇಯಂ ಭೂತಯಃ ಕಿಲ ದೇಹಿನಾಮ್ ॥ ೨೨೫ ॥**

ಮೇಲೆ ತಿಳಿಸಿದ ಪಂಚಭೂತಾತ್ಮಕಗಳಾದ ಪಂಚಭೂತಗಳ ವಿಕಾರರೂಪಗಳಾದ ನಶ್ವರವಾದ ಪದಾರ್ಥಗಳೆಲ್ಲಾ ಧನಗಳೆಂದು ಅವುಗಳನ್ನುಳ್ಳ ಮಾನವನು ಧನಿಕನೆಂದೂ ಜನರು ಕರೆಯುತ್ತಾರೆ. ಅವುಗಳೆಲ್ಲಾ ಮಾನವರ ಐಶ್ವರ್ಯಗಳಷ್ಟೆ.

**ಮನೋಹರಾಶ್ಚ ವನಿತಾಃ ಜನಾಶ್ಚ ಪರಿಚಾರಕಾಃ ।**
**ಗೃಹಸಿಂಹಾಸನಾದ್ಯಂ ಚ ಸೇನಾ ಚ ಚತುರಂಗಿಣೀ ॥ ೨೨೬ ॥**
**ಇದಂ ಸರ್ವಂ ಚ ಜಗತಿ ಮಹೈಶ್ವರ್ಯಮಿತೀರ್ಯತೇ ।**

ಮನೋರಂಜಕರಾದ ಸುಂದರಿಯಾದ ಅಂಗನೆಯರು, ಅಧಿಕ ಸಂಖ್ಯೆಯ ಪರಿಚಾರಕರು, ವೈಭವೋಪೇತವಾದ ವಾಸದ ಮನೆಗಳು, ರತ್ನಮಯವಾದ ಸಿಂಹಾಸನವೇ ಮೊದಲಾದವುಗಳು, ಚತುರಂಗ ಸೈನ್ಯವೇನುಂಟೋ ಇವುಗಳನ್ನೆಲ್ಲಾ ಉಳ್ಳವರು ಸಾಮಾನ್ಯವಾಗಿ ರಾಜಮಹಾರಾಜರುಗಳೇ ಆಗಿರುವುದರಿಂದ ಅವುಗಳನ್ನು ಮಹೈಶ್ವರ್ಯಗಳೆಂದು ಜನರು ಕರೆಯುತ್ತಾರೆ.

ಪಂಚಭೂತಾತ್ಮಕಂ ಚೇದಂ ಸರ್ವಂ ಸರ್ವಸ್ಯ ಸಮ್ಮತಮ್ || ೨೨೭ ||

ಮೇಲೆ ತಿಳಿಸಿದ ಧನಧಾನ್ಯಾದಿ ಸಕಲೈಶ್ವರ್ಯಗಳೂ ಸಹ ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳ ವಿಕಾರಗಳೇ ಆಗಿವೆ. ಇದು ಎಲ್ಲರಿಗೂ ಸಮ್ಮತವೇ ಸರಿ.

ಅಹಂಕಾರಮದಕ್ರೋಧಕಾಮಲೋಭಾದಿರೂಪಿಣಃ ।
ಮನೋವಿಕಾರಸ್ಯ ಯಸ್ಮಾದ್ಧೇತುಭೂತಾಸ್ತತಸ್ತ್ವನೇ || ೨೨೮ ||
ವಿಕಾರಾಃ ಪಂಚಭೂತಾಖ್ಯಾ ವಿಕಾರಾ ಇತಿ ಕೀರ್ತಿತಾಃ ।

ಅಹಂಕಾರ, ಮದ, ಕ್ರೋಧ, ಕಾಮ, ಲೋಭ, ದುಃಖ ಮೊದಲಾದವು ಅಂತಃಕರಣವೆನಿಸಿದ ಮನಸ್ಸಿನ ವಿಕಾರಗಳಾಗಿವೆ. ಪಂಚಭೂತಗಳೂ ಸಹ ಎಲ್ಲವೂ ಪ್ರಕೃತಿಯ ವಿಕಾರಗಳೇ ಆಗಿವೆ. ಮೂಲಜಡ ಪ್ರಕೃತಿಯ ವಿಕಾರಗಳೇ ಗುಣತ್ರಯಗಳು. ಆದರ ವಿಕಾರವೇ ಮಹತ್ತತ್ವ. ಅದರ ವಿಕಾರವೇ ಅಹಂಕಾರತತ್ವ.

ತಾಮಸಾಹಂಕಾರದ ವಿಕಾರವೇ ಪಂಚತನ್ಮಾತ್ರಗಳು. ಅವುಗಳ ವಿಕಾರಗಳೇ ಪಂಚಮಹಾಭೂತಗಳು. ಪ್ರಾಕೃತವಾದ ಈ ಜಗತ್ತೆಲ್ಲವೂ ಪಂಚಮಹಾಭೂತಗಳ ವಿಕಾರಗಳೇ ಆಗಿವೆ.

ದರ್ಶನ ಸ್ಪರ್ಶನ ಆಘ್ರಾಣ ಶ್ರವಣ ಆಸ್ವಾದನಾದಯಃ || ೨೨೯ ||
ರಮಣಾಲಿಂಗನಾದ್ಯಾಶ್ಚ ವಿಕಾರಾಃ ಲೋಕಸಮ್ಮತಾಃ ।
ಏಕಾದಶೇಂದ್ರಿಯಾಣ್ಯೇಷಾಂ ಕರಣಾನಿ ವಿದೋ ವಿದುಃ || ೨೩೦ ||
ಅತಸ್ತಯೋರ್ಮತೈಕ್ಯಂ ಚ ಯುಕ್ತಮೇವೇತಿ ಮೇ ಮತಿಃ ।
ತಸ್ಮಾದ್ಭಾಗವತಾರ್ಥಂ ಚ ವೇತ್ತಿ ಭಾಗವತಃ ಪುಮಾನ್ || ೨೩೧ ||
ಇಹ ಚಾಮುತ್ರ ಚ ಸುಖಂ ತಸ್ಯೈವೇತ್ಯತಿಮಂಗಳಮ್ ।

ಇತರರನ್ನು ನೋಡುವುದು, ಮತ್ತೊಬ್ಬರನ್ನು ಮುಟ್ಟುವುದು, ಪದಾರ್ಥಗಳನ್ನು ಮೂಸಿನೋಡುವುದು, ಹೊರಗಿನ ಶಬ್ದಗಳನ್ನು ಕೇಳುವುದು, ಆಹಾರಾದಿ ಪದಾರ್ಥಗಳನ್ನು ರುಚಿನೋಡುವುದು, ದೇಹದಿಂದ ಸ್ತ್ರೀ ಪುರುಷರ ಆಲಿಂಗಿಸುವಿಕೆ,

ಇದೆಲ್ಲಾ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ (ಘ್ರಾಣ, ರಸನ, ಚಕ್ಷುಸ್ಸು, ತ್ವಕ್, ಶ್ರೋತ್ರ) ವೆಂದು ಕರೆಯಲ್ಪಡತಕ್ಕ ಪ್ರಾಕೃತಗಳಾದ ಇಂದ್ರಿಯ ಗಳಿಂದ ಆಗುವ ಎಲ್ಲ ಬಗೆಯಾದ ಅನುಭವಗಳೂ ಪ್ರಾಕೃತಗಳೇ ಆಗಿವೆ. ಅದಕ್ಕೆಲ್ಲಾ ಕಾರಣಗಳಾದ ಹನ್ನೊಂದು ಇಂದ್ರಿಯಗಳೂ ಸಹ ಅಂದರೆ ಹಿಂದೆ ತಿಳಿಸಿದ ಐದು ಜ್ಞಾನಜನಕಗಳಾದ ಇಂದ್ರಿಯಗಳು, ಅದರಂತೆ, ವಾಕ್, ಪಾಣಿ, ಪಾದ, ಪಾಯು, ಗುಹ್ಯೇಂದ್ರಿಯಗಳೆಂಬ ಕರ್ಮೇಂದ್ರಿಯಗಳೂ, ಬಾಹ್ಯಕರಣಗಳು ಇವೆಲ್ಲಕ್ಕಿಂತಲೂ ಮೇಲಾಗಿ ಒಳಗಿರುವ ಅಂತಃಕರಣವೆನಿಸಿಪ ಪ್ರಾಕೃತವಾದ ಮನಸ್ಸು ಒಟ್ಟು ಹನ್ನೊಂದು ಇಂದ್ರಿಯಗಳೂ ಸಹ ಪ್ರಾಕೃತಗಳೇ ಆಗಿವೆ. ಈ ಪ್ರಾಕೃತ ಇಂದ್ರಿಯಗಳಿಂದಾಗುವ ಭೋಗಗಳೂ ಸಹ ಪ್ರಾಕೃತ ಭೋಗಗಳೇ ಆಗಿವೆ. ಅವುಗಳಿಗೆ ಗೋಚರವಾಗತಕ್ಕ ವಿಷಯಗಳೂ ಸಹ ಪ್ರಾಕೃತಗಳೆಂಬುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಆದ್ದರಿಂದ ಹಿಂದೆ ತಿಳಿಸಿದಂತೆ ನಶ್ವರವಾದ ಪ್ರಾಕೃತವಾದ ಪ್ರಪಂಚದ ಪರಿಮಿತಿಯನ್ನು ಚೆನ್ನಾಗಿ ಪರಿಶೀಲಿಸಿ, ಪರಮಾತ್ಮನ ಸರ್ವೋತ್ತಮತ್ವವನ್ನೂ ಸರಿಯಾಗಿ ತಿಳಿದು ಕೇವಲ ಭಗವದ್ಭಕ್ತನಾಗಿ ಭಕ್ತಿ ಪ್ರಧಾನವಾದ, ಭಗವಂತನ ಮಹಿಮೆಗಳನ್ನು ವಿಶೇಷಾಕಾರವಾಗಿ ತಿಳಿಸುತ್ತಲಿರುವ ಶ್ರೀಮದ್ಭಾಗವತದ ಅರ್ಥವನ್ನು ಯಾವ ಮಾನವನು ತಿಳಿದಿರುವನೋ ಅವನು ಈ ಭೂಲೋಕದಲ್ಲಿಯೂ ಸುಖದಿಂದ ಬಾಳುತ್ತಾನೆ. ವಿಧಿವಿಹಿತಗಳಾದ ಶ್ರವಣಾದಿ ಗಳನ್ನು ಭಕ್ತಿಪೂರ್ವಕವಾಗಿ ಮಾಡಿ ಪರಮಾತ್ಮನ ಪ್ರಸಾದಕ್ಕೆ ಪಾತ್ರನಾಗಿ ಮೋಕ್ಷ ವನ್ನು ಪಡೆಯುತ್ತಾನೆ. ಅಂತಹವನಿಗೆ ಪರಮಮಂಗಳರೂಪವಾದ ಸ್ವಸ್ವರೂಪ ಸುಖಾನುಭವರೂಪವಾದ ಮೋಕ್ಷವು ದೊರಕುತ್ತದೆ. ಇದರಲ್ಲಿ ಯಾವ ಸಂದೇಹವೂ ಇರುವುದಿಲ್ಲ.

ಸರಸ್ವತ್ಯಾಸ್ತಟೇ ರಾಜನ್ ಋಷಯಃ ಸತ್ರಮಾಸತ ॥ ೨೩೨ ॥

ವಿತರ್ಕಃ ಸಮಭೂತ್ತೇಷಾಂ ತ್ರಿಷ್ವಧೀಶೇಷು ಕೋ ಮಹಾನ್ ।
ತಜ್ಞಪ್ತ್ಯೈ ಪ್ರೇಷಯಾಮಾಸುಃ ಭೃಗುಂ ಬ್ರಹ್ಮಸುತಂ ನೃಪ ॥ ೨೩೩ ॥

ಸ್ವಾನುಭೂತಮಶೇಷೇಣ ಭೃಗುಃ ಸಮನುವರ್ಣಯತ್ ।
ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾಃ ಛಿನ್ನಸಂಶಯಾಃ ॥ ೨೩೪ ॥

ಭೂಯಾಂಸಂ ಶ್ರದ್ಧಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್ ।
ಇತಿ ಭಾಗವತೋಕ್ತೇಶ್ಚ ಮುನಯಃ ಶಂಸಿತವ್ರತಾಃ ॥ ೨೩೫ ॥

ತಪೋಮಯಕ್ರೋಧವಶೌ ಕೃತ್ವಾ ಬ್ರಹ್ಮಶಿವಾವಥಃ ।
ಶಾಂತಂ ನಾರಾಯಣಂ ಸರ್ವೇಶ್ವರಂ ನಿರಣಯನ್ ಕಿಲ ॥ ೨೩೬ ॥

ಕಸ್ತಸ್ಯ ಸಮತಾಮೇತಿ ವದಂತು ಪ್ರತಿವಾದಿನಃ ।

ಈ ವಾಕ್ಯಗಳು ಶ್ರೀಮದ್ಭಾಗವತದ ದಶಮಸ್ಕಂಧದ ಉತ್ತರಾರ್ಧದಲ್ಲಿ ಎಂಭತ್ತೊಂಭತ್ತನೆಯ ಅಧ್ಯಾಯದಲ್ಲಿ ಉಕ್ತವಾಗಿದೆ.

ಹಿಂದೆ ಸರಸ್ವತೀನದೀತೀರದಲ್ಲಿ ಋಷಿವರೇಣ್ಯರೆಲ್ಲಾ ಸೇರಿ ಒಂದು ಸತ್ರಯಾಗವನ್ನು ಆರಂಭಿಸಿದರು. ಆಗ ಆ ಯಾಗದಲ್ಲಿ ಮುಖ್ಯವಾಗಿ ಯಾವ ದೇವತೆಯನ್ನು ಆರಾಧಿಸಬೇಕೆಂಬ ವಿಷಯದಲ್ಲಿ ಋಷಿಗಳಲ್ಲಿ ಪರಸ್ಪರ ವಿವಾದವುಂಟಾಯಿತು. ಕೆಲವರು ಚತುರ್ಮುಖ ಬ್ರಹ್ಮನನ್ನೇ ಪ್ರಧಾನದೇವತೆಯನ್ನಾಗಿಯೂ, ಮತ್ತೆ ಕೆಲವರು ರುದ್ರನನ್ನೇ ಪ್ರಧಾನದೇವತೆಯನ್ನಾಗಿಯೂ ವಾದಿಸಿದರು. ಇನ್ನೂ ಅನೇಕ ಋಷಿಗಳು ಶ್ರೀಹರಿಯೇ ಸರ್ವೋತ್ತಮ ದೇವತೆಯೆಂದು ಪ್ರತಿಪಾದಿಸಿದರು. ಸರ್ವೋತ್ತಮದೇವತೆಯ ವಿಚಾರವಾಗಿ ಈ ರೀತಿ ವಿವಾದವು ಉಂಟಾದಾಗ ಎಲ್ಲರೂ ಸೇರಿ ಜ್ಞಾನಿವರೇಣ್ಯರಾದ ಹಾಗೂ ಯೋಗಿಶ್ರೇಷ್ಠರಾದ ಬ್ರಹ್ಮಪುತ್ರರಾದ ಭೃಗು ಮಹರ್ಷಿಗಳನ್ನು ಪ್ರಾರ್ಥಿಸಿ ಈ ವಿಷಯದಲ್ಲಿ ಅಂತಿಮ ಸಿಧ್ಧಾಂತವನ್ನು ತಮಗೆ ತಿಳಿಸಿ ಮಾರ್ಗದರ್ಶನ ಮಾಡಬೇಕೆಂದು ಪ್ರಾರ್ಥಿಸಿದರು. ಮತ್ತು ಸತ್ಯಲೋಕ, ಕೈಲಾಸ, ವೈಕುಂಠಲೋಕಗಳಿಗೆ ಹೋಗಿ ಪರಿಶೀಲಿಸಿ ತೀರ್ಮಾನಿಸಲು ಭೃಗುಗಳನ್ನು ಕಳುಹಿಸಿಕೊಟ್ಟರು.

ಯೋಗಿವರೇಣ್ಯರಾದ ಭೃಗುಗಳು ಯೋಗಸಾಮರ್ಥ್ಯದಿಂದ ಮೊದಲು ಸತ್ಯಲೋಕಕ್ಕೆ ಹೋದರು. ಸತ್ಯಲೋಕದಲ್ಲಿನ ಬ್ರಹ್ಮದೇವರ ಸಭೆಗೆ ಹೋದಾಗ ತ್ರಿಮೂರ್ತಿಗಳಲ್ಲಿ ಶ್ರೇಷ್ಠರಾರೆಂಬ ಪರೀಕ್ಷೆಗೆ ಭೃಗುಗಳು ಹೋಗಿದ್ದುದರಿಂದ ಬ್ರಹ್ಮನಿಗೆ ಭಕ್ತಿಯಿಂದ ಸ್ತೋತ್ರವನ್ನು ಮಾಡಲಿಲ್ಲ. ಆದರಿಂದ ತನ್ನ ತೇಜೋ ವಿಶೇಷದಿಂದ ಪ್ರಜ್ವಲಿಸುತ್ತಲಿದ್ದ ಬ್ರಹ್ಮದೇವನಿಗೆ ತನ್ನ ಮಗನಾದ ಭೃಗುವಿನ ಮೇಲೆ ಕೋಪವು ಬಂದಾಗ್ಯೂ ಅದನ್ನು ತಮ್ಮಲ್ಲಿಯೇ ನಿಗ್ರಹಿಸಿಕೊಂಡರು.

*

ಮತ್ತು ಬ್ರಹ್ಮದೇವನು ಶ್ರೀಹರಿಧ್ಯಾನದಲ್ಲೇ ತಲ್ಲೀನನಾಗಿರುವಿಕೆಯನ್ನು ಮನಗಂಡ ಭೃಗುವಿಗೆ ಬ್ರಹ್ಮನಿಗಿಂತಲೂ ಶ್ರೀಹರಿಯ ಸರ್ವೋತ್ತಮತ್ವ ವಿಷಯದಲ್ಲಿ ಸಂದೇಹವು ಉಂಟಾಗಲಿಲ್ಲ.

ಸತ್ಯಲೋಕದಿಂದ ಭೃಗುಋಷಿಗಳು ಕೈಲಾಸಕ್ಕೆ ತೆರಳಿದರು. ಬ್ರಹ್ಮನ ಹುಬ್ಬಿನಿಂದ ಹುಟ್ಟಿದ ಶಿವನು ತನ್ನ ಭ್ರಾತೃವಾದ ಭೃಗುವನ್ನು ಕಂಡು ಮೇಲೆದ್ದು ಆಲಿಂಗಿಸಲು ಉಪಕ್ರಮಿಸಿದನು. ಆದನ್ನು ಭೃಗುವು ನಿರೀಕ್ಷಿಸಿರಲಿಲ್ಲ, ಅಪೇಕ್ಷಿಸಿರಲಿಲ್ಲ. ಮೇಲಾಗಿ ರುದ್ರನನ್ನು ಉನ್ಮತ್ತಮಾರ್ಗಗಾಮಿಯೆಂದು ದೂಷಿಸಿದರು. ಅದರಿಂದ ಕೋಪಗೊಂಡ ರುದ್ರನು ಶೂಲಾಯುಧದಿಂದ ಭೃಗುವನ್ನು ಕೊಲ್ಲಲು ಶೂಲ ವನ್ನೆತ್ತಿದಾಗ ಪಾರ್ವತೀದೇವಿಯು ಶಿವನ ಪಾದಕ್ಕೆರಗಿದಳು ಮತ್ತು ಆ ಅನಾಹುತ ವನ್ನು ತಪ್ಪಿಸಿದಳು. ಅನಂತರದಲ್ಲಿ ಭೃಗುಗಳು ವೈಕುಂಠಕ್ಕೆ ಹೋದರು. ಅಲ್ಲಿ ಶೇಷಶಾಯಿಯಾಗಿ ರಮಾಸೇವಿತನಾಗಿರುವ ಶ್ರೀಹರಿಯನ್ನು ಸಂದರ್ಶಿಸಿ ಭೃಗುಗಳು ಪರಮಾತ್ಮನ ವಕ್ಷಸ್ಥಳಕ್ಕೆ ಶ್ರೀಹರಿಯ ಸಂಕಲ್ಪದಂತೆ ತಮ್ಮ ಪಾದದಿಂದ ಸ್ಪರ್ಶ ಮಾಡಿದರು. ಆಗ ಶ್ರೀವಿಷ್ಣುವು ಲಕ್ಷ್ಮಿಯೊಡನೆ ಮೇಲೆದ್ದು ಭೃಗುಮುನಿಗೆ ನಮಸ್ಕರಿಸಿ ಸ್ವಾಗತವನ್ನು ಹೇಳಿ ಆಸನಾದಿಗಳಿಂದ ಸತ್ಕರಿಸಿದನು. ಮುನಿವರ್ಯ, ನಿಮ್ಮ ಕೋಮಲವಾದ ಪಾದಗಳೆಂದು ಆದರದ ಮಾತುಗಳನ್ನಾಡುತ್ತ ಆ ಪಾದಗಳನ್ನು ತನ್ನ ಕೈಯಿಂದ ಒತ್ತುತ್ತಾ ಅರ್ಘ್ಯಪಾದ್ಯಗಳನ್ನಿತ್ತು ಬ್ರಾಹ್ಮಣ ಪಾದೋದಕದ ಮಹಿಮೆಯನ್ನು ವರ್ಣಿಸುತ್ತಾ ಉಪಚರಿಸಿದನು.

ಈ ರೀತಿ ಶ್ರೀಹರಿಯಿಂದುಪಚರಿಸಲ್ಪಟ್ಟ ಭೃಗುವಿಗೆ ಭಕ್ತ್ಯುದ್ರೇಕದಿಂದ ಆನಂದಾಶ್ರುಗಳು ಉದುರಿದವು. ಹೀಗೆ ವೈಕುಂಠದಲ್ಲಿ ಆದರಿಸಲ್ಪಟ್ಟ ಭೃಗು ಮಹರ್ಷಿಯು ಮತ್ತು ಭೂಲೋಕದಲ್ಲಿ ಋಷಿಗಳು ಆಚರಿಸುತ್ತಲಿದ್ದ ಸತ್ರಯಾಗಕ್ಕೆ ಬಂದು "ಹರಿಃ ಸರ್ವೋತ್ತಮಃ ಸಾಕ್ಷಾತ್ ರಮಾ ಚ ತದನಂತರಂ । ವಿಧಿ ವಾಯೂ ತದಂತೇ ಚ ತದಂತೇ ಶರ್ವಪೂರ್ವಕಾಃ" ಎಂಬ ನಿರ್ಣಯವನ್ನು ಎಲ್ಲ ಋಷಿಗಳ ಸಂದೇಹ ಪರಿಹಾರಕವಾದ ತೀರ್ಮಾನವನ್ನು ಹೇಳಿದರು.

ಅಂದರೆ ಸರ್ವದೇವತಾವೃಂದದಲ್ಲಿಯೂ ತ್ರಿಮೂರ್ತಿಗಳಲ್ಲಿಯೂ ಸಹ ಶ್ರೀಲಕ್ಷ್ಮೀದೇವಿಯ ಪತಿಯಾದ ಶ್ರೀಮನ್ನಾರಾಯಣನೇ ಸರ್ವೋತ್ತಮನು, ಸರ್ವತಂತ್ರಸ್ವತಂತ್ರನು. ಅವನ ನಂತರ ಜಗನ್ಮಾತೆಯಾದ ಶ್ರೀಮಹಾಲಕ್ಷ್ಮಿಯು. ಅನಂತರದಲ್ಲಿ ಪರಶುಕ್ಲತ್ರಯಕ್ಕೆ ಸೇರಿದವರಾದ ಬ್ರಹ್ಮವಾಯುಗಳು ಮತ್ತು

ಸರಸ್ವತೀ ಭಾರತೀದೇವಿಯರು. ಈ ಪರಶುಕ್ಲತ್ರಯದೇವತೆಗಳನ್ನು ಬಿಟ್ಟರೆ ಕ್ರಮವಾಗಿ ಗರುಡಶೇಷರುದ್ರರು, ಸೌಪರ್ಣೀ ವಾರುಣೀ ಉಮಾದೇವಿಯವರು. ಅವರ ಅನಂತರದಲ್ಲಿ ಇಂದ್ರಕಾಮಾದಿಗಳೆಂದು ತೀರ್ಮಾನಿಸಿದ ವೇದಸಮ್ಮತವಾದ ತಾರತಮ್ಯವನ್ನು ಎಲ್ಲ ಋಷಿಗಳೂ ಭೃಗುಗಳ ತೀರ್ಮಾನವಂತೆ ನಿಶ್ಚಯಿಸಿದರು.

ಮತ್ತು ಬ್ರಹ್ಮದೇವನು ನಿರಂತರದಲ್ಲೂ ಶ್ರೀಹರಿಯನ್ನು ಕುರಿತು ತಪಸ್ಸಾಚರಿಸುತ್ತಲಿರುತ್ತಾನೆ. ಶಿವನಾದರೋ ಪರವಶನಾಗಿದ್ದಾನೆ. ಶ್ರೀಹರಿಯಾದರೋ ಸದಾ ಶಾಂತಮೂರ್ತಿ, ಸರ್ವೇಶ್ವರ. ಸರ್ವೋತ್ತಮ ಎಂಬ ದೃಢವಾದ ನಿರ್ಣಯವುಳ್ಳವರಾದರು. ಆದ್ದರಿಂದ ಅಂತಹ ಶ್ರೀಹರಿಗೆ ಯಾರುತಾನೇ ಸಮರು. ಪ್ರತಿವಾದಿಗಳು ಹೇಳಲಿ.

**ತೂರ್ಣಂ ಗೃಹೀತ್ವಾ ಪಾಣಿಭ್ಯಾಂ ವಿಷಾಣೇ ತಸ್ಯ ನಂದಿನಃ ॥ ೨೩೭ ॥**

**ಸ ಶೂಲಪಾಣಿಂ ಚಿಕ್ಷೇಪ ವೈನತೇಯೋ ಧನುಶ್ಶತಮ್ ।**
**ಆಕ್ಷಿಪತ್ ಕಿಲ ಯದ್ವಾಹಃ ತಾರ್ಕ್ಷ್ಯಃ ತ್ರ್ಯಕ್ಷಂ ಧನುಶ್ಶತೇ ॥ ೨೩೮ ॥**

**ಕಃ ಸಮಸ್ತಸ್ಯ ಕೃಷ್ಣಸ್ಯ ವದಂತು ಪ್ರತಿವಾದಿನಃ ।**

ಯಾವ ಶ್ರೀಕೃಷ್ಣನ ವಾಹನನಾದ ಗರುಡನು ಒಂದಾವರ್ತಿ ಪರಸ್ಪರ ವಿರೋಧವುಂಟಾದ ಸಂದರ್ಭದಲ್ಲಿ ಶಿವನ ವಾಹನವಾದ ನಂದಿಯ ಎರಡೂ ಕೊಂಬುಗಳನ್ನು ಬೇಗನೆ ಹಿಡಿದು ಮೇಲೆ ಕುಳಿತಿರುವ ರುದ್ರನ ಸಹಿತವಾಗಿ ವಗೆದುಬಿಟ್ಟು ನೂರಾರು ಬಾಣಗಳ ಮಳೆಯನ್ನೇ ಕರೆದನೋ, ಅಂದರೆ ಯಾರ ವಾಹನವೇ ವಾಹನಸಹಿತನಾದ ರುದ್ರನನ್ನೇ ತಿರಸ್ಕರಿಸಿದನೋ ಅಂತಹ ಶ್ರೀಕೃಷ್ಣನಿಗೆ ಸಮರಾರು, ಪ್ರತಿವಾದಿಗಳೇ ಹೇಳಲಿ.

**ತಯಾಽಪಹೃತವಿಜ್ಞಾನಸ್ತತ್ಕೃತಸ್ಮರವಿಹ್ವಲಃ ॥ ೨೩೯ ॥**

**ಭವಾನ್ಯಾ ಅಪಿ ಪಶ್ಯನ್ತ್ಯಾ ಗತಹ್ರೀಃ ತತ್ಪದಂ ಯಯೌ ।**
**ತಸ್ಯಾಸೌ ಪದವೀಂ ರುದ್ರೋ ವಿಷ್ಣೋರದ್ಭುತಕರ್ಮಣಃ ॥ ೨೪೦ ॥**

**ಪ್ರತ್ಯಪದ್ಯತ ಕಾಮೇನ ವೈರಿಣಾ ಚ ವಿನಿರ್ಜಿತಃ ।**
**ಇತಿ ಭಾಗವತೇ ಸ್ಪಷ್ಟಂ ಹರೇರ್ನಾರಾಯಣೀಂ ತನುಮ್ ॥ ೨೪೧ ॥**

**ದೃಷ್ಟ್ವಾ ಕಾಮಾತುರಃ ಶಂಭುಃ ಅಭೂದಿತ್ಯಾಹ ಯಚ್ಛುಕಃ ।**
**ಅತೋ ಹರಭ್ರಾಂತಿಕರಮಹಾಶಕ್ತಿಮತಃ ಪ್ರಭೋಃ ॥ ೨೮೨ ॥**

**ಮಹಾವಿಷ್ಣೋಃ ಸಮಃ ಕಃ ಸ್ಯಾದ್ವದಂತು ಪ್ರತಿವಾದಿನಃ ।**

ಈ ಮೇಲಿನ ಪದ್ಯಭಾಗವನ್ನು ಶ್ರೀಮದ್ಭಾಗವತದ ಎಂಟನೇ ಸ್ಕಂಧದ ಹನ್ನೆರಡನೇ ಅಧ್ಯಾಯದ ಇಪ್ಪತ್ತೈದನೆಯ ಶ್ಲೋಕದಿಂದ ಮೂವತ್ತೊಂದನೆಯ ಶ್ಲೋಕದವರೆವಿಗೆ ಇರತಕ್ಕದ್ದನ್ನು ಶ್ರೀಹರಿಯ ಅತ್ಯದ್ಭುತ ವ್ಯಾಪಾರವನ್ನು ತಿಳಿಸುವ ಮೂಲಕ ಇತರ ದೇವತೆಗಳಲ್ಲಿ ಕಾಣಬರದ ಮಹಾಮಹಿಮೆಯನ್ನು ತೋರಿಸು ವುದಕ್ಕಾಗಿ ಶ್ರೀವಾದಿರಾಜರು ಆರಿಸಿ ಉದಾಹರಿಸಿರುವರು.

ಸಮುದ್ರಮಥನವಾದನಂತರ ಹುಟ್ಟಿದ ಅಮೃತರಸಕ್ಕಾಗಿ ದೇವಾಸುರರಿಗೆ ಘರ್ಷಣೆಯು ನಡೆದಾಗ ಶ್ರೀವಿಷ್ಣುವು ಮೋಹಿನೀ ರೂಪವನ್ನು ಪ್ರಕಟಗೊಳಿಸಿ ದೈತ್ಯರಿಗೆ ಅಮೃತವು ದಕ್ಕದಂತೆ ಮೋಹಗೊಳಿಸಿ ದೇವತೆಗಳಿಗೆ ಅಮೃತದ ಪಾನವನ್ನೂಣಿಸಿದನು. ಆಗ ಶ್ರೀವಿಷ್ಣುವು ಪ್ರಕಟಗೊಳಿಸಿದ ಮೋಹಿನೀರೂಪವು ಅತ್ಯದ್ಭುತವಾದ ಸೌಂದರ್ಯದಿಂದ ಕೂಡಿದ್ದಾಗಿದ್ದಿತು. ಬ್ರಹ್ಮರುದ್ರೇಂದ್ರಾದಿ ದೇವತೆಗಳೂ ಸಹ ಅದನ್ನು ನೋಡಿ ಅತ್ಯಾಶ್ಚರ್ಯಪಟ್ಟಿದ್ದರು.

ಇದಾದನಂತರ ರುದ್ರನು ಉಮಾದೇವಿಯೊಡನೆ ತನ್ನ ಪರಿವಾರಸಮೇತವಾಗಿ ಶ್ರೀಹರಿಯ ಸನ್ನಿಧಾನಕ್ಕೆ ಶ್ರೀಹರಿಯನ್ನು ಕಾಣಲು ಹೋದಾಗ ಶ್ರೀವಿಷ್ಣುವು ಆದರದಿಂದ ಬರಮಾಡಿಕೊಂಡನು. ಶ್ರೀಹರಿಯನ್ನು ರುದ್ರನು ನಮಸ್ಕರಿಸಿ ಮಂದಹಾಸಪೂರ್ವಕವಾಗಿ ಹೀಗೆಂದು ಪ್ರಾರ್ಥಿಸಿದನು—

ಜಗಜ್ಜನ್ಮಾದಿಕಾರಣ, ಸಕಲಗುಣಪರಿಪೂರ್ಣ, ಪರಬ್ರಹ್ಮ, ಸಕಲ-ದೋಷದೂರ, ಸಮಾಧಿಕವರ್ಜಿತ, ಅಚಿಂತ್ಯೈಶ್ವರ್ಯಸಂಪನ್ನ, ಮಹಾನುಭಾವ ಶ್ರೀಹರೇ ! ನಿನ್ನ ಅವತಾರಗಳನ್ನೆಲ್ಲಾ ನಾವು ನೋಡಿದ್ದೇವೆ. ಆದರೆ ದೇವದೇವ, ಹಿಂದೆ ನೀನು ದೇವತೆಗಳ ಉಪಕಾರಕ್ಕಾಗಿ, ದೈತ್ಯರನ್ನು ಸಂಮೋಹಗೊಳಿಸಲು ಯಾವ ಮೋಹಿನೀರೂಪವನ್ನು ವ್ಯಕ್ತಗೊಳಿಸಿದೆಯೋ ಅದನ್ನು ಮತ್ತೆ ನೋಡಲು ಕುತೂಹಲಿಗಳಾಗಿ ನಾವೆಲ್ಲರೂ ನಿನ್ನ ಸನ್ನಿಧಾನಕ್ಕೆ ಬಂದಿದ್ದೇವೆ. ದಯಮಾಡಿ ಆ ರೂಪವನ್ನು ನಮಗೆ ತೋರಿಸು—ಎಂದು ಕೇಳಿಕೊಂಡನು. ಅದನ್ನು ಕೇಳಿ ಮಂದಹಾಸಪೂರ್ವಕವಾಗಿ ಶ್ರೀಹರಿಯು ಹರನಿಗೆ ಹೀಗೆ ಹೇಳಿದನು. ಎಲೈ

ರುದ್ರನೇ ! ಹಿಂದೆ ನಾನು, ದೇವತೆಗಳ ಪ್ರಯೋಜನಕ್ಕಾಗಿ, ದೇವತೆಗಳ ಕುತೂಹಲ ಕ್ಕಾಗಿ ಸ್ತ್ರೀ ವೇಷವನ್ನು ಧರಿಸಿ ಆ ಕಾರ್ಯವನ್ನು ನಿರ್ವಹಿಸಿದ್ದಾಗಿದೆ.

ಮತ್ತೆ ಈಗ ನಿಮ್ಮ ಪ್ರಾರ್ಥನೆಗೆ ಮನ್ನಿಸಿ ಆ ರೂಪವನ್ನು ತೋರಿಸುತ್ತೇನೆಂದು ಹೇಳಿ ಸಕಲ ಚೇತನರಿಗೂ ಅತ್ಯಾಶ್ಚರ್ಯಕರವಾದ ಅತಿಮೋಹಕರವಾದ ನಿರತಿಶಯ ರೂಪಸೌಂದರ್ಯಗಳಿಗೆ ಆಕರವಾದ ಮೋಹಿನೀರೂಪವನ್ನು ತೋರಿಸಿದನು. ಅದನ್ನು ಕಂಡಕೂಡಲೇ ರುದ್ರನು ತನ್ನನ್ನೇ ಮರೆತನು. ನಿಸ್ಸೀಮವಾದ ಸೌಂದರ್ಯದಿಂದ ವಿವೇಕವೇ ಮರೆಯಾಯಿತು. ಮನ್ಮಥಬಾಧಾ ಬಾಧಿತನಾದನು. ತನ್ನ ಪಕ್ಕದಲ್ಲಿರುವ ಪಾರ್ವತೀದೇವಿಯು ಇದ್ದಾಗ್ಯೂ ಸಹ, ನಾಚಿಕೆಯನ್ನು ಸಹ ಬಿಟ್ಟು ಆ ಮೋಹಿನಿಯನ್ನೇ ಕಾಮಾತುರನಾಗಿ ಹಿಂಬಾಲಿಸಿದನು. ತನಗೆ ವೈರಿಯಾದ ಕಾಮನಿಂದಲೇ ಪರಾಜಿತನಾದನು. ಈ ರೀತಿಯಾದ ಕಥಾಭಾಗವು ಭಾಗವತದಲ್ಲಿ ಶುಕಾಚಾರ್ಯರು ರುದ್ರನ ವಿಚಾರವನ್ನು ಪರೀಕ್ಷಿತ್ ರಾಜನಿಗೆ ಹೇಳಿದ್ದಾರೆ. ಹೀಗೆ ಹರನಿಗೂ ಭ್ರಾಂತಿಕರವಾದ ಮಹಾಶಕ್ತಿಯಿಂದ ಕೂಡಿದ ಮಹಾವಿಷ್ಣುವಿಗೆ ಸಮಾನರಾದವರು ಯಾರೆಂಬುದನ್ನು ಪ್ರತಿವಾದಿಗಳೇ ಹೇಳಲಿ.

**ಯುಧಿಷ್ಠಿರಸ್ಯ ಯೋ ಯಾತ್ರಾಂ ಕುರುತೇ ಸ್ತೌತಿ ವಂದತೇ || ೨೪೩ ||**

**ಸ ಕೃಷ್ಣಃ ತಸ್ಯ ಕಿಂ ದಾಸೋ ವದಂತಿ ಪ್ರತಿವಾದಿನಃ |**
**ಯದೀಯಂ ಮರ್ತ್ಯಲೋಕೇಽಸ್ಮಿನ್ ಲೀಲಾಮಾನುಷವದ್ಧರೇಃ || ೨೪೪ ||**

**ತದಾ ಲೀಲಾ ಕುತೋ ನಾನ್ಯದ್ವದಂತು ಪ್ರತಿವಾದಿನಃ |**

ಯಾವ ಕೃಷ್ಣಪರಮಾತ್ಮನು ಯುಧಿಷ್ಠಿರನಿಗಾಗಿ ಯಾತ್ರೆಯನ್ನು ಮಾಡಿದುದಲ್ಲದೆ ಆಗಾಗ್ಯೆ ಕೆಲವು ಸಂದರ್ಭಗಳಲ್ಲಿ ಇತರರನ್ನು ಪ್ರಶಂಸಿಸುವುದು, ನಮಸ್ಕರಿಸುವುದು ಇತ್ಯಾದಿಗಳನ್ನು "ಮರ್ತ್ಯಾವತಾರಸ್ತ್ವಿಹ ಮರ್ತ್ಯಶಿಕ್ಷಣಂ" ಎಂಬಂತೆ ಮಾನವಲೋಕದಲ್ಲಿ ಮಾನವನಂತೆ ಆಚಾರವ್ಯವಹಾರಗಳನ್ನು ನಡೆಸುತ್ತಿರುವುದು. ಇದೆಲ್ಲಾ "ಲೀಲಾ" ಕ್ರೀಡೆಯ ರೂಪವಾದುದೇ ಹೊರತು ಬೇರೆ ಯಾವುದಕ್ಕೂ ಅಲ್ಲವೆಂಬುದನ್ನು ಹಿಂದಿನ ಎಲ್ಲ ಬಗೆಯಾದ ಸರ್ವೋತ್ತಮನಾದ ಶ್ರೀಹರಿಯ ಅಚಿಂತ್ಯ ಶಕ್ತಿಯನ್ನು ಮನಗಂಡ ಪ್ರತಿವಾದಿಗಳೇ ಹೇಳಲಿ.

ಗೋಪೀಭಿಸ್ತೋಭಿತೋ ನೃತ್ಯನ್ ಭಗವಾನ್ ಬಾಲವತ್ ಕ್ವಚಿತ್ ॥೨೪೫॥

ಉದ್ಗಾಯತಿ ಕ್ವಚಿತ್ ಮುಗ್ಧಃ ತದ್ವಶೋ ದಾರುಯಂತ್ರವತ್ ।
ಬಿಭರ್ತಿ ಕ್ವಚಿದಾಜ್ಞಪ್ತಃ ಪೀಠಕೋನ್ಮಾನಪಾದುಕಾನ್ ॥ ೨೪೬ ॥

ಬಾಹುಕ್ಷೇಪಂ ಚ ಕುರುತೇ ಗೋಪೀನಾಂ ಪ್ರೀತಿಮಾವಹನ್ ।
ದರ್ಶಯನ್ ತದ್ವಿದಾಂ ಲೋಕ ಆತ್ಮನೋ ಭಕ್ತವಶ್ಯತಾಮ್ ॥ ೨೪೭ ॥

ವ್ರಜಸ್ಯೋದ್ವಾಹಯನ್ ಹರ್ಷಂ ಭಗವಾನ್ ಬಾಲಚೇಷ್ಟಿತೈಃ ।
ಇತಿ ಭಾಗವತೇ ಬಾಲಲೀಲಾಃ ಪಶ್ಯ ರಮಾಪತೇಃ ॥ ೨೪೮ ॥

ಶ್ರೀಕೃಷ್ಣಪರಮಾತ್ಮನು ಬಾಲಕನಂತೆ ಕೆಲವು ಸಂದರ್ಭದಲ್ಲಿ ಗೋಪಾಂಗನೆಯರಿಂದ ತಡೆಯಲ್ಪಟ್ಟವನಂತೆಯೂ ಅವರೊಡನೆ ನರ್ತನಮಾಡತಕ್ಕವನಾಗಿಯೂ ಕೆಲವುವೇಳೆ ಮೋಹಗೊಂಡವನಂತೆಯೂ, ಮರದ ಬೊಂಬೆಯಂತೆ ಅವರಿಗೆ ಪೂರ್ತಿಯಾಗಿ ವಶನಾದಂತೆಯೂ, ಒಂದಾವರ್ತಿ ಗಾನಮಾಡುವವನಾಗಿಯೂ, ಮತ್ತೊಂದು ಸಲ ಅವರಿಂದ ಅಜ್ಞೆಯನ್ನು ಪಡೆದು ಅವರನ್ನು ಧರಿಸುವನಾಗಿಯೂ, ಅವರ ಪೀಠೋಪಕರಣಗಳನ್ನೂ ಪಾದುಕೆಗಳನ್ನೂ ಹೊರುವವನಾಗಿಯೂ, ಗೋಕುಲವಾಸಿಗಳಿಗೆ ತನ್ನ ಬಾಲಚೇಷ್ಟೆಗಳಿಂದ ಆನಂದವನ್ನು ಉಂಟುಮಾಡುವವನಾಗಿಯೂ, ಬಾಲಲೀಲೆಯನ್ನು ತೋರಿಸಿದ್ದಾನೆ. ಇಂತಹ ಬಾಲಲೀಲೆಯನ್ನು ತೋರಿಸಿರುವುದಲ್ಲದೆ ಕ್ರೀಡೆಗಾಗಿ ಗೋಪಾಂಗನೆಯರಿಗೆ ಪ್ರೀತಿಯನ್ನು ತೋರಿಸುವುದಕ್ಕಾಗಿ ತನ್ನ ತೋಳನ್ನು ಗೋಪಸ್ತ್ರೀಯರ ಹೆಗಲಮೇಲೆಹಾಕಿ ಆಲಂಗಿಸುತ್ತಾನೆ. ಇಂತಹ ನಾನಾಬಗೆಯಾದ ಚೇಷ್ಟೆಗಳಿಂದ ತಾನು ಭಕ್ತಪರಾಧೀನನೆಂಬುದಾಗಿ ಪ್ರಪಂಚಕ್ಕೆ ವ್ಯಕ್ತಪಡಿಸುತ್ತಾನೆ. ಇಂತಹ ನಮ್ಮ ರಮಾಪತಿಯ ವಿಚಿತ್ರ ವ್ಯಾಪಾರವು ಶ್ರೀಮದ್ಭಾಗವತದ ದಶಮಸ್ಕಂಧದಲ್ಲಿ ಕಂಡುಬರುತ್ತದೆ. ಪ್ರತಿವಾದಿಯು ಇದನ್ನು ನೋಡಲಿ.

ಯೋ ಗೋಪೀನಾಂ ಸ್ವಭಕ್ತಾನಾಂ ಪಾದುಕಾಂ ಚ ಸ್ವಮೂರ್ಧನಿ ।
ಧತ್ತೇ ವಿಧತ್ತೇ ಚ ವಿಭುಃ ತದುಕ್ತಮಖಿಲಂ ಕಿಲ ॥ ೨೪೯ ॥

ಏತಾವತಾಸ್ಯ ಕಿಂ ನೈಚ್ಯಂ ವದಂತು ಪ್ರತಿವಾದಿನಃ ।
ಇತ್ಥಂ ಲೀಲಾ ಬಹುವಿಧಾಃ ಕುರ್ವತೋ ಜಗದೀಶಿತುಃ ॥ ೨೫೦ ॥

ಯಾವ ಶ್ರೀಕೃಷ್ಣಪರಮಾತ್ಮನು ತನ್ನ ಭಕ್ತರಾದ ಗೋಪಾಂಗನೆಯ ಪಾದುಕೆಗಳನ್ನು ತನ್ನ ತಲೆಯಮೇಲೆ ಧರಿಸುತ್ತಾನೆ. ಆ ಗೋಪಿಸ್ತ್ರೀಯರು ಏನೇನನ್ನು ಹೇಳುತ್ತಾರೋ ಅದೆಲ್ಲವನ್ನೂ ಮಾಡುತ್ತಾನೆ. ಹೀಗೆ ಮನುಷ್ಯರಂತೆ ಬಹುವಿಧವಾದ ಲೀಲೆಗಾಗಿ ನಟಿಸುತ್ತಿರುವುದರಿಂದ ನಮ್ಮ ಶ್ರೀಕೃಷ್ಣಪ್ರಭುವಿಗೆ ನೀಚತೆಯು ಉಂಟಾಗುತ್ತದೇನು ?—ಪ್ರತಿವಾದಿಗಳೇ ಹೇಳಲಿ.

**ಲೀಲಾಮಧ್ಯಗತಂ ಮಾತೃಪಿತೃದೇವರ್ಷಿಪೂಜನಮ್**
**ಸಂಧ್ಯಾವಂದನನಿದ್ರಾದಿಲೋಕಪಾಲಾಭಿವಂದನಮ್ ॥ ೨೫೧ ॥**

**ಕಥಂ ಲೀಲೈವ ನ ಭವೇತ್ ವದಂತು ಪ್ರತಿವಾದಿನಃ ।**

ಹೀಗೆ ಅನೇಕ ಬಗೆಯಾದ ಲೀಲೆಗಳನ್ನು ಕ್ರೀಡೆಗಳನ್ನು ಮಾನವನಂತೆ ನಟಿಸುತ್ತಲಿರುವ ಜಗನ್ನಿಯಾಮಕನಾದ ಶ್ರೀಕೃಷ್ಣಪರಮಾತ್ಮನು ತಾನು ಸರ್ವೋತ್ತಮ ದೇವತೆಯಾದರೂ ಸಹ ತಾರತಮ್ಯದಲ್ಲಿ ತನಗಿಂತಲೂ ಕಡಮೆ ವರ್ಗಕ್ಕೆ ಸೇರಿದವರಾದರೂ "ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ" ಎಂಬಂತೆ ಲೋಕಾಚಾರ, ಸದಾಚಾರಾದಿಗಳನ್ನು ಜನತೆಯ ಶಿಕ್ಷಣಕ್ಕಾಗಿ ತಾನು ಮಾಡಿ ತೋರಿಸುವ ಸಲುವಾಗಿ ತಾಯಿಯಾದ ದೇವಕೀದೇವಿಗೆ ನಮಸ್ಕಾರ ಮಾಡಿದ್ದಾನೆ. ತಂದೆಯಾದ ವಸುದೇವನಿಗೆ ನಮಸ್ಕರಿಸಿದ್ದಾನೆ. ಗುರುಗಳನ್ನಾಗಿ ಸಾಂದೀಪನೀ ಆಚಾರ್ಯರನ್ನು ಇಟ್ಟುಕೊಂಡು ಅವರಿಗೂ ನಮಸ್ಕಾರ ಮಾಡಿದ್ದಾನೆ. ಸಂಧ್ಯಾವಂದನೆ ಮಾಡಿದ್ದಾನೆ. ತಾನೇ ಸರ್ವಶ್ರೇಷ್ಠ ದೇವತೆಯಾದರೂ ಇತರರ ಶಿಕ್ಷಣಕ್ಕಾಗಿ ದೇವತೆ ಪೂಜೆಯನ್ನೂ ಆಚರಿಸಿದ್ದಾನೆ. ಸರ್ವಸಾಕ್ಷಿಯಾಗಿ, ಅಪ್ರಾಕೃತವಿಗ್ರಹವುಳ್ಳವನಾಗಿ ಸದಾ ಜಾಗ್ರತನಾಗಿರುವುದಾದರೂ, ನಿದ್ರೆಮಾಡಿದಂತೆ ನಟಿಸಿದ್ದಾನೆ. ಪ್ರಾಕೃತಮಾನವ ವಿಲಕ್ಷಣನಾದರೂ ಪ್ರಾಕೃತಮಾನವನಂತೆ ಹಸಿವು ಬಾಯಾರಿಕೆಗಳನ್ನು ತೋರಿಸಿದ್ದಾನೆ. ಲೋಕನಿಯಾಮಕನಾದರೂ ಲೋಕಪಾಲರನ್ನು ವಂದಿಸಿರುತ್ತಾನೆ. ಸರ್ವೋತ್ತಮನಾದ ಜ್ಞಾನಾನಂದಮಯನಾದ ಪ್ರಭುವಿನ ಈ ವ್ಯಾಪಾರವೆಲ್ಲಾ ಕೇವಲ ಲೀಲೆಯಲ್ಲವೇನು ? ಪ್ರತಿವಾದಿಗಳೇ ಹೇಳಲಿ.

**ಗೋಪೀನಾಂ ಪಾದುಕಾಧಾರೀ ಕಂ ಕಂ ನಾರಾಧಯೇತ್ ಹರಿಃ ॥ ೨೫೨ ॥**

**ಲೀಲೇದಂ ಚೇತ್ ಕಥಂ ನಾನ್ಯತ್ ವದಂತು ಪ್ರತಿವಾದಿನಃ ।**

ಆಟಕ್ಕಾಗಿ, ವಿನೋದಕ್ಕಾಗಿ, ಗೋಪಸ್ತ್ರೀಯ ಪಾದುಕೆಗಳನ್ನೇ ಹೊತ್ತಿರುವ ಶ್ರೀಕೃಷ್ಣಪರಮಾತ್ಮನು ಮತ್ತೆ ಯಾರು ಯಾರನ್ನು ಆರಾಧಿಸುವುದಿಲ್ಲ? ಆಟಕ್ಕಾಗಿ ನಮಸ್ಕರಿಸುವುದಿಲ್ಲ? ಪ್ರತಿವಾದಿಗಳೇ ಹೇಳಲಿ.

**ಅವತಾರೇ ಪಿತೄನ್ ದೇವಾನ್ ಋಷೀನ್**
**ಚಾಭ್ಯರ್ಚಯನ್ ಹರಿಃ ॥ ೨೫೩ ॥**

**ಮೂಲರೂಪೀ ರಮಾಹಸ್ತಲಾಲಿತಾಂಘ್ರಿಸರೋರುಹಃ ।**
**ಶ್ವೇತದ್ವೀಪೇ ದಿವ್ಯರತ್ನಮಂಟಪೇ ಸುರಸೇವಿತೇ ॥ ೨೫೪ ॥**
**ಶೇಷಭೋಗಾಖ್ಯಶಯನಶಾಲೀ ನಾರಾಯಣಃ ಪ್ರಭುಃ ।**
**ಚಕಾರ ಕಸ್ಯ ವಾ ಪೂಜಾಂ ವದಂತು ಪ್ರತಿವಾದಿನಃ ॥ ೨೫೫ ॥**

ಅವತಾರಕಾಲದಲ್ಲಿ ಅಂದರೆ ಶ್ರೀ ರಾಮಾವತಾರಕಾಲದಲ್ಲಿ ಮತ್ತು ಶ್ರೀಕೃಷ್ಣಾವತಾರದಲ್ಲಿ ತಂದೆತಾಯಿಗಳನ್ನೂ, ದೇವತೆಗಳನ್ನೂ, ಋಷಿಗಳನ್ನೂ ಪೂಜಿಸಿದ ಶ್ರೀಹರಿಯು ಮೂಲರೂಪದಿಂದ ಶ್ವೇತದ್ವೀಪದಲ್ಲಿ ಸಕಲ ದೇವತೆಗಳಿಂದಲೂ ಸೇವಿತನಾಗಿ ಶೇಷಶಾಯಿಯಾಗಿ ದಿವ್ಯರತ್ನಮಯ ಮಂಟಪದಲ್ಲಿ ಮಹಾಲಕ್ಷ್ಮಿಯ ಕೈಗಳಿಂದ ಸೇವಿಸಲ್ಪಟ್ಟ ಪಾದಾರವಿಂದವುಳ್ಳವನಾಗಿರುವ ಶ್ರೀಮನ್ಮೂಲನಾರಾಯಣನು ಯಾರಿಗೆ ತಾನೆ ಪೂಜೆಯನ್ನು ಮಾಡುತ್ತಾನೆ? ಅವನೇ ಸರ್ವೋತ್ತಮನಾದುದರಿಂದ ಮತ್ತೊಬ್ಬರಿಗೆ ಅವತಾರಕಾಲದಲ್ಲಿ ಅವನು ಮಾಡತಕ್ಕದ್ದೆಲ್ಲವೂ ಕೇವಲ ಲೀಲೆಯು ಅಥವಾ ದೈತ್ಯರ ಮೋಹನಕ್ಕಾಗಿಯೇ ಹೊರತು ಬೇರೆ ಯಾವ ರೀತಿಯೂ ಕೂಡುವುದಿಲ್ಲ. ಇದನ್ನು ಪ್ರತಿವಾದಿಗಳೇ ಒಪ್ಪಬೇಕು. ಇದಕ್ಕೆ ಪ್ರತಿಯಾಗಿ ಪ್ರತಿವಾದಿಗಳು ಏನನ್ನು ಹೇಳುತ್ತಾರೆ?

**ಇಂದ್ರಾದಯೋ ಲೋಕಪಾಲಾ ವಿರಿಂಚಭವಸಂಯುತಾಃ ।**
**ಸಗಣಾಸ್ಸಿದ್ಧಗಂಧರ್ವಾ ವಿದ್ಯಾಧರಮಹೋರಗಾಃ ॥ ೨೫೬ ॥**
**ಮುನಯೋ ಯಕ್ಷರಕ್ಷಾಂಸಿ ಖಗಾಃ ಕಿನ್ನರಚಾರಣಾಃ ।**
**ರಾಜಾನಶ್ಚ ಸಮಾಹೂತಾಃ ರಾಜಪತ್ನ್ಯಶ್ಚ ಸರ್ವಶಃ ॥ ೨೫೭ ॥**
**ರಾಜಸೂಯಂ ಸಮೀಯುರ್ಹಿ ರಾಜ್ಞಃ ಪಾಂಡುಸುತಸ್ಯ ವೈ ।**
**ಇತಿ ಶ್ರೀಮದ್ಭಾಗವತೇ ಸ್ತುತೇ ಧರ್ಮಸುತಕ್ರತೌ ॥ ೨೫೮ ॥**

ಅರ್ಹತಿ ಹ್ಯಚ್ಯುತಃ ಶ್ರೈಷ್ಠ್ಯಂ ಭಗವಾನ್ ಸಾತ್ವತಾಂ ಪತಿಃ ।
ತಸ್ಮಾತ್ ಕೃಷ್ಣಾಯ ಮಹತೇ ದೀಯತಾಂ ಪರಮಾರ್ಹಣಮ್ ॥ ೨೫೯ ॥

ಇತಿ ತತ್ರೈವ ಸದಸಿ ಸಹದೇವೇನ ಸಂಸ್ತುತಃ ।
ಜಗ್ರಾಹ ಯೋ ಹ್ಯಗ್ರಪೂಜಾಂ ಕೃಷ್ಣೋ ದೇವರ್ಷಿಸನ್ನಿಧೌ ॥ ೨೬೦ ॥

ಸ ಸರ್ವೇಶೋ ನ ಕಿಂ ಸರ್ವೇ ವದಂತು ಪ್ರತಿವಾದಿನಃ ।

ಬ್ರಹ್ಮ, ರುದ್ರ, ಇಂದ್ರಾದಿಗಳನ್ನೊಳಗೊಂಡ ಲೋಕಪಾಲಕರಾದ ದೇವತೆಗಳೂ, ಗುಂಪುಗುಂಪಾದ ಸಿದ್ಧರೇನು, ಸಾಧ್ಯರೇನು, ಗಂಧರ್ವರೇನು, ವಿದ್ಯಾಧರರೇನು, ಮಹಾನಾಗಗಳೇನು, ಮುನಿಗಳೇನು, ಯಕ್ಷರೇನು, ರಾಕ್ಷಸರೇನು, ಪಕ್ಷಿಗಳೇನು, ಕಿನ್ನರರೇನು, ಚಾರಣರೇನು, ರಾಜರುಗಳೇನು, ರಾಜಪತ್ನಿಯರೇನು, ಇವರೆಲ್ಲಾ ಪಾಂಡುರಾಜನ ಮಗನಾದ ಧರ್ಮರಾಯನು ತನ್ನ ತಮ್ಮಂದಿರಾದ ಭೀಮಾರ್ಜುನಾದಿಗಳ ಸಹಿತವಾಗಿ ಆಚರಿಸಿದ ಅತಿ ವೈಭವಯುತವಾದ ರಾಜಸೂಯ ಯಾಗದಲ್ಲಿ ಸಕಲರ ತೀರ್ಮಾನದಂತೆ ಅಗ್ರಪೂಜೆಯನ್ನು ಎಲ್ಲರಿಂದಲೂ ಸ್ತುತನಾಗಿ ಶ್ರೀಕೃಷ್ಣಪರಮಾತ್ಮನು ಸಕಲದೇವರ್ಷಿಗಳ ಸನ್ನಿಧಾನದಲ್ಲಿ ಸ್ವೀಕರಿಸಿದ್ದಾನೆ. ಇಂತಹ ಸರ್ವೋತ್ತಮನಾದ ಶ್ರೀಕೃಷ್ಣನು ಸರ್ವರಿಗೂ ಈಶನಲ್ಲವೆ? ಎಲ್ಲಾ ಪ್ರತಿವಾದಿಗಳೂ ಇದಕ್ಕೆ ತಕ್ಕ ಉತ್ತರವನ್ನೀಯಲಿ.

ಮುಂದಿನ ಶ್ಲೋಕವು ಶ್ರೀಮದ್ಭಾಗವತದಲ್ಲಿ ಶ್ರೀಕೃಷ್ಣನ ಶ್ರೈಷ್ಠ್ಯವನ್ನು ತೋರಿಸಲು ಉದಾಹೃತವಾಗಿದೆ.

ವಯಂ ನ ತಾತ ಪ್ರಭವಾಮ ಭೂಮ್ನೋ
ಭವಂತಿ ಕಾಲೇ ನ ಭವಂತಿ ಹೀದೃಶಾಃ ।
ಯಸ್ಮಿನ್ ಪರೇಽನ್ಯೇಽಪ್ಯಜಜೀವಕೋಶಾಃ
ಸಹಸ್ರಶೋ ಯತ್ರ ವಯಂ ಭ್ರಮಾಮಃ ॥ ೨೬೧ ॥

ಇಯಂ ಭಾಗವತೇ ಸ್ಕಂಧೇ ನವಮೇ ವಾಗುಮಾಪತೇಃ ।
ಹರಿಚಕ್ರಾತ್ ಭೀತಚೇತಾಃ ಸುತಂ ದುರ್ವಾಸಸಂ ಪ್ರತಿ
ವಯಂ ತವ ಭಯಂ ಹರ್ತುಂ ತಾತ ನ ಪ್ರಭವಾಮಹೇ ॥ ೨೬೨ ॥

ಅಂಬರೀಷ ಮಹಾರಾಜನ ಕಥೆಯು ಶ್ರೀಮದ್ಭಾಗವತದ ಒಂಭತ್ತನೆಯ ಸ್ಕಂಧದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಬಂದಿದೆ. ಭಗವಂತನಲ್ಲಿ ಅಚಲವಾದ ಭಕ್ತಿಯನ್ನುಳ್ಳ ಅಂಬರೀಷನು ಧರ್ಮದಿಂದ ರಾಜ್ಯವನ್ನಾಳುತ್ತಿದ್ದನು. ಪರಮ ವೈರಾಗ್ಯಶಾಲಿಯಾಗಿ ಕೇವಲ ಪರಮಾತ್ಮನ ಪಾದಾರವಿಂದದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿದ್ದನು.

ಏಕಾದಶ್ಯಾದಿ ಹರಿದಿವಸದ ಆಚರಣೆಯಲ್ಲಿ ಬಹಳ ಶ್ರದ್ಧೆಯುಳ್ಳವನಾಗಿದ್ದನು. ಹೀಗಿರುವಲ್ಲಿ ಒಂದುಸಲ ಸಾಧನದ್ವಾದಶೀದಿನ ಅಂಬರೀಷನ ಅತಿಥಿಯಾಗಿ ದುರ್ವಾಸರು ಬಂದೊದಗಿದರು. ದ್ವಾದಶೀದಿನ ಅರ್ಧ ಮುಹೂರ್ತ ಮಾತ್ರ ಬಾಕಿ ಇದ್ದಿತು. ಸಾಧನದ್ವಾದಶೀ ಆಗಿದ್ದಿತು. ಅಂದು ಅತಿಥಿಯಾಗಿ ಬಂದಿದ್ದ ದುರ್ವಾಸರು ಯಮುನಾ ನದಿಗೆ ಸ್ನಾನಕ್ಕಾಗಿ ಹೋಗಿದ್ದವರು ಸಕಾಲಕ್ಕೆ ಬಾರದಿರಲು, ಸಾಧನದ್ವಾದಶೀ ಆದುದರಿಂದ ಅಂಬರೀಷ ಮಹಾರಾಜನು ಧರ್ಮಸಂಕಟಕ್ಕೆ ಸಿಕ್ಕಿದಂತಾದನು. ಅತಿಥಿಯಾಗಿ ಬಂದಿದ್ದ ಬ್ರಾಹ್ಮಣರಾದ ದುರ್ವಾಸರನ್ನು ಅತಿಕ್ರಮಿಸಿ ಪಾರಣೆ ಮಾಡಬಾರದು. ಸಾಧನದ್ವಾದಶೀ ಆದ ಪ್ರಯುಕ್ತ ಪಾರಣೆ ಮಾಡದೆ ಇರಲೂಬಾರದು. ಹೀಗಾಗಿ ತುಂಬಾ ಮನನೊಂದು ಕಡೆಗೆ, ನೀರಿನಿಂದಲಾದರೂ ಪಾರಣೆಮಾಡಿ ಸಾಧನದ್ವಾದಶೀವ್ರತ ಧರ್ಮವನ್ನು ಸಾಧಿಸಿಬಿಡೋಣವೆಂದು ನೀರಿನಿಂದಲೇ ಪಾರಣೆಯನ್ನು ಮುಗಿಸಿಬಿಟ್ಟನು. ಆದರೂ ಆತಂಕದಿಂದ ಮನಸ್ಸಿನಿಂದಲೇ ಶ್ರೀಹರಿಯನ್ನು ಚಿಂತಿಸುತ್ತಿದ್ದನು. ದುರ್ವಾಸರ ಆಗಮನವನ್ನೇ ಕಾಯುತ್ತಿದ್ದನು. ಸಾಧನದ್ವಾದಶೀ ಕಾಲಾತಿಕ್ರಮಮಾಡಿಕೊಂಡು ಯಮುನಾನದೀ ಸ್ನಾನಾನಂತರದಲ್ಲಿ ದುರ್ವಾಸಮಹರ್ಷಿಯು ಬಂದು ರಾಜನ ಪಾರಣೆಯನ್ನು ಜ್ಞಾನದೃಷ್ಟಿಯಿಂದ ಅರಿತು, ಹುಬ್ಬುಗಟ್ಟಿಕ್ಕಿಕೊಂಡು ಕೋಪಾವೇಶದಿಂದ, ಅತಿಥಿಯಾಗಿ ಬಂದ ನನ್ನನ್ನು ಅತಿಕ್ರಮಿಸಿ ಪಾರಣೆ ಮಾಡಿದ್ದಿ. ನೀನು ಐಶ್ವರ್ಯಮತ್ತ ಇತ್ಯಾದಿಯಾಗಿ ಧಿಕ್ಕರಿಸುತ್ತಾ, ತನ್ನ ಜಟೆಯನ್ನು ಕಿತ್ತುಹಾಕಿದಾಗ ಪ್ರಳಯಾಗ್ನಿಯಂತೆ ಪ್ರಜ್ವಲಿಸುತ್ತಲಿದ್ದ ಕತ್ತಿಯನ್ನು ಹಿಡಿದ ಶಕ್ತಿಯು ಪ್ರಾದುರ್ಭವಿಸಿದಳು. ರಾಜನಾದರೋ ಅದನ್ನು ಕಂಡು ಭಯಭ್ರಾಂತನಾಗಿ ನಡುಗಿದನು. ಅಷ್ಟರಲ್ಲಿ ಪರಮಭಕ್ತನಾದ ಅಂಬರೀಷನಿಗೆ ಹಿಂದೆಯೇ ಶತ್ರುಪೀಡಾಪರಿಹಾರಕವಾಗಿ ಶ್ರೀಹರಿಯು ಚಕ್ರಾಯುಧವೊಂದನ್ನು ಅನುಗ್ರಹಿಸಿದ್ದನು. ಆ ಚಕ್ರವು ದುರ್ವಾಸನಿರ್ಮಿತವಾದ ಶಕ್ತಿಯನ್ನು ಸುಟ್ಟು

ಬೂದಿಮಾಡಿದ್ದು ಮಾತ್ರವಲ್ಲದೆ ದುರ್ವಾಸರನ್ನು ಹಿಂಬಾಲಿಸಿತು. ಅದರ ಭಯದಿಂದ ದುರ್ವಾಸನು ಓಡಿದನು. ಆದರೆ ಚಕ್ರವು ಬಿಡದೇ ಇವನ ಹಿಂದೆಯೇ ಬರತೊಡಗಿತು. ಸತ್ಯಲೋಕಕ್ಕೆ ಬ್ರಹ್ಮನಲ್ಲಿ ರಕ್ಷಣೆಗಾಗಿ ಹೋದನು. ಶ್ರೀಹರಿಯ ಮಹಿಮೆಯನ್ನು ಬ್ರಹ್ಮನು ದುರ್ವಾಸನಿಗೆ ತಿಳಿಸಿ ತನ್ನಿಂದ ರಕ್ಷಣೆಯು ಆಗಲಾರದೆಂದು ತಿರಸ್ಕರಿಸಿದನು. ಆಗ ದುರ್ವಾಸಮಹರ್ಷಿಯು ಹರನಲ್ಲಿಗೆ ರಕ್ಷಣೆಗಾಗಿ ಹೋದನು.

ಆಗ ರುದ್ರನು "ವಯಂ ನ ತಾತ" ಇತ್ಯಾದಿಯಾಗಿ, ಹೇಳಿದ ಕಥಾಭಾಗವು ಶ್ರೀಮದ್ಭಾಗವತದ ಒಂಭತ್ತನೇ ಸ್ಕಂಧದಲ್ಲಿ ಬಂದಿದೆ.

"ಎಲೈ ದುರ್ವಾಸನೇ, ದೇವತೆಗಳಾದ ನಾವೆಲ್ಲಾ ಶ್ರೀಹರಿಯ ದಾಸಾನುದಾಸರು. ಆ ಶ್ರೀಹರಿಯ ಮಹಿಮೆಯನ್ನು ಪೂರ್ತಿಯಾಗಿ ನಾವಾರೂ ಕಂಡಿಲ್ಲ. ನನ್ನಿಂದಲೂ ಶ್ರೀಹರಿಯ ಚಕ್ರಾಯುಧದಿಂದ ನಿನ್ನನ್ನು ರಕ್ಷಿಸಲು ಸಾಧ್ಯವಿಲ್ಲ" ಎಂದು ತಿಳಿಸಿಬಿಟ್ಟನು. ಆಗ ಆ ಮಹರ್ಷಿಯು ಬೇರೆ ಗತಿಕಾಣದೇ ಶ್ರೀಹರಿಯ ಸನ್ನಿಧಾನ ವಿಶೇಷದಿಂದ ಮಾಡಿದ ವೈಕುಂಠಕ್ಕೇನೆ ಚಕ್ರದಿಂದ ರಕ್ಷಣೆಗಾಗಿ ಹೋದನು. ಭಕ್ತಪರಾಧೀನನಾದ ಶ್ರೀಹರಿಯು ಭಕ್ತರ ಮಹಿಮೆಯನ್ನು ತಿಳಿಸಲಿಕ್ಕಾಗಿ ಅಂಬರೀಷನಲ್ಲಿಗೆ ಹೋಗಿ ಕ್ಷಮಾಪಣೆಯನ್ನು ಕೇಳುವಂತೆ ದುರ್ವಾಸನಿಗೆ ಹೇಳಿದನು.

ಸ್ವಸುತೇಽಸ್ಮಿನ್ನತಿಸ್ನೇಹಾತ್ ತಾತೇತ್ಯಾಹ ತ್ರಿಲೋಚನಃ ।
ಯತೋ ಭೂಮ್ನಃ ಸರ್ವಗುಣೈಃ ಪೂರ್ಣಾತ್
ನಾರಾಯಣಾತ್ ಪ್ರಭೋಃ ॥ ೨೬೩ ॥

ಈದೃಶಾ ಯೇ ಮತ್ಸದೃಶಾಃ ಸುರಾ ಬ್ರಹ್ಮಪುರಸ್ಸರಾಃ ।
ಸೃಷ್ಟಿಕಾಲೇ ತು ಸಂಪ್ರಾಪ್ತೇ ಭವಂತ್ಯದ್ಭುತಕರ್ಮಣಃ ॥ ೨೬೪ ॥

ತಥಾ ಸಂಹೃತಿಕಾಲೇ ತು ನ ಭವಂತ್ಯಸ್ಯ ಲೀಲಯಾ ।
ಮೃತಾಃ ಸಂತ್ರಸ್ತದುದರಂ ಪ್ರವಿಶ್ಯ ಕಿಲ ಶೇರತೇ ॥ ೨೬೫ ॥

ಇದಂ ತು ನಾದ್ಭುತಂ ತಾತ ಅಸ್ಮತ್ತೋಽನ್ಯೇಽಪಿ ಸಹಸ್ರಶಃ ।
ಅಜಸ್ಯ ಬ್ರಹ್ಮಣೋ ಜೀವಕೋಶಾಃ ಬ್ರಹ್ಮಾಂಡರಾಶಯಃ ॥ ೨೬೬ ॥

ಯಥಾ ಧನಂ ಕೋಶಗೃಹೇ ರಕ್ಷತ್ಯೇವಂ ಮಹಾಪ್ರಭುಃ ।
ಸ್ಥಿತಾನ್ ಸತ್ತ್ವಾನ್ ಜೀವಗಣಾನ್ ಅಂಡಾಂತಃ ಕಿಲ ರಕ್ಷತಿ ॥ ೨೬೭ ॥

ತಸ್ಮಾದೇತೇ ಜೀವಕೋಶಾ ಇತ್ಯುಚ್ಯಂತೇ ವಿವೇಕಿಭಿಃ ।
ಅಜಸ್ಯ ತೇಷು ಪ್ರಾಧಾನ್ಯಾತ್ ಉಚ್ಯಂತೇ ತೇ ತದೀಯಕಾಃ ॥ ೨೬೮ ॥

ಸೃಷ್ಟಿಕಾಲೇ ಭವಂತ್ಯೇತೇ ಲಯೇ ತು ನ ಭವಂತಿ ಚ ।
ಕಲ್ಪೇಕಲ್ಪೇ ತು ಸೃಷ್ಟತ್ವಾತ್ ಸಹಸ್ರಶ ಇತೀರಿತಮ್ ॥ ೨೬೯ ॥

ಯತ್ರ ಯೇಷು ವಯಂ ಸರ್ವೇ ಭ್ರಮಾಮಃ ಸ್ವಸ್ವಕರ್ಮಣಾ ।
ಈದೃಕ್ ಬ್ರಹ್ಮಾಂಡಕೋಟೀನಾಂ ಕರ್ತುಃ ಸಂಹರ್ತುರೀಶಿತುಃ ॥ ೨೭೦ ॥

ತದಂತಸ್ಥಾಸ್ಮದಾದೀನಾಂ ಸೃಷ್ಟ್ವಾ ನಷ್ಟ್ವಾ ಚ ಕಾ ಕಥಾ ।
ಈದೃಶಶ್ಚ ಹರೇಶ್ಚಕ್ರಂ ಕೋ ವಾ ದೇವೋ ನಿವಾರಯೇತ್ ॥ ೨೭೧ ॥

ಅತಸ್ತಮೇವ ಶರಣಂ ಯಾಹೀತ್ಯಾಹ ಕಿಲೇಶ್ವರಃ ।
ಏವಂ ಚ ಹರಿಣಾ ಸಾಮ್ಯಮೈಕ್ಯಮಾಧಿಕ್ಯಮೇವ ವಾ ॥ ೨೭೨ ॥

ಕಸ್ಯ ವಾ ಸ್ಯಾತ್ ಅಜಾಂಡಾನ್ತರ್ವದಂತು ಪ್ರತಿವಾದಿನಃ ।

ದುರ್ವಾಸನು ರುದ್ರನ ಅಂಶಾವತಾರನೇ ಆಗಿರುವುದರಿಂದ ರುದ್ರನು ತನ್ನ ಮಗನಾದ ಆ ಮಹರ್ಷಿಯನ್ನು ಕುರಿತು ಅತಿ ಸ್ನೇಹದಿಂದ 'ತಾತ' ಎಂದು ಸಂಬೋಧಿಸಿರುತ್ತಾನೆ. ಆ ಹರಿಯಾದರೋ ದೇಶದಿಂದಲೂ, ಕಾಲದಿಂದಲೂ ಮತ್ತು ಗುಣಗಳಿಂದಲೂ ಪೂರ್ಣನೇ ಆಗಿರುತ್ತಾನೆ. ಅವನು ಸರ್ವರಿಗೂ ಸ್ವಾಮಿ, ಅವನ ಸೃಷ್ಟ್ಯಾದಿವ್ಯಾಪಾರಗಳು ಆಶ್ಚರ್ಯಕರಗಳಾಗಿವೆ. ಅತಿವೈಭವದಿಂದ ಕೂಡಿವೆ. ಆ ಪರಮಾತ್ಮನ ವ್ಯಾಪಾರಗಳ ಆಳನೀಳವನ್ನು ಯಾರೂ ಬಲ್ಲವರಿಲ್ಲ. ಸೃಷ್ಟಿಕಾಲದಲ್ಲಿ ಬ್ರಹ್ಮಾದಿದೇವತೆಗಳೆಲ್ಲಾ ಆ ಅದ್ಭುತ ವ್ಯಾಪಾರವನ್ನುಳ್ಳ ಪರಮಾತ್ಮನಿಂದ ಸೃಷ್ಟಿಸಲ್ಪಡುತ್ತೇವೆ. ಸಂಹಾರಕಾಲದಲ್ಲಿ ಎಲ್ಲರೂ ಮೃತರಾಗಿ ಅವನ ಉದರವನ್ನು ಪ್ರವೇಶಿಸುತ್ತೇವೆ. ಈ ಸೃಷ್ಟಿಸಂಹಾರಾದಿ ವ್ಯಾಪಾರಗಳಿಂದ ಪರಮಾತ್ಮನಿಗೆ ಕಿಂಚಿತ್ತಾದರೂ ಪ್ರಯೋಜನವಿಲ್ಲವಾದರೂ ಆನಂದೋದ್ರೇಕದಿಂದ

ಪ್ರವೃತ್ತಿಯು ಕಂಡುಬರುವಂತೆ, ಪರಮಾತ್ಮನ ಎಲ್ಲ ಬಗೆಯಾದ ವ್ಯಾಪಾರಗಳು ಆತನ ಲೀಲಾರೂಪವಾಗಿವೆ. ಎಲೈ ಕುಮಾರನಾದ (ತಾತ) ದುರ್ವಾಸನೇ ! ಇದು ಏನೂ ಆಶ್ಚರ್ಯವಲ್ಲ. ನಮ್ಮಂತೆಯೇ ಅನಂತ ಸಂಖ್ಯಾಕರಾದ ಜೀವರನ್ನೂ, ಅನೇಕ ಸಂಖ್ಯಾಕಗಳಾದ ಬ್ರಹ್ಮಾಂಡಗಳನ್ನೂ ಆ ಶ್ರೀಹರಿಯು ಧನಿಕನು ಧನ ಸಮುದಾಯವನ್ನೂ, ನಿಧಿನಿಕ್ಷೇಪಗಳನ್ನಿಡತಕ್ಕ ಕೋಶಗೃಹದಲ್ಲಿ ರಕ್ಷಿಸುವಂತೆ ರಕ್ಷಿಸುತ್ತಿರುತ್ತಾನೆ. ಆದುದರಿಂದಲೇ ಬ್ರಹ್ಮಾಂಡಗಳನ್ನು ಜೀವಕೋಶಗಳೆಂದು ಜ್ಞಾನಿಗಳು ಕರೆಯುತ್ತಾರೆ. ಈ ಜೀವರಲ್ಲಿ ಚತುರ್ಮುಖ ಬ್ರಹ್ಮನು ಪ್ರಧಾನ ನಾದುದರಿಂದ ಜೀವೋತ್ತಮನೆನಿಸಿರುತ್ತಾನೆ.

ಜೀವರಾದರೋ ಸೃಷ್ಟಿಕಾಲದಲ್ಲಿ ದೇಹದಿಂದ ಹುಟ್ಟುತ್ತಾರೆ. ಲಯಕಾಲದಲ್ಲಿ ಮರಣವನ್ನಪ್ಪುತ್ತಾರೆ. ಕಲ್ಪಕಲ್ಪಗಳಲ್ಲೂ ಸೃಷ್ಟಿಸಲ್ಪಡತಕ್ಕವರಾದುದರಿಂದ ಜೀವರು ಅನಂತಸಂಖ್ಯಾಕರಾದುದರಿಂದ ಸಹಸ್ರಶಃ ಎಂದು ಉಲ್ಲೇಖಿಸಲ್ಪಟ್ಟಿರುತ್ತಾರೆ.

ಅಸಂಖ್ಯಾಕಗಳಾದ ಬ್ರಹ್ಮಾಂಡಗಳಲ್ಲಿ ನಮ್ಮಂತಹವರುಗಳೆಲ್ಲಾ ವಿಧಿವಿಹಿತ ಗಳಾದ ನಮ್ಮ ನಮ್ಮ ಕರ್ಮಗಳನ್ನು ಆಚರಿಸುತ್ತಾ ಅಲೆಯುತ್ತಿರುತ್ತೇವೆ. ಇಂತಹ ಅನಂತಸಂಖ್ಯಾಕ ಜೀವರಿಗೆ ಕೋಶಗ್ರಾಹದಂತಿರುವ ಬ್ರಹ್ಮಾಂಡಗಳನ್ನು ಅದರಲ್ಲಿರುವ ನಮ್ಮಂತಹ ಜೀವರುಗಳನ್ನೂ ಸೃಷ್ಟಿಸುವುದರಿಂದಾಗಲಿ, ಅವುಗಳ ನಾಶದಿಂದಾಗಲಿ ಪರಮಾತ್ಮನಿಗೆ ಏನಾಗಬೇಕಾಗಿದೆ ? ಈ ಬಗೆಯಾದ ಸೃಷ್ಟಿ ಸಂಹಾರ ಪ್ರವಾಹವು ಪರಮಾತ್ಮನ ಇಚ್ಛೆಯಿಂದಲೇ ನಡೆಯುತ್ತಿರುವುದನ್ನು ಯಾವ ದೇವತೆಯು ತಾನೇ ತಪ್ಪಿಸಿಯಾನು ? ಯಾರಿಗೆ ತಾನೇ ಅಂತಹ ಶಕ್ತಿಯು ಇದೆ ? ಪರಮಾತ್ಮನಾದ ಶ್ರೀಹರಿಯೊಬ್ಬನೇ ಸರ್ವತಂತ್ರ ಸ್ವತಂತ್ರನು. ಮಿಕ್ಕವರೆಲ್ಲಾ ಅಸ್ವತಂತ್ರರು. ಆದ್ದರಿಂದ ಅವನ ಚಕ್ರದಿಂದ ಉಂಟಾಗಿರುವ ನಿನ್ನ ಭಯವನ್ನು ಪರಿಹರಿಸುವ ಶಕ್ತಿಯು ಮತ್ತಾರಿಗೂ ಇಲ್ಲವೇ ಇಲ್ಲ. ನನಗಂತೂ ಇಲ್ಲವೇ ಇಲ್ಲ. ಆದಕಾರಣ ಎಲೈ ದುರ್ವಾಸನೇ, ಪುತ್ರನೇ, ನೀನು ಆ ಶ್ರೀಹರಿಯನ್ನೇ ಶರಣು ಹೊಂದು ಎಂದು ರುದ್ರನು ದುರ್ವಾಸನಿಗೆ ತಿಳಿಸಿದನು.

ಆದ್ದರಿಂದ ಈ ಬ್ರಹ್ಮಾಂಡದ ಒಳಗಿರತಕ್ಕ ಯಾವ ವ್ಯಕ್ತಿಗೇ ಆಗಲಿ ಆ ಶ್ರೀಹರಿಯ ಸಾಮ್ಯವಾಗಲಿ ಅಥವಾ ಐಕ್ಯವಾಗಲಿ, ಆಧಿಕ್ಯವಾಗಲಿ ಹೇಗೆ ತಾನೇ ಉಂಟಾದೀತು. ಪ್ರತಿವಾದಿಗಳೇ ಹೇಳಲಿ.

ಏವಂ ಚ ಯಸ್ಯ ರೋಮಾಧಸ್ಥಿತಬ್ರಹ್ಮಾಂಡಕೋಣಗಾಃ ।
ಕ್ವೇಮೇ ಸುರಾಃ ಸ ವಿಷ್ಣುಃ ಕ್ವ ವದಂತು ಪ್ರತಿವಾದಿನಃ ॥ ೨೭೩ ॥

ಈ ಎಲ್ಲಾ ವಿಧವಾದ ಅನಂತ ಅಚಿಂತ್ಯ ಮಹಾಮಹಿಮನಾದ ಯಾವ ಪರಮಾತ್ಮನ ರೋಮದ ಕೆಳಗಿರುವ ಬ್ರಹ್ಮಾಂಡಕೋಣದಲ್ಲಿರುವವರಾದ ಈ ದೇವತೆಗಳೆಲ್ಲಿ! ಆ ಮಹಾಮಾಹಾತ್ಮ್ಯೆಯಿಂದ ಕೂಡಿದ ಸರ್ವೋತ್ತಮನಾದ ಶ್ರೀವಿಷ್ಣುವೆಲ್ಲಿ! ಪ್ರತಿವಾದಿಗಳೇ ಹೇಳಲಿ.

ಏತೇ ವಯಂ ಯಸ್ಯ ವಶೇ ಮಹಾತ್ಮನಃ
ಸ್ಥಿತಾಃ ಶಕುಂತಾ ಇವ ಸೂತ್ರಯಂತ್ರಿತಾಃ ।
ಮಹಾನಹಂ ವೈಕೃತತಾಮಸೇಂದ್ರಿಯೈಃ
ಸೃಜಾಮಿ ಸರ್ವಂ ಯದನುಗ್ರಹಾದಿದಮ್ ॥ ೨೭೪ ॥

ರುದ್ರನು ತಾನು ಮಾಡತಕ್ಕ ಎಲ್ಲ ಬಗೆಯಾದ ವ್ಯಾಪಾರವೂ ಸಹ ಶ್ರೀ ನಾರಾಯಣಾನುಗ್ರಹದಿಂದಲೇ ಹೊರತು ಸ್ವತಂತ್ರವಾಗಿ ಯಾವುದೂ ಸಹ ಅಲ್ಲವೆಂದು ಹೇಳುತ್ತಿದ್ದಾನೆ.

ದಾರದಿಂದ ಕಟ್ಟಲ್ಪಟ್ಟ ಪಕ್ಷಿಯಂತೆ ನಾವೆಲ್ಲಾ ಆ ಮಾಹಾತ್ಮ್ಯೆಯುಳ್ಳ ಶ್ರೀಹರಿಗೆ ಎಲ್ಲ ಬಗೆಯಿಂದಲೂ ಅಧೀನರಾಗಿರುತ್ತೇವೆ. ನಾನಾದರೋ ಆ ಪರಮಾತ್ಮನ ಇಚ್ಛೆಯಂತೆ ಅಹಂಕಾರತತ್ವಕ್ಕೆ ಅಭಿಮಾನಿಯಾಗಿದ್ದೇನೆ. ವೈಕಾರಿಕ ದೇವತೆಗಳು, ಪಂಚಭೂತದೇವತೆಗಳು, ಇಂದ್ರಿಯಾಭಿಮಾನಿ ದೇವತೆಗಳು, ಶಬ್ದಾದ್ಯಭಿಮಾನಿ ದೇವತೆಗಳೂ ಯಾರುಂಟು ಅವರನ್ನೆಲ್ಲಾ ಆ ಪರಮಾತ್ಮನ ಅನುಗ್ರಹದಿಂದಲೇ ಸೃಷ್ಟಿಮಾಡುತ್ತೇನೆ.

ಆಹ ಚೇತ್ಥಂ ಭಾಗವತೇ ಪಂಚಮಸ್ಕಂಧ ಏವ ಚ ।

ಈ ಮೇಲೆಕಂಡ ಪ್ರಕಾರವಾಗಿ ಶ್ರೀಮದ್ಭಾಗವತದ ಐದನೆಯ ಸ್ಕಂಧದಲ್ಲಿ ರುದ್ರನು ಹೇಳಿದ್ದಾನೆ.

ಇಲಾವೃತಾಖ್ಯಖಂಡಸ್ಥಃ ಶಶಿಖಂಡಧರೋ ಹರಃ ।
ಬ್ರಹ್ಮವೀಂದ್ರೇಂದ್ರಪೂರ್ವಾಶ್ಚ ವಯಂ ಸರ್ವೇ ಸುರೇಶ್ವರಾಃ ॥ ೨೭೫ ॥

ಮಹಾತ್ಮನೋ ಯಸ್ಯ ವಶೇ ಶಕುಂತಾಃ ಸೂತ್ರಯಂತ್ರಿತಾಃ ।
ಯಥಾ ತಥಾ ಸ್ಥಿತಾಸ್ತೇನ ತಸ್ಯೈವಾನುಗ್ರಹಾದಿದಮ್ ॥ ೨೭೬ ॥

ಅಹಂಕೃತೇಸ್ತ್ರಿಭಿರ್ಭಾಗೈಃ ದೇಹೇಂದ್ರಿಯಮನೋಮಯಾನ್ ।
ದೇವಾನ್ ದೇವಾನುಗಾನ್ ಪೂರ್ವದೇವಭೂದೇವಪೂರ್ವಕಾನ್ ॥೨೭೭॥

ಜೀವಾನ್ ಅಜೀವಾಂಶ್ಚ ಜಡಾನ್ ಸೃಜಾಮೋ ನ ನಿಜೇಚ್ಛಯಾ ।
ಏವಂ ಚ ಸೂತ್ರಕಾರಾಜ್ಞಾ ವಶವರ್ತಿಶಕುಂತವತ್ ॥ ೨೭೮ ॥

ಹರ್ಯಧೀನಂ ಹರೇರ್ಭಿನ್ನಂ ಹೃದಿಸ್ಥಹರಿಣೇರಿತಮ್ ।
ಚರಾಚರಾತ್ಮಕಂ ವಿಶ್ವಮಿತಿ ವಕ್ತಿ ಯತಃ ಶಿವಃ ॥ ೨೭೯ ॥

ಅತೋಽಗ್ರತೋ ನಃ ಕಸ್ತಿಷ್ಠೇದ್ವದಂತು ಪ್ರತಿವಾದಿನಃ ।
ಇತಿ ಸ್ಪಷ್ಟಂ ಭಾಗವತೇ ಯಃ ಶಿವಃ ಸ್ತೌತಿ ಕೇಶವಮ್ ॥ ೨೮೦ ॥

ಸ ಕಥಂ ತಸ್ಯ ಸದೃಶೋ ವದಂತು ಪ್ರತಿವಾದಿನಃ ।

ಇಲಾವೃತ ಎಂಬ ಖಂಡದಲ್ಲಿರತಕ್ಕ ಶಿವನು ಈ ಮುಂದೆ ತಿಳಿಸಿರುವಂತೆ ಆಡಿದ್ದಾನೆ—ಶ್ರೀಹರಿಯ ಅನುಗ್ರಹಬಲದಿಂದಲೇ ನಾವು ಎಂದರೆ ಚತುರ್ಮುಖ ನಾಗಲಿ, ನಾನಾಗಲೀ ಎಲ್ಲಾ ಇತರ ದೇವತೆಗಳೂ ಸಹ ದಾರದಿಂದ ಬಿಗಿಯಲ್ಪಟ್ಟ ಹಕ್ಕಿಯಂತೆ ಪರಮಾತ್ಮನ ಅಧೀನರಾಗಿದ್ದೇವೆ. ಅವನ ಅನುಗ್ರಹದಿಂದಲೇ ಆಯಾ ಸ್ಥಾನಗಳಲ್ಲೂ ಇರುತ್ತೇವೆ. ಮೂರು ಬಗೆಯಾದ ಅಹಂಕಾರತತ್ವದಿಂದಲೇ, ದೇವತೆಗಳನ್ನೂ, ದೇವತೆಗಳನ್ನನುಸರಿಸಿರುವವರನ್ನೂ, ರಾಕ್ಷಸರನ್ನೂ, ಭೂದೇವತೆ ಯನ್ನೂ, ಸಕಲಜೀವವರ್ಗವನ್ನೂ, ಜೀವರಹಿತವಾದ ಜಡವಾದವುಗಳನ್ನೂ ಸೃಷ್ಟಿ ಮಾಡುತ್ತೇವೆ. ಎಲ್ಲ ನಮ್ಮ ವ್ಯಾಪಾರಗಳೂ ಕೂಡ ಆ ಶ್ರೀಹರಿಯ ಅನುಗ್ರಹ ದಿಂದಲೇ ನಡೆಯುತ್ತವೆ. ನಮ್ಮ ಇಚ್ಛೆಯಂತೆ ಅಲ್ಲ. ಈ ರೀತಿ ದಾರ ಹಿಡಿದಿ ರುವವನ ಅಧೀನವಾಗಿ ದಾರದಿಂದ ಕಟ್ಟಲ್ಪಟ್ಟ ಹಕ್ಕಿಯಂತೆ ನಾವೆಲ್ಲಾ ಶ್ರೀಹರಿಗೆ ಅಧೀನರು. ಅಸ್ವತಂತ್ರರು. ಸರ್ವತಂತ್ರ ಸ್ವತಂತ್ರನಾದ ಶ್ರೀಹರಿಗಿಂತಲೂ ಭಿನ್ನರು. ನಮ್ಮ ನಮ್ಮ ಹೃದಯದಲ್ಲಿದ್ದು ಪ್ರೇರಕನಾಗಿರತಕ್ಕ ಶ್ರೀಹರಿಯಿಂದ ಪ್ರೇರಿಸಲ್ಪಟ್ಟವ ರಾಗಿರುತ್ತೇವೆ. ಈ ಚರಾಚರಾತ್ಮಕವಾದ ಪ್ರಪಂಚವು ಆ ಸರ್ವೋತ್ತಮನಾದ ಶ್ರೀಹರಿಯ ಅಧೀನವಾಗಿದೆ" ಎಂದು ಶಿವನು ಈ ಪಂಚಮಸ್ಕಂಧ ಭಾಗವತದಲ್ಲಿ

ಹೇಳಿರುತ್ತಾನೆ. ಇಂತಹ ಶ್ರೀಹರಿಯ ಮುಂದೆ ಯಾರು ಪ್ರತಿಯಾಗಿ ನಿಂತಾರು? ಪ್ರತಿವಾದಿಗಳೇ ಹೇಳಲಿ.

**ರಾಜ್ಞಾಮಾಜ್ಞಾ ಗುರೂಣಾಂ ಚ ನೈವೋಲ್ಲಂಘ್ಯಾ ಯದಾ ತದಾ ||೨೮೧||**

**ರಾಜರಾಜೇನ ವಂದ್ಯಸ್ಯ ಶಿವಸ್ಯ ಜಗತುರ್ಗುರೋಃ ।**
**ಆಜ್ಞಾ ಸರ್ವೈಃ ಕಿಂ ನ ಮಾನ್ಯಾ ವದಂತು ಪ್ರತಿವಾದಿನಃ || ೨೮೨ ||**

ಲೋಕದಲ್ಲಿ ರಾಜರ ಮತ್ತು ಗುರುಗಳ ಆಜ್ಞೆಯನ್ನೇ ಮೀರುವಂತಿಲ್ಲ. ಹೀಗಿರುವಲ್ಲಿ ರಾಜರಾಜನಿಂದಲೂ (ಕುಬೇರನಿಂದಲೂ) ವಂದ್ಯನಾಗಿರುವ ತನಗಿಂತಲೂ ತಾರತಮ್ಯದಲ್ಲಿ ಕಮ್ಮಿಯಾದ ಸರ್ವರಿಂದಲೂ ವಂದ್ಯನಾಗಿರುವ ಜಗದ್ಗುರುವಾದ ಶಿವನ ಆಜ್ಞೆಯು ಸರ್ವರಿಂದಲೂ ಮಾನ್ಯವಲ್ಲವೇನು? ಪ್ರತಿವಾದಿಗಳೇ ಹೇಳಲಿ.

**ಲಿಂಗಾನುಶಾಸನಮಿದಂ ಲಿಂಗೇ ಭಕ್ತಿಂ ಪ್ರಕುರ್ವತಾ ।**
**ಉಲ್ಲಂಘ್ಯಮಂಗೀಕಾರ್ಯಂ ವಾ ವದಂತು ಪ್ರತಿವಾದಿನಃ || ೨೮೩ ||**

ಲಿಂಗರೂಪಿಯಾದ ಶಿವನಲ್ಲಿ ಭಕ್ತಿಯನ್ನು ಮಾಡುವವನಿಂದ ಲಿಂಗರೂಪಿಯಾದ ರುದ್ರದೇವನ ಈ ಅಪ್ಪಣೆಯು ತಿರಸ್ಕರಿಸಲ್ಪಡಬೇಕೇ ಅಂಗೀಕರಿಸಲ್ಪಡಬೇಕೇ ಪ್ರತಿವಾದಿಗಳೇ ಹೇಳಲಿ.

**ಅಹಂ ಭವೋ ದಕ್ಷಭೃಗುಪ್ರಧಾನಾಃ**
**ಪ್ರಜೇಶ ಭೂತೇಶ ಸುರೇಶಮುಖ್ಯಾಃ ।**
**ಸರ್ವೇ ವಯಂ ಯನ್ನಿಯಮಂ ಪ್ರಪನ್ನಾಃ**
**ಮೂರ್ಧ್ನ್ಯರ್ಪಿತಂ ಲೋಕಹಿತಂ ವಹಾಮಃ || ೨೮೪ ||**

**ಸ್ಥಾನಂ ಮದೀಯಂ ಸಹ ವಿಶ್ವಮೇತತ್**
**ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ ।**
**ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ**
**ಕಾಲಾತ್ಮನೋ ಯಸ್ಯ ಕುತೋ ಭವಿಷ್ಯತಿ || ೨೮೫ ||**

**ಇತ್ಯಾಹ ನವಮಸ್ಕಂಧೇ ಬ್ರಹ್ಮಾ ದುರ್ವಾಸಸಂ ಪ್ರತಿ ।**

ಒಂಭತ್ತನೇ ಸ್ಕಂಧದಲ್ಲಿ ಅಂಬರೀಷ ರಾಜನಿಗೆ ರಕ್ಷಕವಾಗಿ ಶ್ರೀ ವಿಷ್ಣು ಚಕ್ರದಿಂದ ಪೀಡಿತನಾಗಿ ಅದರಿಂದ ರಕ್ಷಣೆಯನ್ನು ಬೇಡಲು ತನ್ನಲ್ಲಿಗೆ ಬಂದ ದುರ್ವಾಸಮುನಿಯನ್ನು ಕುರಿತು ಬ್ರಹ್ಮದೇವನು ಹೇಳುತ್ತಿದ್ದಾನೆ.

ಶ್ರೀಮದ್ಭಾಗವತದ ಒಂಭತ್ತನೆಯ ಸ್ಕಂಧದಲ್ಲಿ ದುರ್ವಾಸರನ್ನು ಕುರಿತು ಬ್ರಹ್ಮದೇವರು ಈ ಮಾತನ್ನು ಆಡಿರುತ್ತಾರೆ. ಏಕಾದಶೀ ವ್ರತನಿಷ್ಠನಾದ ಅಂಬರೀಷ ಮಹಾರಾಜನಿಗೆ ಶ್ರೀವಿಷ್ಣುವಿನಿಂದ ರಕ್ಷಕವಾಗಿ ಅನುಗ್ರಹಿಸಿದ್ದ ಶ್ರೀವಿಷ್ಣುಚಕ್ರವು, ಸಾಧನದ್ವಾದಶೀದಿನ ಆ ಅಂಬರೀಷನನ್ನು ಕುರಿತು ಕೋಪಗೊಂಡು ಜಟಾಮಂಡಲ ದಿಂದ ಆವಿರ್ಭವಿಸಿ ಹೆದರಿಸಿದ ಶಕ್ತಿಯನ್ನು ನಾಶಮಾಡಿದ್ದಲ್ಲದೆ ದುರ್ವಾಸ ಮಹರ್ಷಿಯನ್ನು ಹಿಂಬಾಲಿಸಿ ಕಾಡಿಸಿದಾಗ ಅದರಿಂದ ತನಗೆ ರಕ್ಷಣೆಯನ್ನು ಮಾಡುವಂತೆ ಆ ಋಷಿವರೇಣ್ಯನು ಬ್ರಹ್ಮನಲ್ಲಿಗೆ ಹೋದಾಗ ಈ ಮಾತನ್ನು ಬ್ರಹ್ಮನು ದುರ್ವಾಸನಿಗೆ ಹೇಳಿದ್ದಾನೆ. ಎಲೈ ಋಷಿವರ್ಯನೇ, ನಾನಾಗಲಿ, ಶಿವನಾಗಲಿ, ದಕ್ಷನಾಗಲಿ, ಭೃಗು ಮೊದಲಾದವರಾಗಲಿ, ಪ್ರಜೇಶರಾಗಲಿ, ಭೂತೇಶರಾಗಲಿ, ಸುರಾಗ್ರಣಿಗಳಾಗಲಿ, ಎಲ್ಲರೂ ಸಹ ಯಾರ ಅಪ್ಪಣೆಯನ್ನು ಶಿರಸಾವಹಿಸಿ ಲೋಕಕ್ಕೆ ಹಿತವಾದುದನ್ನು ಮಾಡುತ್ತಿದ್ದೇವೆಯೋ, ಮತ್ತು ಯಾವ ಪರಮಾತ್ಮನ ಜಗನ್ನಿರ್ಮಾಣ, ರಕ್ಷಣರೂಪವಾದ ಕ್ರೀಡೆಯ ಕಡೆಯಲ್ಲಿ ಮಹಾಪ್ರಳಯದ ಸಮಯದಲ್ಲಿ ದ್ವಿಪರಾರ್ಧವೆಂದು ಕರೆಯಲ್ಪಡತಕ್ಕ ಕಾಲದಲ್ಲಿ ಜಗತ್ತನ್ನು ಸಂಹರಿಸುವ ಅಪೇಕ್ಷೆಯಿಂದ ಯಾರ ಹುಬ್ಬಿನ ಅಲ್ಲಾಡುವಿಕೆಯು ಮಾತ್ರದಿಂದ ಮಹಾಪ್ರಳಯ ಕಾರ್ಯ ಅವ್ಯಾಹತವಾಗಿ ನಡೆದುಬಿಡುತ್ತದೆಯೋ, ನನ್ನ ಸ್ಥಾನವಾದ ಸತ್ಯಲೋಕವೂ ಸಕಲ ಜಗತ್ತೂ ಕಣ್ಮರೆಯಾಗುವುದೋ ಅಂತಹ ಕಾಲನಾಮಕನಾದ ಪರಮಾತ್ಮನ ಚಕ್ರದಿಂದ ಕಾಡಿಸಲ್ಪಟ್ಟ ನಿನ್ನನ್ನು ನಾನು ರಕ್ಷಿಸಲಾರೆ ಎಂದು ತಿರಸ್ಕರಿಸಿದನು.

**ಸತ್ಯಲೋಕೇಶ್ವರಃ ಸೋಽಹಂ ಬ್ರಹ್ಮಾ ಕೈಲಾಸಗಃ ಶಿವಃ ॥ ೨೮೬ ॥**

**ದಕ್ಷಾದ್ಯಾಶ್ಚ ಪ್ರಜೇಶಾಖ್ಯಾಃ ಕಾರ್ತವೀರ್ಯಾದಯೋ ನೃಪಾಃ ।**
**ಘಂಟಾಕರ್ಣಾದಯಃ ಸರ್ವೇ ಭೂತೇಶಾಶ್ಚ ತಥಾ ಸುರಾಃ ॥ ೨೮೭ ॥**

**ಈಶಾ ಯೇಷಾಂ ಮಾನುಷಾಶ್ಚ ಇತ್ಯೇವಂ ಸರ್ವೇ ವಯಂ ಕ್ರಮಾತ್ ।**
**ಯಸ್ಯಾಜ್ಞಾರೂಪನಿಯಮಂ ಪ್ರಪನ್ನಾಃ ಶರಣಾಗತಾಃ ॥ ೨೮೮ ॥**

*

**ಮೂರ್ಧ್ನ್ಯರ್ಪಿತಂ ಲೋಕಹಿತಂ ವಹಾಮಃ ತದ್ರಮಾಪತೇಃ ।**
**ದಾಸಾ ಏವ ವಯಂ ಸರ್ವೇ ನ ಕೋಽಪ್ಯತ್ಯೇತಿ ತಂ ಪ್ರಭುಮ್ ॥ ೨೮೯ ॥**

ಮತ್ತು ಬ್ರಹ್ಮನ ವಾಕ್ಯವು ಈರೀತಿ ಇದೆ.

ನಾನಾದರೋ ಸತ್ಯಲೋಕಕ್ಕೆ ಅಧಿಪತಿಯಾಗಿದ್ದೇನೆ. ಶಿವನು ಕೈಲಾಸ ನಾಥನಾಗಿರುತ್ತಾನೆ. ಅಂದರೆ ಸತ್ಯಲೋಕಕ್ಕೆ ಅಧಿಪತಿಯಾಗಿರುವ ನಾನೂ, ಕೈಲಾಸನಾಥನಾದ ಶಿವನೂ, ದಕ್ಷಪ್ರಜಾಪತಿಯೇ ಮೊದಲಾದ ಪ್ರಜೇಶರೂ, ಕಾರ್ತವೀರ್ಯಾರ್ಜುನನೇ ಮೊದಲಾದ ರಾಜರೂ, ಘಂಟಾಕರ್ಣಾದಿಗಳೂ, ಎಲ್ಲಾ ಭೂತಾಭಿಮಾನಿ ದೇವತೆಗಳೂ, ಮಿಕ್ಕ ಎಲ್ಲಾ ದೇವತೆಗಳೂ, ಮತ್ತು ಲೋಕದಲ್ಲಿರುವ ಮಾನವರಿಗೆ ಒಡೆಯರಾದ ರಾಜಮಹಾರಾಜರುಗಳೂ ಈರೀತಿ ಕ್ರಮವಾಗಿ ಎಲ್ಲರೂ ಸಹ, ಯಾವ ಶ್ರೀರಮಾಪತಿಯ ಆಜ್ಞಾನಿಯಮಬದ್ಧರಾಗಿ ದ್ದೇವೆ. ಆ ಶ್ರೀಹರಿಗೆ ಶರಣಾಗತರಾಗಿರುತ್ತೇವೆ. ಶ್ರೀಹರಿಯ ಆಜ್ಞೆಯನ್ನು ಶಿರಸಾವಹಿಸಿ ಅದರಂತೆ ಜಗತ್ತಿನಲ್ಲಿ ನಮಗೆ ದೇವರು ಆಜ್ಞಾಪಿಸಿರತಕ್ಕ ಕೆಲಸ ಗಳನ್ನು ಭಯಭೀತರಾಗಿ ಚಾಚೂತಪ್ಪದಂತೆ ನಡೆಸುತ್ತಲಿರುತ್ತೇವೆ. ನಾವೆಲ್ಲರೂ ಸಹ ಈಶನಾದ ಶ್ರೀವಿಷ್ಣುವಿಗೆ ದಾಸರಾಗಿದ್ದೇವೆ. ನಮ್ಮಲ್ಲಿ ಯಾರೂ ಸಹ ಆ ಪ್ರಭುವಿನ ಆಜ್ಞೆಯನ್ನು ಮೀರುವುದಿಲ್ಲ.

**ಕಿಂಚೇಶೋಽಸೌ ಮಮ ಸ್ಥಾನಂ ಸಹ ವಿಶ್ವಂ ಚ ಲೀಲಯಾ ।**
**ಪರಾಖ್ಯಸ್ವನಿಮೇಷಾಂತೇ ಭ್ರೂಭಂಗೇ ನ ದಿಧಕ್ಷತಿ ॥ ೨೯೦ ॥**

ಮತ್ತೂ ಏನೆಂದರೆ ಸ್ವಾಮಿಯಾದ ಈ ಶ್ರೀಹರಿಯು ಲೀಲೆಯಿಂದಲೇ, ನನ್ನ ಜಾಗವಾದ ಈ ಸತ್ಯಲೋಕವನ್ನು ಚತುರ್ಮುಖನಾದ ನನ್ನ ಆಯುಸ್ಸಿನ ಕಡೆಯಲ್ಲಿ ಹುಬ್ಬುವಿನ ಚಾಲನೆಯಿಂದ ನಾಶಮಾಡುತ್ತಾನೆ.

**ಬ್ರಹ್ಮಣಸ್ತ್ವಾಯುಷೋಽರ್ಧಂ ಯತ್ತತ್ಪರಾರ್ಧಪದೋದಿತಮ್ ।**
**ಪರಾಭಿಧನಿಮೇಷಸ್ಯ ಯತೋಽರ್ಧಮಭವದ್ಧಿ ತತ್ ॥ ೨೯೧ ॥**

ಚತುರ್ಮುಖನ ಆಯುಸ್ಸಿನ ಮುಂದಿನ ಉತ್ತರಾರ್ಧದ ಅರ್ಧಭಾಗಕ್ಕೆ ಪರಾರ್ಧವೆಂದು ಹೆಸರು. ಪರವೆಂದು ಕರೆಯಲ್ಪಡತಕ್ಕ ಪರಮಾತ್ಮನ ರೆಪ್ಪೆ ಹಾಕತಕ್ಕ ಕಾಲದ ಅರ್ಧಭಾಗವಾಗಿ ಅದು ಇರುತ್ತದೆಯಷ್ಟೆ.

ದ್ವಿಪರಾರ್ಧಂ ಬ್ರಹ್ಮಸಂಪೂರ್ಣಾಯುಃ ಕಿಲ ಪರಾಭಿಧಮ್ ।
ಪಂಚಾಶದಬ್ದಪರ್ಯಂತಂ ಯುವಾ ಬ್ರಹ್ಮಾ ತತಃ ಪರಮ್ ॥ ೨೯೨ ॥

ವೃದ್ಧಶ್ಚೇತಿ ವಿಭಾಗಸ್ಯ ದರ್ಶನಾಯ ವಿವೇಕಿನಃ ।
ದ್ವಿಪರಾರ್ಧಾಖ್ಯಯಾ ಪ್ರಾಹುಃ ತೇ ಬ್ರಹ್ಮಾಽಪಿ ತಥೋಕ್ತವಾನ್ ॥ ೨೯೩ ॥

ವಿಹಾಯ ಲಾಘವಂ ಯಸ್ಮಾತ್ ಗೌರವೇ ತ್ವಕರೋನ್ಮತಿಮ್ ।
ಪ್ರಾಮಾಣಿಕಂ ಗೌರವಂ ಚ ಮಾನಯಂತಿ ಯತೋ ಬುಧಾಃ ॥ ೨೯೪ ॥

ಚತುರ್ಮುಖ ಬ್ರಹ್ಮನ ಸಂಪೂರ್ಣವಾದ ಆಯುಸ್ಸನ್ನು ದ್ವಿಪರಾರ್ಧವೆಂದು ಕರೆಯುವರು. ಬ್ರಹ್ಮನು ಮೊದಲನೆಯ ಐವತ್ತುವರ್ಷ ಪರ್ಯಂತವಾಗಿ ಯುವಕ ನಾಗಿರುತ್ತಾನೆ. ಆಮೇಲಿನ ಉತ್ತರಾರ್ಧದಲ್ಲಿ ವೃದ್ಧನೆಂದು ಕರೆಯುವರು. ಈ ವಿಭಾಗವನ್ನು ತೋರಿಸುವುದಕ್ಕಾಗಿಯೇ ವಿವೇಕಿಗಳು ದ್ವಿಪರಾರ್ಧವೆಂದು ಹೇಳುತ್ತಾರೆ. ಬ್ರಹ್ಮನೂ ಸಹ ಅದೇ ಅಭಿಪ್ರಾಯದಿಂದ ಪರವೆಂಬ ಲಘುಭೂತ ವಾದುದನ್ನೂ ಸಂಜ್ಞೆಯನ್ನೂ ಬಿಟ್ಟು ದ್ವಿಪರಾರ್ಧವೆಂಬ ಗುರುಭೂತವಾದುದನ್ನು ಬ್ರಹ್ಮನು ಅನುಸರಿಸಿ ಹೇಳಿದ್ದಾನೆ. ಇದು ಪ್ರಾಮಾಣಿಕವಾದುದರಿಂದ ಪ್ರಾಮಾ ಣಿಕವಾದ ಗೌರವವು ದೋಷವಾಗಲಾರದು. ಇದನ್ನು ಪಂಡಿತರು ಒಪ್ಪಿದ್ದಾರೆ.

ಹರೇಶ್ಚಕ್ರಮಿದಂ ತಸ್ಯೈವಾಜ್ಞಯಾಽನ್ವಗಮನ್ಮುನಿಮ್ ।
ಅತಸ್ತದಾಜ್ಞಾಭಂಗೋ ನಸ್ತದ್ಭೃತ್ಯಾನಾಂ ನ ಶೋಭತೇ ॥ ೨೯೫ ॥

ಶ್ರೀಹರಿಯ ಈ ಚಕ್ರವು ಆ ವಿಷ್ಣುವಿನ ಆಜ್ಞೆಯಿಂದಲೇ ದುರ್ವಾಸಮುನಿ ಯನ್ನು ಹಿಂಬಾಲಿಸಿದೆ. ಆದಕಾರಣ ಆ ಹರಿಯ ಆಜ್ಞೆಯ ಭಂಗವನ್ನು ಉಂಟು ಮಾಡಲು ಸಾಧ್ಯವಿಲ್ಲ. ಅವನ ಭೃತ್ಯರಾದವರು ಅದಕ್ಕೆ ಪ್ರಯತ್ನಿಸುವುದು ಮಂಗಳಕರವಲ್ಲ.

ಸ್ವಾಜ್ಞೋಲ್ಲಂಘನಕರ್ತಾರಂ ಮಾಂ ದಿಧಕ್ಷೇದಪಿ ಪ್ರಭುಃ ।
ಕಾಲಾತ್ಮನಸ್ತಸ್ಯ ಚಿತ್ತೇ ಭವಿಷ್ಯತ್ಕಾರ್ಯಮೀಶಿತುಃ ॥ ೨೯೬ ॥
ಕಃ ಪಶ್ಯತಿ ತತೋ ಗಚ್ಛ ತಮೇವ ಶರಣಂ ಪ್ರಭುಮ್ ।

ನಾನೇನನ್ನಾದರೂ ಶ್ರೀಹರಿಯ ಆಜ್ಞೆಯನ್ನು ಮೀರಿದರೆ, ಅಂತಹ ನನ್ನನ್ನು ಪ್ರಭುವಾದ ಶ್ರೀಹರಿಯು ಸುಟ್ಟುಬಿಡುತ್ತಾನೆ. ಸರ್ವಸ್ವಾಮಿಯಾದ ಕಾಲಾತ್ಮಕ

ನಾದ ಆ ಪ್ರಭುವಿನ ಮನಸ್ಸಿನಲ್ಲಿ ಮುಂದೆ ಏನೇನು ಆಗಬೇಕೆಂದಿದೆಯೋ ಅದನ್ನು ಯಾರು ಬಲ್ಲರು? ಆದ್ದರಿಂದ ಆ ಪ್ರಭುವಾದ ಶ್ರೀವಿಷ್ಣುವನ್ನೇ ಶರಣುಹೊಂದು. ಅದೇ ನಿನಗೆ ಶ್ರೇಯಸ್ಕರ ಎಂದು ಚತುರ್ಮುಖನು ದುರ್ವಾಸಮುನಿಗೆ ಶ್ರೀಹರಿಯ ಹಿರಿಮೆಯನ್ನು ಹೇಳಿ ಹಿತವನ್ನು ಉಪದೇಶ ಮಾಡಿದನು.

**ಏವಂಚ ಬ್ರಹ್ಮಣೋ ಯಸ್ಮಾತ್ ಭಯಂ ಯಸ್ಯ ಚ ಕಿಂಕರಾಃ ॥ ೨೯೭ ॥**

**ಬ್ರಹ್ಮಾದ್ಯಾ ವಿಬುಧಾಃ ಸರ್ವೇ ಯದಾಜ್ಞಾಧಾರಿಣಃ ಸದಾ ।**
**ಕಸ್ತಸ್ಯ ಸದೃಶೋ ದೇವೋ ವದಂತು ಪ್ರತಿವಾದಿನಃ ॥ ೨೯೮ ॥**

ಹೀಗಿರುವಲ್ಲಿ ಯಾರ ದೆಸೆಯಿಂದ ಬ್ರಹ್ಮನಿಗೂ ಭಯವಿದೆಯೋ, ಬ್ರಹ್ಮನೇ ಮೊದಲಾದ ದೇವತೆಗಳೂ ಸಹ ಯಾರ ಸೇವಕರೋ, ಎಲ್ಲರೂ ಯಾವಾಗಲೂ ಯಾವ ಶ್ರೀಹರಿಯ ಆಜ್ಞೆಯಂತೆ ನಡೆಯತಕ್ಕವರಾಗಿದ್ದಾರೆಯೋ, ಅಂತಹ ಶ್ರೀಹರಿಗೆ ಸಮಾನನಾದ ದೇವನು ಯಾರಿರುತ್ತಾನೆ? ಪ್ರತಿವಾದಿಗಳೇ ಹೇಳಲಿ. ಅಂದರೆ ಪ್ರತಿವಾದಿಗಳಿಗೆ ಶ್ರೀಹರಿಯ ಸರ್ವೋತ್ತಮತ್ವಕ್ಕೆ ವಿರುದ್ಧವಾಗಿ ಮಾತನಾಡಲು ನಾಲಿಗೆಯೇ ಬರುವಂತಿಲ್ಲವೆಂದು ಅಭಿಪ್ರಾಯ.

**ಕುಶಲಾರ್ಥಕದಕ್ಷಾಖ್ಯಪದೇನೇಂದ್ರಂ ಭವಾದನು ।**
**ಸಂಜಗ್ರಾಹ ತತಸ್ತಾರತಮ್ಯಂ ಚಾಸ್ಮದ್ಗುರೂದಿತಮ್ ॥ ೨೯೯ ॥**

ರುದ್ರನನ್ನು ಹೇಳಿದಮೇಲೆ ಇಂದ್ರನನ್ನು ಪರಿಗಣಿಸಿರುವುದರಿಂದ ನಮ್ಮ ಗುರುಗಳಾದ ಶ್ರೀಮದಾನಂದತೀರ್ಥರು ಹೇಳಿರುವ ತಾರತಮ್ಯವನ್ನೇ ಸಂಗ್ರಹವಾಗಿ ಬ್ರಹ್ಮನು ತಿಳಿಸಿದ್ದಾನೆ. ತಾರತಮ್ಯದಲ್ಲಿ ಶ್ರೀಹರಿಯು ಸರ್ವೋತ್ತಮ. ಆಮೇಲೆ ಶ್ರೀಮಹಾಲಕ್ಷ್ಮಿಯು. ಅನಂತರದಲ್ಲಿ ಬ್ರಹ್ಮಪ್ರಧಾನವಾಯುದೇವರು. ಆಮೇಲೆ ಸರಸ್ವತೀ ಭಾರತೀದೇವಿಯವರು, ತದನಂತರದಲ್ಲಿ ಗರುಡಶೇಷರುದ್ರರು. ಆಮೇಲೆ ಸೌಪರ್ಣೀ, ವಾರುಣೀ, ಪಾರ್ವತೀದೇವಿಯವರು. ಇವರೆಲ್ಲಾ ಆದನಂತರ ಇಂದ್ರಾದಿದೇವತೆಗಳು. ಹಿಂದೆ ಬ್ರಹ್ಮನು ತಿಳಿಸಿದ ತಾರತಮ್ಯದಲ್ಲಿ ಸಮರ್ಥನಾದ ರುದ್ರನನ್ನು ಇಂದ್ರನನ್ನು ಹೇಳಿದನಂತರ ದಕ್ಷಪದದಿಂದ ಸಂಗ್ರಹಿಸಿ ತಿಳಿಸಿರುವುದಾಗಿದೆ.

**ಕಿಂ ನಾಭೂತ್ ಬ್ರಹ್ಮಣೋ ಹಾರ್ದಂ ವದಂತು ಪ್ರತಿವಾದಿನಃ ।**

ಶಾಶ್ವತವಾದ ಎಂದೆಂದಿಗೂ ವ್ಯತ್ಯಾಸವಾಗದ ತಾರತಮ್ಯವಿರುವುದರಿಂದ ನಮ್ಮ ಗುರುಗಳು ತಿಳಿಸಿರುವಂತೆ ಬ್ರಹ್ಮನ ಮಾತಿನ ಅಭಿಪ್ರಾಯವೂ ಸಹ ಸಂವಾದವಾಗಿಲ್ಲವೇನು? ಅಂದರೆ ರುದ್ರನ ತರುವಾಯ ಪ್ರತಿದೇವತೆಗಳಲ್ಲಿ ಇಂದ್ರನನ್ನೇ ಬ್ರಹ್ಮನು ಹೇಳಿಲ್ಲವೇನು? ಪ್ರತಿವಾದಿಗಳೇ ಹೇಳಲಿ.

ಹೀಗೆ ಅತ್ಯಂತ ಸ್ಪಷ್ಟವಾಗಿ ಹಿಂದೆ ತಿಳಿಸಿದಂತೆ ಪಂಚಮಸ್ಕಂಧ ಭಾಗವತದಲ್ಲಿ ರುದ್ರದೇವನು ಶ್ರೀಹರಿಯನ್ನು ಸ್ತೋತ್ರಮಾಡಿದ್ದಾನೆ.

ಆದಕಾರಣ ಅಂತಹ ಶ್ರೀಹರಿಯು ಆ ಶಿವನಿಗೆ ·ಹೇಗೆ ಸಮನಾದಾನು, ಪ್ರತಿವಾದಿಗಳು ಹೇಳಲಿ.

**ಸೃಜಾಮಿ ತನ್ನಿಯುಕ್ತೋಽಹಂ ಹರೋ ಹರತಿ ತದ್ವಶಃ** || ೩೦೦ ||

**ವಿಶ್ವಂ ಪುರುಷರೂಪೇಣ ಪರಿಪಾತಿ ತ್ರಿಶಕ್ತಿಧೃಕ್**
**ಸ ಏವ ಭಗವಾನ್ ಲಿಂಗೈಃ ತ್ರಿಭಿರೇತೈರಧೋಕ್ಷಜಃ** || ೩೦೧ ||

**ಸ್ವಲಕ್ಷಿತಗತಿರ್ಬ್ರಹ್ಮನ್ ಸರ್ವೇಷಾಂ ಮಮ ಚೇಶ್ವರಃ ।**
**ನಮಸ್ತಸ್ಮೈ ಭಗವತೇ ವಾಸುದೇವಾಯ ವೇಧಸೇ** || ೩೦೨ ||

**ಯನ್ಮಾಯಯಾ ದುರ್ಜಯಯಾ ಮಾಂ ಬ್ರುವಂತಿ ಜಗದ್ಗುರುಮ್ ।**
**ಇತಿ ಸ್ಪಷ್ಟಂ ಭಾಗವತೇ ಸುತಂ ಪ್ರತ್ಯಾಹ ಪದ್ಮಭೂಃ** || ೩೦೩ ||

ಚತುರ್ಮುಖ ಬ್ರಹ್ಮನು ತನ್ನ ಮಗನಾದ ರುದ್ರನನ್ನು ಕುರಿತು ಶ್ರೀಮದ್ಭಾಗವತ ಮಹಾಪುರಾಣದಲ್ಲಿ ಸ್ಪಷ್ಟವಾಗಿ ಹೀಗೆ ಹೇಳಿದ್ದಾನೆ.

ಆ ಶ್ರೀಹರಿಯಿಂದ ಪ್ರೇರಿಸಲ್ಪಟ್ಟವನಾಗಿ ನಾನು ಜಗತ್ತನ್ನು ಸೃಷ್ಟಿಸುತ್ತೇನೆ. ಅವನ ಅಧೀನನಾಗಿಯೇ ರುದ್ರನು ಸಂಹಾರವನ್ನು ಮಾಡುತ್ತಾನೆ. ಶ್ರೀವಿಷ್ಣುವು ಸ್ವಯಂ ಪುರುಷರೂಪದಿಂದ ಪ್ರಪಂಚವನ್ನು ಕಾಪಾಡುತ್ತಾನೆ. ಆ ಭಗವಂತನೇ ಸೃಷ್ಟಿ, ಪರಿಪಾಲನ, ಸಂಹಾರ ಮೂರಾದ ಶಕ್ತಿಗಳುಳ್ಳವನಾಗಿ ತನ್ನ ಇಚ್ಛಾನುಸಾರವಾದ ವ್ಯಾಪಾರವುಳ್ಳವನಾಗಿರುತ್ತಾನೆ. ಸರ್ವರಿಗೂ ಸ್ವಾಮಿಯಾಗಿದ್ದಾನೆ. ಅಷ್ಟುಮಾತ್ರವಲ್ಲ. ನನಗೂ ಸಹ ನಿಯಾಮಕನಾಗಿರುತ್ತಾನೆ. ಅಂತಹ ಸರ್ವೇಶ್ವರನಾದ ಭಗವಂತನಾದ ವಾಸುದೇವನಿಗೆ ನಮಸ್ಕಾರವು. ಯಾವ ಶ್ರೀಕೃಷ್ಣನ ಮಾಯೆಯಿಂದಲೇ (ಇಚ್ಛೆಯಿಂದಲೇ) ನನ್ನನ್ನು ಜಗದ್ಗುರು ಎಂದು

ಕರೆಯುತ್ತಾರೆ. ನಾನಂತೂ ಸ್ವತಂತ್ರನಲ್ಲ. ಸರ್ವತಂತ್ರ ಸ್ವತಂತ್ರನಾದ ಆ ಶ್ರೀಹರಿಗೆ ನಾವೆಲ್ಲಾ ಅಧೀನರು ಎಂದು ಸ್ಪಷ್ಟವಾಗಿ ಶ್ರೀಮದ್ಭಾಗವತದಲ್ಲಿ ತನ್ನ ಮಗನನ್ನು (ಶಿವನನ್ನು) ಕುರಿತು ಬ್ರಹ್ಮನು ಹೇಳಿರುತ್ತಾನೆ.

**ನಿಮಿತ್ತಮಾತ್ರಮೀಶಸ್ಯ ವಿಶ್ವಸರ್ಗನಿರೋಧಯೋಃ ।**
**ಹಿರಣ್ಯಗರ್ಭಃ ಶರ್ವಶ್ಚ ಕಾಲಾಖ್ಯಾರೂಪಿಣಸ್ತವ ॥ ೩೦೪ ॥**

ಬ್ರಹ್ಮದೇವರು ಪರಮಾತ್ಮನನ್ನು ಕುರಿತು ಈ ರೀತಿ ಹೇಳಿದ್ದಾರೆ—ಎಲೈ ಪರಮಾತ್ಮನೇ! ಕಾಲನಾಮಕನಾದ ಸ್ವಾಮಿಯಾದ ನಿನಗೆ, ಪ್ರಪಂಚ ಸೃಷ್ಟಿ ವ್ಯಾಪಾರಕ್ಕಾಗಲಿ, ಸಂಹಾರಕ್ರಿಯೆಗಾಗಲಿ ಇವುಗಳಿಗೆ ಹಿರಣ್ಯಗರ್ಭನಾದ ನಾನಾಗಲಿ, ರುದ್ರನಾಗಲಿ, ಕೇವಲ ಹೆಸರಿಗೆ ಮಾತ್ರ ಇದ್ದೇವೆ. ಎಲ್ಲವೂ ಸಹ ಮುಖ್ಯವಾಗಿ ನಿನ್ನಿಂದಲೇ ಆಗುತ್ತಿವೆ. ನಮ್ಮಲ್ಲಿದ್ದು ನೀನೇ ನಮ್ಮ ಮೂಲಕ ಸೃಷ್ಟ್ಯಾದಿ ವ್ಯಾಪಾರಗಳನ್ನು ಮಾಡುತ್ತಿರುತ್ತೀಯೆ, ಎಂದು ಶ್ರೀಹರಿಯ (ಹಿರಿಮೆಯನ್ನು) ಮಹಿಮೆಯನ್ನು ಹೊಗಳಿರುತ್ತಾರೆ.

**ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ ।**
**ಗಂತವ್ಯಲೀಕ್ಯೈರಜಶಂ ಕರಾದ್ಯೈಶ್ಚ ಪ್ರತರ್ಕ್ಯತೇ ॥ ೩೦೫ ॥**

**ತೀರ್ಥಾಸ್ಪದಂ ಶಿವವಿರಿಂಚನುತಂ ತೇ ಪದಾಂಬುಜಮ್ ।**
**ಇತಿ ಭಾಗವತೇ ತತ್ರ ತತ್ರ ಯಸ್ತೂಯತೇ ಹರಿಃ ॥ ೩೦೬ ॥**

ಯಾವ ಶ್ರೀಹರಿಯ ಪ್ರಸಾದದಿಂದಲೇ ಬ್ರಹ್ಮನು ಹುಟ್ಟಿದ್ದಾನೆಯೋ, ಬ್ರಹ್ಮನ ಕೋಪದಿಂದಲೇ ಬ್ರಹ್ಮನ ಹುಬ್ಬಿನ ನಡುಭಾಗದಿಂದ ರುದ್ರನು ಹುಟ್ಟಿರುವನೋ, ಯಾವ ಬ್ರಹ್ಮಾದಿಗಳಿಗೂ ಸಹ ಆ ಪರಮಾತ್ಮನ ಸಮಗ್ರ ಸ್ವರೂಪವು ಸರಿಯಾಗಿ ತಿಳಿದಿಲ್ಲವೋ, ಯಾರ ಪಾದೋದಕವು ಬ್ರಹ್ಮಾದಿಗಳಿಂದ ಹೊಗಲ್ಪಟ್ಟುದಾಗಿ ತೀರ್ಥವೆಂದು ವಿಖ್ಯಾತವಾಗಿದೆಯೋ ಅಂತಹ ಮಹಾನುಭಾವನು ಶ್ರೀಹರಿಯೆಂದು ಶ್ರೀಮದ್ಭಾಗವತದಲ್ಲಿ ಅಲ್ಲಲ್ಲಿ ಶ್ರೀಹರಿಯು ಸ್ತುತಿಸಲ್ಪಟ್ಟಿರುತ್ತಾನೆ.

**ಕಸ್ತಸ್ಯ ಸದೃಶೋ ದೇವಃ ವದಂತು ಪ್ರತಿವಾದಿನಃ ।**
**ಯಃ ಕೇಶವಃ ಕಿಲ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ॥ ೩೦೭ ॥**

ಯಾವ ಕೇಶವನು ಬ್ರಹ್ಮದೇವರಿಗಿಂತಲೂ, ರುದ್ರದೇವನಿಗಿಂತಲೂ, ಉತ್ತಮನಾದ ಚೇತನನಾಗಿದ್ದಾನೆಯೋ ಅಂತಹ ಬ್ರಹ್ಮರುದ್ರರಿಗೂ ನಿಯಾಮಕನಾದ ಸ್ವಾಮಿಗೆ ಯಾರುತಾನೇ ಸಮರು ಪ್ರತಿವಾದಿಗಳೇ ಹೇಳಲಿ.

ಹಿರಣ್ಯಗರ್ಭಃ ಕಃ ಪ್ರೋಕ್ತಃ ಈಶಃ ಶಂಕರ ಏವ ಚ ।
ಸೃಷ್ಟ್ಯಾದಿನಾ ವರ್ತಯತಿ ಯತಸ್ತ್ವಾ ಕೇಶವೋ ಭವಾನ್ ॥

ಎಂಬ ಪ್ರಮಾಣವಾಕ್ಯದಂತೆ ಹಿರಣ್ಯಗರ್ಭನನ್ನು ಸೃಷ್ಟಿಕಾರ್ಯದಲ್ಲೂ, ಸಂಹಾರ ಕ್ರಿಯೆಗೆ ರುದ್ರನನ್ನು ಪ್ರೇರಿಸುವುದರಿಂದ ಶ್ರೀಹರಿಗೆ ಕೇಶವನೆಂಬ ಹೆಸರು ಬಂದಿದೆ ಎಂದು ಅಭಿಪ್ರಾಯ.

**ಬ್ರಹ್ಮೇಶಾದ್ಯಾನತೇಕ್ಷೀಕೋ ಯಶ್ಚ ಶಂಭೋಃ ಪಿತಾಮಹಃ ।**
**ದುರ್ವಾಸಸಃ ಪೃಷ್ಠಲಗ್ನಂ ಯಚ್ಚಕ್ರಂ ಬ್ರಹ್ಮಶಂಕರೌ ॥ ೩೦೮ ॥**
**ಅಭೀಷಯತ್ ಕೋಽಸ್ಯ ಸಮೋ ವದಂತು ಪ್ರತಿವಾದಿನಃ ।**

ಯಾರು ಬ್ರಹ್ಮರುದ್ರಾದಿಗಳಿಂದ ಭಕ್ತಿಪೂರ್ವಕವಾಗಿ ನಮಸ್ಕರಿಸಲ್ಪಟ್ಟಿರುವವನೋ, ಮತ್ತು ಯಾರು ಶಂಭುವಿಗೆ ತಾತನಾಗಿರುವನೋ, ಯಾರ ಚಕ್ರಾಯುಧವು ದುರ್ವಾಸಮುನಿಯನ್ನು ಅಂಬರೀಷನ ಸಲುವಾಗಿ ಹಿಂಬಾಲಿಸಿತೋ, ಆ ದುರ್ವಾಸಮುನಿಯ ರಕ್ಷಣೆಗಾಗಿ ಬ್ರಹ್ಮನಲ್ಲಿ ರುದ್ರನ ಹತ್ತಿರವೂ ಹೋದಾಗ ಅವರನ್ನೂ ಸಹ ಹೆದರಿಸಿತೋ ಅಂತಹ ಶ್ರೀವಿಷ್ಣುವಿಗೆ ಯಾರುತಾನೇ ಸಮರು ಪ್ರತಿವಾದಿಗಳೇ ಹೇಳಲಿ.

**ಅಸಾವೇಕಾರ್ಣವೀಭೂತೇ ಮಾಯಾವಟಜಲೇ ಪುಮಾನ್ ॥ ೩೦೯ ॥**
**ಜಗತ್ ಸ್ವಜಠರೇ ಭೃತ್ವಾ ತಸ್ಮಿನ್ ಶೇತೇ ಜನಾರ್ದನಃ ।**

ಈ ಜನಾರ್ದನನು ಮಹಾಪ್ರಳಯಕಾಲದಲ್ಲಿ ಪ್ರಳಯೋದಕದಲ್ಲಿ ಮಾಯಾವಟಜಲದಲ್ಲಿ ಈ ಚೇತನ ಮತ್ತು ಅಚೇತನಾತ್ಮಕವಾದ ಪ್ರಪಂಚವನ್ನು ತನ್ನ ಹೊಟ್ಟೆಯೊಳಗೆ ಇಟ್ಟುಕೊಂಡು ಮಲಗುತ್ತಾನೆ.

**ಆಸೀದೇಕೋ ಹ ವೈ ಚಾಗ್ರೇ ವಿಷ್ಣುರ್ನಾರಾಯಣೋಽವ್ಯಯಃ ॥ ೩೧೦ ॥**
**ನ ಚ ಬ್ರಹ್ಮಾ ಚ ರುದ್ರಶ್ಚ ನ ದೇವಾ ನ ಮಹರ್ಷಯಃ ।**
**ಇತಿ ಸ್ಮೃತೇರ್ಬ್ರಹ್ಮಲಯೇಽಪ್ಯೇಕೋ**
**ನಾರಾಯಣೋಽಖಿಲಮ್ ॥ ೩೧೧ ॥**

**ಸಂಹೃತ್ಯ ಜಠರೇ ಭೃತ್ವಾ ಶೇತೇ ವಟಪುಟೇ ಕಿಲ ।**
**ತದಾ ನ ಶ್ರೂಯತೇ ಬ್ರಹ್ಮಾ ನ ರುದ್ರೋ ನಾಪರೇ ಸುರಾಃ ॥ ೩೧೨ ॥**

**ತಸ್ಯ ವಿಷ್ಣೋಃ ಸಮಃ ಕೋ ವಾ ವದಂತು ಪ್ರತಿವಾದಿನಃ ।**

ಮಹಾಪ್ರಳಯಕಾಲದಲ್ಲಿ ಅನಿತ್ಯತ್ವ, ದೇಹಹಾನಿ, ದುಃಖಪ್ರಾಪ್ತಿ, ಅಪೂರ್ಣತಾ ಎಂಬ ನಾಲ್ಕು ಬಗೆಯಾದ ನಾಶಗಳಿಂದ ರಹಿತನಾದ ಶ್ರೀಮನ್ನಾರಾಯಣನೊಬ್ಬನೇ ಸ್ವತಂತ್ರವಾಗಿದ್ದನು. ಮತ್ತೆ ಬ್ರಹ್ಮದೇವನಾಗಲಿ, ರುದ್ರನಾಗಲಿ, ದೇವತೆಗಳಾಗಲಿ, ಮಹರ್ಷಿಗಳಾಗಲಿ ಯಾರೂ ಇರಲಿಲ್ಲ. ಅಂದರೆ ಜೀವರೆಲ್ಲಾ ಸ್ವರೂಪದಿಂದ ನಿತ್ಯರಾದರೂ, ಸ್ವತಂತ್ರರಾಗಿ ಯಾರೂ ಇರಲಿಲ್ಲವೆಂದು ಅಭಿಪ್ರಾಯ. ಅಂತಹ ಸ್ವತಂತ್ರನಾದ ಮಹಾವಿಷ್ಣುವಿಗೆ ಸಮರಾರು? ಪ್ರತಿವಾದಿಗಳು ಹೇಳಲಿ.

**ನಾರೀಸಂಗಮುಮತ್ತೋಽಸೌ ಯಸ್ಮಾನ್ಮಾಮವಮನ್ಯತೇ ॥ ೩೧೩ ॥**

**ಯೋನಿಲಿಂಗಸ್ವರೂಪಂ ವೈ ತಸ್ಮಾದಸ್ಯ ಭವಿಷ್ಯತಿ ।**
**ಇತಿ ಪಾದ್ಮಪುರಾಣೋಕ್ತೇಃ ಶಿವಂ ಪಂಚಮುಖಂ ಪುರಾ ॥ ೩೧೪ ॥**

**ಯಸ್ಯ ಭೃತ್ಯೋ ಭೃಗುಃ ಶಪ್ತ್ವಾ ಯೋನಿಲಿಂಗಂ ವ್ಯಧಾತ್ ಶಿವಮ್ ।**
**ಯತೋ ಲಿಂಗಂ ಗಲೇ ಸರ್ವೇ ಧಾರಯಂತಿ ಶಿವಾನುಗಾಃ ॥ ೩೧೫ ॥**

**ಸ್ವಲಿಂಗಮೂಲಭೂತೇನ ಭೃಗುಣಾಽಪಿ ಹಿ ಯೋಽರ್ಚಿತಃ ।**
**ತಸ್ಯ ವಿಷ್ಣೋಃ ಸಮಃ ಕೋ ವಾ ವದಂತು ಪ್ರತಿವಾದಿನಃ ॥ ೩೧೬ ॥**

ಹಿಂದೆ ಸರಸ್ವತೀನದೀತೀರದಲ್ಲಿ ಸತ್ರಯಾಗದಲ್ಲಿ ಆಸಕ್ತರಾಗಿದ್ದ ಋಷಿವರೇಣ್ಯರು ತ್ರಿಮೂರ್ತಿಗಳಲ್ಲಿ ಯಾರು ಶ್ರೇಷ್ಠರೆಂಬುದನ್ನು ಅರಿಯಲು ಭೃಗುಮಹರ್ಷಿಗಳನ್ನು ಕಳುಹಿಸಿದ್ದರು. ಭೃಗುಗಳು ಮೊದಲು ಕೈಲಾಸಕ್ಕೆ ಹೋದಾಗ ರುದ್ರದೇವನು ಭೃಗುಗಳನ್ನು ಆಲಿಂಗಿಸಲು ಪ್ರಯತ್ನಪಟ್ಟಾಗ, ಕಾಮಾತುರನಾದ ರುದ್ರನನ್ನು ತಿರಸ್ಕರಿಸಿದರು. ಕೋಪಗೊಂಡ ರುದ್ರನು ಭೃಗುಗಳನ್ನು ಕೊಲ್ಲಲು ಮುಂದುವರಿದಾಗ ಪಾರ್ವತೀದೇವಿಯು ಅದನ್ನು ತಡೆಗಟ್ಟಿದಳು.

ಆಗ ಭೃಗುವು ನಾರೀಸಂಗಮುಮತ್ತನಾಗಿ ತನಗೆ ಅವಮಾನಗೊಳಿಸಿದ ರುದ್ರನಿಗೆ, ನಿನ್ನ ನಿಜವಾದ ಆಕಾರಕ್ಕೆ ಲೋಕದಲ್ಲಿ ಪೂಜೆಯು ಸಲ್ಲುವುದು ಬೇಡ.

ಯೋನಿ ಲಿಂಗರೂಪನಾಗಿಯೇ ಲೋಕದಲ್ಲಿ ನಿನಗೆ ಪೂಜೆ ಪುರಸ್ಕಾರಗಳು ದೊರಕಲಿ ಎಂದು ಶಾಪವನ್ನಿತ್ತರು. ಅದರ ಪ್ರಭಾವದಿಂದಲೇ ಶಿವನನ್ನು ಅನುಸರಿಸಿರುವವರು ಅಂದರೆ ಶಿವಭಕ್ತರು ಇಂದಿಗೂ ಲಿಂಗವನ್ನು ತಮ್ಮ ಕುತ್ತಿಗೆಗೆ ಕಟ್ಟಿಕೊಳ್ಳುತ್ತಾರೆ. ಯಾರು ಅಂತಹ ಭೃಗುವಿನಿಂದಲೂ ಪೂಜಿಸಲ್ಪಟ್ಟಿರುತ್ತಾನೆಯೋ ಆ ಶ್ರೀಹರಿಗೆ ಸಮನಾದವರು ಯಾರು ಇರುತ್ತಾರೆ? ಪ್ರತಿವಾದಿಗಳೇ ಹೇಳಲಿ.

**ವಮ್ರೀರೂಪಧರಃ ಶಕ್ರಃ ಚಿಬುಕಾಧಃ ಸ್ವಲೀಲಯಾ ।**
**ಶಿವೇನ ಸ್ಥಾಪಿತಪಿನಾಕಸ್ಯ ಜ್ಯಾಮಾಚ್ಛಿನತ್ ಕಿಲ ॥ ೩೧೭ ॥**

**ಛಿನ್ನಜ್ಯೇನ ಸ್ವಧನುಷಾ ಛಿನ್ನೇ ಚ ಶಿವಮಸ್ತಕೇ ।**
**ಪ್ರವರ್ಗ್ಯಾಭಿಧಯಾऽऽಹುತ್ಯಾ ಹುತ್ವಾ ಶ್ರೀವಿಷ್ಣುಮವ್ಯಯಮ್ ॥ ೩೧೮ ॥**

**ಪ್ರತೋಷ್ಯ ತಸ್ಯ ಕೃಪಯಾ ಸುರಾಃ ಸರ್ವೇ ಪುನರ್ಭುವಿ ।**
**ಪತಿತಂ ತಚ್ಛಿರಃ ಶಂಭೋಃ ಕಥಂ ತೇ ಸಂದಧುಃ ಕಿಲ ॥ ೩೧೯ ॥**

**ಸಮೋऽಸ್ಯ ಸ ಕಥಂ ಶಂಭೋಃ ವದಂತು ಪ್ರತಿವಾದಿನಃ ।**

ರುದ್ರನು ಒಂದಾವರ್ತಿ ಲೀಲೆಯಿಂದ ತನ್ನ ಗದ್ದವನ್ನು ಧನುಸ್ಸಿನಮೇಲಿಟ್ಟು ಕೊಂಡು ಕುಳಿತಿದ್ದನು. ಆಗ ಇಂದ್ರನು ಒಂದು ಕೀಟರೂಪದಿಂದ ಬಂದು ಆ ಧನುಸ್ಸಿನ ಹೆದೆಯನ್ನು ತುಂಡರಿಸಿದನು. ಆ ಕೂಡಲೇ ರುದ್ರನ ರುಂಡವು ಕತ್ತರಿಸಿ ಬೇರ್ಪಟ್ಟಿತು. ಶಿವನ ಧನುಸ್ಸಿನಿಂದ ಶಿವನ ತಲೆಯು ಕತ್ತರಿಸಲ್ಪಟ್ಟಾಗ ದೇವತೆಗಳು ಗಾಬರಿಗೊಂಡು ಶಿವನ ಉಜ್ಜೀವನಕ್ಕಾಗಿ ಪ್ರವರ್ಗ್ಯಹುತಿಯಿಂದ ಸರ್ವಸ್ವಾಮಿಯಾದ ಶ್ರೀವಿಷ್ಣುವನ್ನು ಉದ್ದೇಶಿಸಿ ಹೋಮಮಾಡಿ ಸಂತೋಷ ಗೊಳಿಸಿ ಕತ್ತರಿಸಲ್ಪಟ್ಟು ಭೂಮಿಯಲ್ಲಿ ಬಿದ್ದಿದ್ದ ಆ ತಲೆಯನ್ನು ಮತ್ತೆ ಶಿವನ ಮುಂಡಕ್ಕೆ ಸೇರಿಸಿದರು.

ಇಂತಹ ಶಿವನಿಗೆ ಪ್ರಾಣದಾನವನ್ನು ಮಾಡಿದ ಸರ್ವೋತ್ತಮದೇವತೆಯಾದ ಶ್ರೀವಿಷ್ಣುವಿಗೆ ರುದ್ರನು ಹೇಗೆ ಸಮನಾಗುತ್ತಾನೆ? ಪ್ರತಿವಾದಿಗಳು ಹೇಳಲಿ.

**ಪುರಾऽಮರ್ತ್ಯೈಃ ಕೃತೇ ಯಸ್ಯ ಯಜ್ಞೇ ಪಶುಪತಿಃ ಪಶುಃ ॥ ೩೨೦ ॥**
**ಇತಿ ಪುಂಸೂಕ್ತ ಏವೋಕ್ತಂ ಸರ್ವೇಷಾಂ ಸಮ್ಮತಂ ಕಿಲ ।**
**ಏವಂಚ ಯಜ್ಞಕರ್ತಾರೋ ಬ್ರಹ್ಮಾದ್ಯಾ ವಾ ಮಹೇಶಃ ಪಶುಃ ॥ ೩೨೧ ॥**

**ಶಿವೋ ವಾऽಥ ಹರಿಃ ಪೂಜ್ಯೋ ವದಂತು ಪ್ರತಿವಾದಿನಃ ।**
**(ಶಿವೋ ವಾ ಹರಿಪೂಜ್ಯಃ ಕಃ ವದಂತು ಪ್ರತಿವಾದಿನಃ) ॥ ೩೨೨ ॥**

ಹಿಂದೆ ದೇವತೆಗಳೆಲ್ಲಾ ಸೇರಿ ವಿಷ್ಣುವನ್ನು ಉದ್ದೇಶಿಸಿ ಒಂದು ಯಾಗವನ್ನು ಆಚರಿಸಿದರು. ಆ ಯಜ್ಞಕ್ಕೆ ರುದ್ರನು ಪಶುವಾಗಿದ್ದನು. ಇದು ಪುರುಷ ಸೂಕ್ತದಲ್ಲಿ ಹೇಳಿದೆ. ಪ್ರಸಿದ್ಧವಾಗಿದೆ.

ಇದು ಸರ್ವರಿಗೂ ಸಮ್ಮತವಾದ ಸಂಗತಿಯಾಗಿದೆ. ಏನಂಚ ಬ್ರಹ್ಮಾದಿ ದೇವತೆಗಳು ನಡೆಸಿದ ಯಜ್ಞದಲ್ಲಿ ಶಿವನು ಪಶುವಿನಂತಾಗಿರುವಾಗ ಸರ್ವೋತ್ತಮ ವಾದ ಪೂಜ್ಯನಾದ ದೇವತೆಯು ಹರನೋ ಅಥವಾ ಹರಿಯೋ ಪ್ರತಿವಾದಿಗಳು ಹೇಳಲಿ.

**ಯಂ ವಿಷ್ಣುಂ ಹವಿಷಾऽಭ್ಯರ್ಚ್ಯ ರುದ್ರೋ ರೌದ್ರಪದಂ ಕಿಲ ।**
**ಲೇಭೇ ಸ ಕಸ್ಯ ವಾ ಅರ್ಚ್ಯೋ ನ ವದಂತು ಪ್ರತಿವಾದಿನಃ ॥ ೩೨೩ ॥**

(ಉಗ್ರತಪಾ ಎಂಬ ರುದ್ರಪದವಿಗೆ ಬರಲು ಅರ್ಹರಾದ ದೇವತೆಯು)— ರುದ್ರನು ಹವಿಸ್ಸಿನಿಂದ ಯಾವ ವಿಷ್ಣುವನ್ನು ಭಕ್ತಿಪೂರ್ವಕವಾಗಿ ಆರಾಧಿಸಿ ರುದ್ರ ಪದವಿಯನ್ನು ಪಡೆದನೋ ಅಂತಹ ವಿಷ್ಣುವು ಯಾರಿಗೆ ತಾನೇ ಪೂಜ್ಯನಲ್ಲ. ಪ್ರತಿವಾದಿಗಳು ಹೇಳಲಿ.

**ಆತನೋಮಿ ಧನುರ್ಹಂತುಂ ರುದ್ರಂ ಬ್ರಹ್ಮದ್ವಿಷಂ ಲಯೇ ॥ ೩೨೪ ॥**

**ಯಂ ರುದ್ರಂ ಕಾಮಯೇ ಕರ್ತುಂ ತಂ ಕರೋಮಿ ಕ್ಷಣಾತ್ ಹರಮ್ ।**
**ಮಮ ಯೋನಿಃ ಸಮುದ್ರೇऽನ್ತರಿತಿ ಯಸ್ಯ ವಧೂರ್ಜಗೌ ॥ ೩೨೫ ॥**

**ಹರೇಃ ತಸ್ಯ ಸಮಃ ಕಃ ಸ್ಯಾತ್ ವದಂತು ಪ್ರತಿವಾದಿನಃ ।**

ಬ್ರಹ್ಮನ ಐದನೇ ಮುಖವನ್ನು ಕತ್ತರಿಸಿದ ರುದ್ರನನ್ನು ಮಹಾಪ್ರಳಯದಲ್ಲಿ ಕೊಲ್ಲಲು ನಾನು ಧನುಸ್ಸನ್ನು ಪ್ರಯೋಗಿಸುತ್ತೇನೆ.

ಅದರೆ ರುದ್ರಪದವಿಗೆ ಯೋಗ್ಯನಾದವನನ್ನು ಸಾಧನಪೂರ್ತಿಯಾಗಿರಶಕ್ಯನ ನನ್ನು ನಾನು ಕ್ಷಣಮಾತ್ರದಲ್ಲಿ ರುದ್ರನನ್ನಾಗಿ ಮಾಡುತ್ತೇನೆ. ಹಾಗೆಯೇ ಸಾಧನ ಸಂಪತ್ತು ಪೂರ್ತಿಯಾಗಿ ಬ್ರಹ್ಮಪದವಿಗೆ ಅರ್ಹನಾದವನನ್ನು (ಪ್ರಧಾನ ವಾಯು

ದೇವನನ್ನು ) ಬ್ರಹ್ಮಪದವಿಯನ್ನು ಕೊಟ್ಟು ಬ್ರಹ್ಮನನ್ನಾಗಿ ಮಾಡುತ್ತೇನೆ. ಋಷಿ ಪದವಿಗೆ ಅರ್ಹನಾದವನನ್ನು ಋಷಿಯನ್ನಾಗಿಯೂ, ಜ್ಞಾನಿ ಪದವಿಗೆ ಯೋಗ್ಯತೆ ಯುಳ್ಳವನನ್ನು ಜ್ಞಾನಿಯನ್ನಾಗಿಯೂ ಮಾಡುತ್ತೇನೆ. ಹೀಗೆ ಬ್ರಹ್ಮಾದಿಗಳ ಪದವಿಗಳನ್ನು ಅನುಗ್ರಹಿಸತಕ್ಕ ಸಾಮರ್ಥ್ಯವುಳ್ಳ ನನಗೂ ಸಹ ನಿಯಾಮಕ ನಾದವನು, ಕಾರಣನಾದವನು ಸಮುದ್ರದ ಮಧ್ಯದಲ್ಲಿ ಇದ್ದಾನೆ ಎಂದು ಯಾವ ಶ್ರೀಹರಿಯ ಧರ್ಮಪತ್ನಿಯಾದ ಶ್ರೀಮಹಾಲಕ್ಷ್ಮಿಯು ಅಂಭ್ರಣೀ ಸೂಕ್ತದಲ್ಲಿ ಹೇಳಿದ್ದಾಳೋ ಅಂತಹ ಶ್ರೀರಮಾಪತಿಗೆ ಸಮರು ಯಾರಿರುತ್ತಾರೆ? ಪ್ರತಿವಾದಿಗಳು ಹೇಳಲಿ.

ಇತಿ ಯುಕ್ತ್ಯಾ ಶ್ರುತಿಶತೈಃ ಯಃ ಸ್ಮೃತ್ಯಾ
ಚಾರ್ಚಿತೋಽಚ್ಯುತಃ ॥ ೩೨೬ ॥

ತಸ್ಯಾಗ್ರೇ ಕಃ ಸಮಃ ತಿಷ್ಠೇತ್ ವದಂತು ಪ್ರತಿವಾದಿನಃ ।

ಈ ರೀತಿಯಾದ ಯುಕ್ತಿಯಿಂದಲೂ, ಅನಂತ ವೇದವಾಕ್ಯಗಳಿಂದಲೂ, ಸಹಸ್ರಾರು ಸ್ಮೃತಿ ವಚನಗಳಿಂದಲೂ, ಸರ್ವೋತ್ತಮದೇವನೆಂದು ಪ್ರತಿಪಾದಿಸ ಲ್ಪಟ್ಟ, ಎಲ್ಲರಿಂದಲೂ ಪೂಜಿಸಲ್ಪಟ್ಟ ಅಚ್ಯುತನಿಗೆ ಸಮನಾಗಿ ಯಾರು ತಾನೇ ನಿಲ್ಲಲು ಸಾಧ್ಯ? ಪ್ರತಿವಾದಿಗಳು ಹೇಳಲಿ.

ಯೋಽಸೌ ಮಂದರಭಾರೇಣ ಭಿನ್ನಬಾಹೂರುಕಂಧರಾನ್ ॥ ೩೨೭ ॥

ಸುರಾನ್ ಸಂಜೀವಯಾಮಾಸ ತತ್ಸಮೋಽಸ್ತೀತಿ ಕೋ ವದೇತ್ ।

ಯಾವ ಪರಮಾತ್ಮನಾದ ಶ್ರೀಹರಿಯು ಸಮುದ್ರವನ್ನು ಮಥನಮಾಡುವ ಸಂದರ್ಭದಲ್ಲಿ ಮಂದರಪರ್ವತವನ್ನು ಎತ್ತುವಾಗ ಮತ್ತು ಮಂದರಪರ್ವತದಿಂದ ಕ್ಷೀರಸಮುದ್ರವನ್ನು ಕಡೆಯುವಾಗ ಅದರ ಅತಿಯಾದ ಭಾರದಿಂದ ಮುರಿದು ಹೋದ ತೋಳು, ತೊಡೆ, ಮೊಣಕಾಲು, ಕುತ್ತಿಗೆಗಳನ್ನು ಉಳ್ಳವರಾಗಿದ್ದ ದೇವತೆ ಗಳನ್ನೆಲ್ಲಾ ಬದುಕಿಸಿದನೋ, ಅಂತಹ ಶ್ರೀವಿಷ್ಣುವಿಗೆ ಸಮನಾದವನು ಇದ್ದಾನೆಂದು ಯಾರುತಾನೇ ಹೇಳಿಯಾರು!

ಯಶ್ಚ ವಾಮಕರೇಣೈವ ಲೀಲಯೋದ್ಧೃತ್ಯ ಮಂದರಮ್ ॥ ೩೨೮ ॥
ಆರೋಪ್ಯ ಗರುಡೇ ಪ್ರಾಪ ತತ್ಸಮೋಽಸ್ತೀತಿ ಕೋ ವದೇತ್ ।

ಯಾವ ಶ್ರೀವಿಷ್ಣುವು ಅನಾಯಾಸವಾಗಿ ಮಂದರಪರ್ವತವನ್ನು ತನ್ನ ಎಡಗೈ ಯಿಂದಲೇ ಮೇಲಕ್ಕೆ ಎತ್ತಿ ಗರುಡನ ಮೇಲೆ ಕುಳಿತು ಬಂದನೋ ಅಂತಹ ಅಚಿಂತ್ಯ ಶಕ್ತಿ ಸಂಪನ್ನನಾದ ಶ್ರೀವಿಷ್ಣುವಿಗೆ ಸಮಾನನಾದವನು ಇದ್ದಾರೆಂದು ಯಾರು ಹೇಳುತ್ತಾರೆ ?

**ಯಶ್ಚ ದೇವಾಸುರಕರೋತ್ಕ್ಷಿಪ್ತಂ ಮಂದರಾಚಲಮ್ || ೩೨೯ ||**
**ಉದ್ಧಧ್ರೇ ಕೂರ್ಮರೂಪೇಣ ತತ್ಸಮೋಽಸ್ತೀತಿ ಕೋ ವದೇತ್ ।**

ಯಾರು ದೇವತೆಗಳಿಂದಲೂ ಅಸುರರಿಂದಲೂ ಎತ್ತಲ್ಪಟ್ಟ ಮಂದರಪರ್ವತ ವನ್ನು ಕೆಳಗೆ ಕೂರ್ಮರೂಪದಿಂದ ಬೆನ್ನಿನಮೇಲೆ ಧರಿಸಿ ಆ ಪರ್ವತದಿಂದ ಕ್ಷೀರ ಸಮುದ್ರವನ್ನು ಕಡೆಯಲು ಸೌಕರ್ಯ ಮಾಡಿಕೊಟ್ಟನೋ ಅಂತಹ ಶ್ರೀಹರಿಗೆ ಸಮಾನನಾದವನಿದ್ದಾನೆಂದು ಯಾರುತಾನೇ ಹೇಳಿಯಾರು !

**ಯಶ್ಚ ನಾರಾಯಣೀ ಭೂತ್ವಾ ವಿಮೋಹ್ಯಾಸುರಮಂಡಲೀಮ್ ।**
**ಸುಧಾಮಪಾಯಯದ್ದೇವಾನ್ ತತ್ಸಮೋಽಸ್ತೀತಿ ಕೋ ವದೇತ್ ||೩೩೦||**

ಯಾರು ಮೋಹಿನೀರೂಪವನ್ನು ಧರಿಸಿ, ಅಮೃತಪಾನಮಾಡಲು ಅನರ್ಹ ರಾದ ದೈತ್ಯವರ್ಗಕ್ಕೆ ಅದನ್ನು ದಕ್ಕದಂತೆ ಮಾಡಿ ಆ ಅಮೃತವನ್ನು ಪಾನಮಾಡಲು ಅರ್ಹರಾದ ದೇವತೆಗಳಿಗೆ ಕುಡಿಸಿದನೋ ಅಂತಹ ಶ್ರೀಮನ್ನಾರಾಯಣನಿಗೆ ಸಮರಿದ್ದಾರೆಂದು ಯಾವನು ಹೇಳುತ್ತಾನೆ ?

**ಯಶ್ಚಾಶಕ್ತಾನ್ ಸುರವರಾನ್ ಶಕ್ತ್ಯಾಽಽವಿಶ್ಯ ಮಹಾಪ್ರಭುಃ ।**
**ಚಕ್ರಶಕ್ತಿಯುತಾನ್ ವಿಷ್ಣುಃ ತತ್ಸಮೋಽಸ್ತೀತಿ ಕೋ ವದೇತ್ ||೩೩೧||**

ಯಾರು ದೈತ್ಯರನ್ನು ನಾಶಮಾಡುವುದರಲ್ಲಿ ಅಶಕ್ತರಾಗಿರುವ ಭಕ್ತರಾದ ದೇವತೆಗಳಲ್ಲಿ ತಾನು ಪ್ರವೇಶಿಸಿ ಅವರಿಗೆ ಶಕ್ತಿಯನ್ನು ಕೊಟ್ಟು ಕಾಪಾಡಿದ್ದಾನೆಯೋ ಅಂತಹ ಶ್ರೀವಿಷ್ಣುವಿಗೆ ಸಮನಾದವನಿದ್ದಾನೆಂದು ಯಾವನು ಹೇಳಿಯಾನು !

**ಯಂ ಶ್ರೀಃ ಸ್ವಯಂವರೇ ದೇವಾನ್ ಧಿಕ್ಕೃತ್ಯ ಭವಪೂರ್ವಕಾನ್ ।**
**ವವ್ರೇ ಗುಣಾಧಿಕಂ ಮತ್ವಾ ತತ್ಸಮೋಽಸ್ತೀತಿ ಕೋ ವದೇತ್ || ೩೩೨ ||**

ಕ್ಷೀರಸಾಗರಸಮುತ್ಪನ್ನಳಾದ ಯಾವ ಶ್ರೀಮಹಾಲಕ್ಷ್ಮಿಯು ಸ್ವಯಂವರ ಸಮಯದಲ್ಲಿ ರುದ್ರ ಮೊದಲಾದ ದೇವತೆಗಳೊಬ್ಬೊಬ್ಬರಲ್ಲೂ ಒಂದೊಂದು

ಬಗೆಯಾವ ದೋಷವಿರುವುದನ್ನು ಎತ್ತಿತೋರಿಸಿ, ಸಕಲ ದೋಷದೂರನಾದ ಅನಂತಕಲ್ಯಾಣ ಗುಣಪರಿಪೂರ್ಣನಾದ ಶ್ರೀಮಹಾವಿಷ್ಣುವನ್ನೇ ತನ್ನ ಪತಿಯನ್ನಾಗಿ ವರಿಸಿರುವಳೋ ಅಂತಹ ಸರ್ವೋತ್ತಮನಾದ ಶ್ರೀಮನ್ನಾರಾಯಣನಿಗೆ ಸಮರಿದ್ದಾರೆಂದು ಯಾರು ಹೇಳುತ್ತಾರೆ?

ಈ ವಿಷಯದಲ್ಲಿ ಶ್ರೀಮದ್ಭಾಗವತದ ವಚನವು ಈ ರೀತಿ ಇದೆ.

**ಇತ್ಥಂ ಭಾಗವತೇ ಗ್ರಂಥೇ ಬಹುಧಾ ಬಾದರಾಯಣಿಃ ।**
**ಉತ್ತಮತ್ವೇನ ಯಂ ಸ್ತೌತಿ ತತ್ಸಮೋಽಸ್ತೀತಿ ಕೋ ವದೇತ್ ॥ ೩೩೩ ॥**

ಹೀಗೆ ಶ್ರೀಮದ್ಭಾಗವತ ಗ್ರಂಥದಲ್ಲಿ ಅನೇಕ ಬಗೆಯಾಗಿ (ಬಹಳ ವಿಧವಾಗಿ) ಶ್ರೀಬಾದರಾಯಣರು (ಶ್ರೀವೇದವ್ಯಾಸರು) ಯಾರನ್ನು (ಯಾವ ಶ್ರೀಮನ್ನಾರಾಯಣನನ್ನು) ಸರ್ವೋತ್ತಮನೆಂದು ಸ್ತೋತ್ರ ಮಾಡುತ್ತಿರುವರೋ ಅಂತಹ ವಿಷ್ಣುವಿಗೆ ಸಮರಿರುತ್ತಾರೆಂದು ಯಾವನು ಹೇಳುತ್ತಾನೆ? ಯಾರೂ ಹೇಳುವಂತೆಯೇ ಇಲ್ಲ.

**ಯಂ ಚ ಸರ್ವೇಶ್ವರತ್ವೇನ ಸರ್ವಜ್ಞತ್ವಾದಿನಾ ಜಗೌ ।**
**ಮಾಂಡೂಕೋಪನಿಷದ್ವಿಷ್ಣುಂ ತತ್ಸಮೋಽಸ್ತೀತಿ ಕೋ ವದೇತ್ ॥ ೩೩೪ ॥**

ಮಾಂಡೂಕೋಪನಿಷತ್ತಿನಲ್ಲಿ ಯಾರು ಸರ್ವೇಶ್ವರನೆಂದೂ, ಸರ್ವಜ್ಞನೆಂದೂ (ಪ್ರತಿಪಾದಿಸಲ್ಪಟ್ಟಿರುತ್ತಾನೆಯೋ) ಹೇಳಲ್ಪಟ್ಟಿರುತ್ತಾನೆಯೋ ಅಂತಹ ಶ್ರೀವಿಷ್ಣುವಿಗೆ ಸಮನಿರುತ್ತಾನೆಂದು ಯಾವನು ಹೇಳುತ್ತಾನೆ? ಯಾರೂ ಹೇಳುವುದಿಲ್ಲವೆಂದು ಅಭಿಪ್ರಾಯ.

**ಬಿಭರ್ತಿ ಮಸ್ತಕೇ ಯಸ್ಯ ಪಾದತೀರ್ಥಮಹರ್ನಿಶಮ್ ।**
**ಸ ಶಂಭುಸ್ತಸ್ಯ ಕೃಷ್ಣಸ್ಯ ಪೂಜಕೋ ನೇತಿ ಕೋ ವದೇತ್ ॥ ೩೩೫ ॥**

ಯಾವ (ರುದ್ರನು) ಶಂಭುವು ಹಗಲೂ ರಾತ್ರಿ ಯಾವಾಗಲೂ ಯಾವ ಶ್ರೀಹರಿಯ ಪಾದೋದಕವೆಂದು ಸುಪ್ರಸಿದ್ಧವಾದ ಗಂಗೆಯನ್ನು ತನ್ನ ತಲೆಯ ಮೇಲೆ ಧರಿಸಿರುತ್ತಾನೆಯೋ ಅಂತಹ ಶಂಭುವು ಶ್ರೀಹರಿಯ ಪೂಜಕನು ಎಂದು ಯಾರು ಹೇಳುವುದಿಲ್ಲ?

**ವಾರಾಣಸ್ಯಾಂ ಯಸ್ಯ ನಾಮ ಜಪನ್ ಅಟತಿ ಸಂತತಮ್ ।**
**ಸ ಶಂಕರೋ ರಾಮಪಾದಕಿಂಕರೋ ನೇತಿ ಕೋ ವದೇತ್ ॥ ೩೩೬ ॥**

ಕಾಶೀಕ್ಷೇತ್ರದಲ್ಲಿ " ರಾಮ, ರಾಮ, ರಾಮ " ಎಂಬುದಾಗಿ ಯಾವಾಗಲೂ ರಾಮತಾರಕ ಮಂತ್ರವನ್ನು ಜಪಿಸುತ್ತಾ ತಿರುಗಾಡುತ್ತಿರುವ ಆ ಶಂಕರನನ್ನು, ರಾಮಪಾದ ಸೇವಕನೆಂದು ಯಾರು ಹೇಳುವುದಿಲ್ಲ?

ವಿಶೇಷಾಂಶ :—ಜಾಬಾಲಶ್ರುತಿಯಲ್ಲಿಯೂ, ರಾಮೋಪನಿಷತ್ತಿನಲ್ಲಿಯೂ ಈ ವಿಚಾರವು ವಿಸ್ತಾರವಾಗಿ ಕಂಡುಬಂದಿದೆ.

ಶ್ರೀರಾಮಮಂತ್ರಂ ಕಾಶ್ಯಾಂ ವೈ ಜಜಾಪ ವೃಷಭಧ್ವಜಃ ।
ಮನ್ವಂತರಸಹಸ್ರೈಸ್ತು ಜಪಹೋಮಾರ್ಚನಾದಿಭಿಃ ॥
ತತಃ ಪ್ರಸನ್ನೋ ಭಗವಾನ್ ಶ್ರೀರಾಮಃ ಪ್ರಾಹ ಶಂಕರಮ್ ।
ವೃಣೀಷ್ವ ಯದಭೀಷ್ಟಂ ತೇ ದಾಸ್ಯಾಮಿ ಪರಮೇಶ್ವರ ॥ ಇತಿ
ಸತ್ಯಾನಂದಚಿದಾತ್ಮಾನಂ ಪ್ರಾಹ ಶ್ರೀರಾಮಮೀಶ್ವರಃ ।
ಮಣಿಕರ್ಣೇ ಮಹಾಕ್ಷೇತ್ರೇ ಗಂಗಾಭುವಿ ತಟೇ ಪುನಃ ॥
ಮ್ರಿಯಂತೇ ಯೇ ಪ್ರಭೋ ದೇಹಿ ಮುಕ್ತಿಂ ನಾತೋ
ವರಾಂತರಮ್ ॥ ಇತಿ

ಸ ಹೋವಾಚ ಶ್ರೀರಾಮಚಂದ್ರಃ —
ಕ್ಷೇತ್ರೇ ತ್ವದೀಯೇ ದೇವೇಶ ಯತ್ರಕುತ್ರಾಪಿ ವಾ ಮೃತಾಃ ।
ಕೃಮಿಕೀಟಾದಯೋಽಪ್ಯಾಶು ಮುಕ್ತಾಸ್ಸಂತು ನ ಚಾನ್ಯಥಾ ॥
ಅವಿಮುಕ್ತೇ ತವ ಕ್ಷೇತ್ರೇ ಸರ್ವೇಷಾಂ ಮುಕ್ತಿಸಿದ್ಧಯೇ ।
ಅಹಂ ಸನ್ನಿಹಿತಸ್ತತ್ರ ಶಿಲಾದಿಪ್ರತಿಮಾದಿಷು ।
ಮುಮುಕ್ಷೋಃ ದಕ್ಷಿಣೇ ಕರ್ಣೇ ಯಸ್ಯ ಕಸ್ಯಾಪಿ ವಾ ಸ್ವಯಮ್ ॥
ಉಪದೇಕ್ಷ್ಯತಿ ಮನ್ಮಂತ್ರಂ ಸ ಮುಕ್ತೋ ಭವಿತಾ ಶಿವ ॥ ಇತಿ

ಶ್ರೀರಾಮೋಪನಿಷತ್ತಿನಲ್ಲಿ ಉಕ್ತವಾಗಿರುವ ಕಾಶೀಕ್ಷೇತ್ರದ ವಿಚಾರ— ಕಾಶೀಕ್ಷೇತ್ರದಲ್ಲಿ ವೃಷಭಧ್ವಜನಾದ ರುದ್ರದೇವನು, ಸಹಸ್ರ ಮನ್ವಂತರ ಸಮಯದವರೆವಿಗೆ, ಜಪ, ಹೋಮ, ಪೂಜಾದಿಗಳಿಂದ ಶ್ರೀರಾಮಮಂತ್ರವನ್ನು

ಭಕ್ತಿಯಿಂದ ಜಪಿಸಿದನು. ಅದಕ್ಕೆ ಪ್ರಸನ್ನನಾದ ಶ್ರೀರಾಮನು ಪಾರ್ವತೀಪತಿಗೆ ವರವನ್ನು ಕೇಳೆಂದು ಹೇಳಿದನು. ಶಂಕರನು, ಕಾಶೀಕ್ಷೇತ್ರದಲ್ಲಿ ಪವಿತ್ರವಾದ ಗಂಗಾನದಿಯ ದಡದಲ್ಲಿರುವ ಮಣಿಕರ್ಣಿಕಾಘಟ್ಟದಲ್ಲಿ ಯಾರು ಮರಣವನ್ನು ಹೊಂದುವರೋ ಅವರಿಗೆ (ಪಾಪರಾಶಿಯಿಂದ) ಮುಕ್ತಿಯನ್ನು ಅನುಗ್ರಹಿಸು, ಇದೊಂದು ವರವನ್ನು ಕೊಡು, ಬೇರೆ ವರವು ಬೇಡವೆಂದು ಕೇಳಿದನು. ಆ ವರ ವನ್ನು ಕೊಟ್ಟು ಮರಣಶೀಲನಾದ ಮುಮುಕ್ಷುವಾದ ಮಾನವನ ಬಲಭಾಗದ ಕಿವಿಯಲ್ಲಿ "ಶ್ರೀರಾಮತಾರಕ ಮಂತ್ರವನ್ನು ಉಪದೇಶ ಮಾಡಬೇಕು. ಆ ಮಂತ್ರ ಪ್ರಭಾವದಿಂದ ಆಯಾ ಜೀವನ ಪ್ರಾರಬ್ಧಕರ್ಮಾನುಸಾರವಾಗಿ ಅನುಭವಿಸ ಬೇಕಾದುದನ್ನೆಲ್ಲಾ ಅನುಭವಿಸಿ ಕ್ರಮವಾಗಿ ಪರಮಾತ್ಮನ ತತ್ವಜ್ಞಾನ ಮತ್ತು ಪ್ರಸಾದಾದಿಗಳಿಂದ ಮೋಕ್ಷವನ್ನು ಪಡೆಯುತ್ತಾನೆ" ಎಂದು ಶ್ರೀರಾಮನು ಶಿವನಿಗೆ ವರವನ್ನಿತ್ತನು.

ಈ ರೀತಿ ತಾರಕರಾಮಬ್ರಹ್ಮಮಂತ್ರದ ಜಪದ ಪ್ರಭಾವದಿಂದಲೇ ತನ್ನ ಇಷ್ಟವನ್ನು ಶ್ರೀರಾಮನಿಂದ ಪಡೆದ ರುದ್ರನು ಶ್ರೀರಾಮನ ಪಾದಗಳ ಕಿಂಕರನಲ್ಲ ವೆಂದು ಯಾರು ಹೇಳುತ್ತಾರೆಂದು ಅಭಿಪ್ರಾಯ.

**ಇತ್ಥಂ ಭಗವತಶ್ಚಿತ್ರೈಃ ವಚೋಭಿಸ್ಸ ಸುಪೇಶಲೈಃ ॥ ೩೩೭ ॥**
**ಭಿನ್ನಧೀಃ ವಿಸ್ಮೃತಃ ಶೀರ್ಷ್ಣಿ ಸ್ವಹಸ್ತಂ ಕುಮತಿರ್ವ್ಯಧಾತ್ ।**
**ಮುಮುಚುಃ ಪುಷ್ಪವರ್ಷಾಣಿ ಹತೇ ಪಾಪೇ ವೃಕಾಸುರೇ ॥ ೩೩೮ ॥**
**ದೇವರ್ಷಿಪಿತೃಗಂಧರ್ವಾ ಮೋಚಿತಃ ಸಂಕಟಾತ್ ಶಿವಃ ।**
**ಇತಿ ಭಾಗವತೇ ಸ್ಪಷ್ಟಮುಕ್ತತ್ವಾಚ್ಚ ಸದಾಶಿವಃ ॥ ೩೩೯ ॥**
**ಭಸ್ಮಾಸುರಭಯಾದ್ಭೀತೋ ಯಮಾಶ್ರಿತ್ಯ ಭಯಂ ಜಹೌ ।**
**ಸ ಶ್ರೀಕಂಠೋ ವಿಕುಂಠಸ್ಯ ಕಿಂಕರೋ ನೇತಿ ಕೋ ವದೇತ್ ॥ ೩೪೦ ॥**

ವೃಕಾಸುರನೇ ಭಸ್ಮಾಸುರ. ಈ ಕಥೆಯು ಶ್ರೀಮದ್ಭಾಗವತದ ಹತ್ತನೆಯ ಸ್ಕಂಧದಲ್ಲಿ ಉಕ್ತವಾಗಿದೆ. ಹಿಂದೆ ೧೫೪ ನೆಯ ಶ್ಲೋಕದ ಅರ್ಥವನ್ನು ವಿವರಿಸು ವಾಗ ಇದರ ವಿವರಣೆಯನ್ನು ಕೊಡಲಾಗಿದೆ. ಆದುದರಿಂದ ಪುನಃ ಅದನ್ನು ಇಲ್ಲಿ ವಿವರಿಸಿಲ್ಲ.

ಭಸ್ಮಾಸುರನ ಭಯದಿಂದ ಕೂಡಿ ದಿಕ್ಕುದಿಕ್ಕಿಗೂ ಓಡಿ, ಇತರರಾರಿಂದಲೂ ರಕ್ಷಣೆಯನ್ನು ಪಡೆಯದೇ ತಾನೂ ಸಹ ತನ್ನ ಸಾಮರ್ಥ್ಯದಿಂದ ರಕ್ಷಿಸಿಕೊಳ್ಳಲು

ಅಸಮರ್ಥನಾದ ರುದ್ರನು ಕಡೆಗೆ ವೈಕುಂಠಕ್ಕೆ ಹೋಗಿ ಶ್ರೀವಿಷ್ಣುವನ್ನೇ ಮರೆ ಹೊಕ್ಕನು. ಭಕ್ತಪರಾಧೀನನಾದ ಶ್ರೀಹರಿಯು ಬ್ರಹ್ಮಚಾರಿ ವೇಷಧಾರಿಯಾಗಿ ಚಮತ್ಕಾರವಾದ ನುಡಿಯಿಂದ ಆ ಭಸ್ಮಾಸುರನ ಕೈಯಿಂದಲೇ ಅವನನ್ನು ಭಸ್ಮೀ ಭೂತನನ್ನಾಗಿ ಮಾಡಿ ಶ್ರೀಕಂಠನನ್ನು ರಕ್ಷಿಸಿದನು. ಇಂತಹ ವಿಕುಂಠನಾದ ಶ್ರೀಹರಿಗೆ ವಿಷಕಂಠನು ಕಿಂಕರನಲ್ಲವೆಂದು ಯಾರು ಹೇಳಿಯಾರು ?

**ಯಜ್ಞವಾಸ್ತುಗತಂ ಸರ್ವಂ ಉಚ್ಛಿಷ್ಟಂ ಋಷಯಃ ಕ್ವಚಿತ್ ।**
**ಚಕ್ರುರ್ಹಿ ಭಾಗಂ ರುದ್ರಾಯ ಸ ದೇವಃ ಸರ್ವಮರ್ಹತಿ ॥ ೩೪೧ ॥**

**ಇತಿ ಭಾಗವತೇ ಯಸ್ಮಾತ್ ಮನುರಾಹ ಸುತಂ ಪ್ರತಿ ।**
**ತಸ್ಮಾದ್ಯಜ್ಞಭುಜೋ ವಿಷ್ಣೋರತ್ಯುಚ್ಛಿಷ್ಟಂ ಹರಃ ಕಿಲ ॥ ೩೪೨ ॥**

**ಈದೃಶಃ ಶಂಕರೋ ವಿಷ್ಣುಕಿಂಕರೋ ನೇತಿ ಕೋ ವದೇತ್ ।**

ಋಷಿಗಳೆಲ್ಲಾ ಸೇರಿ ಯಜ್ಞವನ್ನು ಆಚರಿಸಿದ ಸಮಯದಲ್ಲಿ ಯಜ್ಞದ ಎಲ್ಲಾ ಉಚ್ಛಿಷ್ಟಭಾಗವನ್ನೂ ರುದ್ರದೇವನಿಗೆ ಆಹುತಿಯಾಗಿ ಕೊಟ್ಟರು. ಅದಕ್ಕೆ ರುದ್ರನೇ ಅರ್ಹನೆಂದು ತೀರ್ಮಾನಿಸಿ ಆಹುತಿಕೊಟ್ಟ ವಿಚಾರವು ಭಾಗವತದಲ್ಲಿ ಉಕ್ತವಾಗಿದೆ. ಯಜ್ಞದ ಮುಖ್ಯವಾದ ಭಾಗವು ವಿಷ್ಣುವಿಗೆ ಸೇರಿದೆ. ಉಚ್ಛಿಷ್ಟ ಭಾಗವು ರುದ್ರದೇವನಿಗೆ ಸೇರಿದುದಾಗಿದೆ. ಇಂತಹ ಯಜ್ಞದ ಉಚ್ಛಿಷ್ಟ ಭಾಗಕ್ಕೆ ಭಾಗಿಯಾದ ಶಿವನು ಯಜ್ಞದಲ್ಲಿ ಸರ್ವೋತ್ಕೃಷ್ಟಭಾಗಕ್ಕೆ ಅರ್ಹನಾದ ಶ್ರೀವಿಷ್ಣು ವಿಗೆ ಕಿಂಕರನೆಂದು (ಸೇವಕನೆಂದು) ಯಾರು ಹೇಳುವುದಿಲ್ಲ ?

**ಅದ್ಯಾಪಿ ರುದ್ರಾಯೋಚ್ಛಿಷ್ಟಾಹುತಿದಾಃ ಶ್ರುತಿಕೋವಿದಾಃ ।**
**ಹಸ್ತಂ ಪ್ರಕ್ಷಾಲಯಂತ್ಯೇತದುಚ್ಛಿಷ್ಟಂ ನೇತಿ ಕೋ ವದೇತ್ ॥ ೩೪೩ ॥**

ವೇದಪಂಡಿತರು ಯಜ್ಞದಲ್ಲಿ ರುದ್ರನಿಗೆ ಉಚ್ಛಿಷ್ಟಾಹುತಿಯನ್ನು ಕೊಟ್ಟ ನಂತರದಲ್ಲಿ ಈಗಲೂ ಸಹ ಕೈಯನ್ನು ತೊಳೆದುಕೊಳ್ಳುತ್ತಾರೆ. ಕೈಯನ್ನು ತೊಳೆದುಕೊಂಡು ಶುದ್ಧಿಯನ್ನು ಹೊಂದುವುದರಿಂದ ಅವರು ರುದ್ರದೇವನಿಗೆ ಕೊಟ್ಟ ಆಹುತಿಯು ಉಚ್ಛಿಷ್ಟವಲ್ಲವೆಂದು ಯಾರು ಹೇಳುತ್ತಾರೆ ?

**ದಿಗಂಬರಶ್ಚ ಜಟಿಲಃ ತೀರ್ಥಸೇವೀ ನಿರಂತರಮ್ ।**
**ಭಿಕ್ಷಾನ್ನಭುಕ್ ಚಾಕ್ಷಮಾಲಾಂ ಬಿಭ್ರಾಣೋ ವ್ಯಾಘ್ರಚರ್ಮಣಿ ।**
**ಉಪವಿಶ್ಯ ಜಪನ್ಮಂತ್ರಂ ಶಿಷ್ಯಾಯೋಪದಿಶನ್ಮನುಮ್ ॥ ೩೪೪ ॥**

ತನ್ಮಂತ್ರದೇವತಾಂ ಧ್ಯಾಯನ್ ವ್ಯಾಖ್ಯಾಕಾಲೇ ಚ ಮಾಲಿಕಾಮ್ ।
ದ್ವಿಗುಣೀಕೃತ್ಯ ಕರ್ಣೇ ವಾ ಕಂಠೇ ವಾ ಧಾರಯನ್ ಸದಾ || ೩೪೫ ||

ಚರನ್ ಪರಮಹಂಸೋ ಯಃ ಸ ಗುರುರ್ನೇತಿ ಕೋ ವದೇತ್ ।
ತನ್ಮಂತ್ರದೇವತಾಂ ತಾಂ ತು ದೇವೋ ನೇತಿ ಚ ಕೋ ವದೇತ್ || ೩೪೬ ||

ಶಂಕರನು ದಿಗಂಬರನು, ಜಟೆಯನ್ನುಳ್ಳವನು. ಯಾವಾಗಲೂ ತೀರ್ಥಕ್ಷೇತ್ರದಲ್ಲಿರತಕ್ಕವನು. ಭಿಕ್ಷಾನ್ನವನ್ನು ತಿನ್ನತಕ್ಕವನು. ರುದ್ರಾಕ್ಷಮಾಲೆಯನ್ನು ಧರಿಸಿ, ಹುಲಿಚರ್ಮದ ಮೇಲೆ ಕುಳಿತು ತಾನೂ ಶ್ರೀಹರಿಯ ಮಂತ್ರವನ್ನು ಜಪಿಸುವುದಲ್ಲದೆ ಶಿಷ್ಯರಿಗೂ ಉಪದೇಶಮಾಡತಕ್ಕವನು. ಆ ಮಂತ್ರಪ್ರತಿಪಾದ್ಯದೇವತೆಯಾದ ಶ್ರೀವಿಷ್ಣುವನ್ನು ಧ್ಯಾನಮಾಡುತ್ತಾ, ವ್ಯಾಖ್ಯಾನಕಾಲದಲ್ಲಿ ರುದ್ರಾಕ್ಷಮಾಲಿಕೆಯನ್ನು ಎರಡೆರಡು ಸೇರಿಸಿ ಕಿವಿಯಲ್ಲೋ ಕುತ್ತಿಗೆಯಲ್ಲೋ ಯಾವಾಗಲೂ ಧರಿಸಿದವನಾಗಿ ಸಂಚರಿಸುವ ಪರಮಹಂಸವೇಷಧಾರಿಯಾದ ರುದ್ರನನ್ನು ಗುರುವೆಂದು ಯಾರು ಹೇಳುವುದಿಲ್ಲ? ಅಂತಹ ರುದ್ರನಿಂದ ಜಪಿಸಲ್ಪಡುತ್ತಿರುವ ಮಂತ್ರಪ್ರತಿಪಾದ್ಯವಾದ ದೇವತೆಯನ್ನು (ಶ್ರೀವಿಷ್ಣುವನ್ನು) ದೇವನೆಂದು ಯಾರು ಹೇಳುವುದಿಲ್ಲ?

ಏವಂ ಚ ಕಾಶ್ಯಾಂ ಸತತಂ ಜಪನ್ ರಾಮಷಡಕ್ಷರಮ್ ।
ಧ್ಯಾಯಂಶ್ಚ ತಂ ಹೃದಿ ಸದಾ ತಾರಕಬ್ರಹ್ಮಸಂಜ್ಞಿತಮ್ || ೩೪೭ ||

ಜಪಕಾಲೇ ತೂಪವಿಷ್ಟೋ ಭೂಮೌ ಶಾರ್ದೂಲಚರ್ಮಣಿ ।
ಆವರ್ತಯನ್ ಸ್ಫಾಟಿಕಾಕ್ಷಮಾಲಾಂ ದಕ್ಷಕರಾಂಗುಲೌ || ೩೪೮ ||

ವ್ಯಾಖ್ಯಾಕಾಲೇ ಚ ತಾಂ ಕರ್ಣೇ ದ್ವಿಗುಣೀಕೃತ್ಯ ಧಾರಯನ್ ।
ದಿಗಂಬರಶ್ಚ ಜಟಿಲಃ ತೀರ್ಥಶೋಭಿತಮಸ್ತಕಃ || ೩೪೯ ||

ವೀಥ್ಯಾಂ ವೀಥ್ಯಾಮಟತಶ್ಚಾಪಿ ಸತಾಂ ಮಂತ್ರೋಪದಿತ್ಸಯಾ ।
ಮೃತಿಕಾಲೇ ವಿಮುಕ್ತ್ಯರ್ಥಂ ಕರ್ಣೇ ಕರ್ಣೇ ಜಪನ್ ಮನುಮ್ ||೩೫೦||

ಊರ್ಧ್ವೀಭವದ್ದಕ್ಷಕರ್ಣಮಾಶ್ವಚಂಡಾಲಗರ್ದಭಮ್ ।
ಸರ್ವಪ್ರಾಣಿಷು ಚೇತ್ಥಂ ಯೋ ಗುರುರೂಪಧರೋ ಹರಃ || ೩೫೧ ||

ಪಾಯಂ ಪಾಯಂ ಶ್ರುತಿಪುಟೇ ರಾಮನಾಮಾಮೃತಂ ತು ಯತ್ ।
ಧ್ಯಾಯಂ ಧ್ಯಾಯಂ ಮನಸಿ ತಂ ತಾರಕಬ್ರಹ್ಮಸಂಜ್ಞಿತಮ್ || ೩೫೨ ||

**ಜಾಪಂ ಜಾಪಂ ಕರ್ಣಮೂಲೇ ಪ್ರಕೃತೇರ್ವಿಕೃತೌ ನೃಣಾಮ್ ।**
**ಜಟಿಲಃ ಸನ್ನಟತಿ ಕೋಽಪೀತ್ಯರ್ಥಪ್ರತಿಪಾದಕೇ ॥ ೩೫೩ ॥**

**ಕಾಶೀಕಾಂಡಸ್ಥವಚನೇ ಶ್ರೂಯತೇಽದ್ಯಾಪಿ ಯೋ ಹರಃ ।**
**ಸ್ಪಷ್ಟಂ ಗುರೋರಾಕೃತಿಮಾನ್ ಸ ಗುರುರ್ನೇತಿ ಕೋ ವದೇತ್ ॥ ೩೫೪ ॥**

"ಜಪಕಾಲದಲ್ಲಿ ಭೂಮಿಯಲ್ಲಿ ಹುಲಿಯ ಚರ್ಮದಮೇಲೆ ಕುಳಿತುಕೊಂಡು, ಬಲದ ಕೈಯಿಂದ ಸ್ಫಟಿಕಾಕ್ಷಮಾಲೆಯನ್ನು ತಿರುವಿಹಾಕುತ್ತಾ, ವ್ಯಾಖ್ಯಾನ ಮಾಡುವ ಸಮಯದಲ್ಲಿ ಆ ಜಪಮಾಲೆಯನ್ನು ಜೋಡಿಸಿ ಎರಡೆರಡು ಎಳೆ ಮಾಡಿಕೊಂಡು ಕಿವಿಯಲ್ಲಿ ಧರಿಸುವವನಾಗಿ, ದಿಗಂಬರನಾಗಿ ಜಟಾಧಾರಿಯಾಗಿ, ವಿಷ್ಣು-ಪಾದೋದಕವಾದ ಗಂಗಾತೀರ್ಥದಿಂದ ಪ್ರಕಾಶಮಾನವಾದ ತಲೆಯ ಭಾಗವುಳ್ಳವನಾಗಿ, ಸಜ್ಜನರಿಗೆ ತಾರಕರಾಮ ಬ್ರಹ್ಮಮಂತ್ರವನ್ನು ಉಪದೇಶಮಾಡಲು, ಬೀದಿ ಬೀದಿ ಅಲೆಯುತ್ತಾ, ತನ್ನ ಭಕ್ತರ ಮರಣ ಸಮಯದಲ್ಲಿ ಅವರಿಗೆ ಮೋಕ್ಷವಾಗಲೆಂದು ತಾರಕರಾಮಮಂತ್ರವನ್ನು ಅವರವರ ಕಿವಿಗಳಲ್ಲಿ ಜಪಿಸುವವನಾಗಿ, ಎತ್ತಲ್ಪಟ್ಟ ಬಲಕಿವಿಯುಳ್ಳ ನಾಯಿ, ಕತ್ತೆ ಚಂಡಾಲಪರ್ಯಂತವಾಗಿ ಎಲ್ಲ ಪ್ರಾಣಿ ವರ್ಗಕ್ಕೂ ಗುರುರೂಪವಾದ ವೇಷವನ್ನು ಧರಿಸಿದವನಾಗಿ, ರಾಮನಾಮಾಮೃತವನ್ನು ಕಿವಿಯಿಂದ ಮತ್ತೆ ಮತ್ತೆ ಪಾನಮಾಡುತ್ತಾ ಪ್ರಾಕೃತ ಮನುಷ್ಯರ ಪ್ರಾಕೃತ ಶರೀರದ ಕಿವಿಯಲ್ಲಿ ರಾಮನಾಮವನ್ನು ಮತ್ತೆ ಮತ್ತೆ ಜಪಿಸುವವನಾಗಿ, ಯಾವನೋ ಒಬ್ಬ ಜಟಾಧಾರಿಯು ಅಲೆಯುತ್ತಿದ್ದಾನೆ" ಎಂಬ ಅರ್ಥವನ್ನುಳ್ಳ ಸ್ಕಾಂದಪುರಾಣದಲ್ಲಿನ ಕಾಶೀಕಾಂಡದಲ್ಲಿನ ವಚನದಲ್ಲಿ ಇಂದಿಗೂ ಯಾವ ಹರನು ಕೇಳಿಬರುತ್ತಿದ್ದಾನೆಯೋ, ಅಂತಹ ಶಿವನು ಸ್ಪಷ್ಟವಾಗಿ ಗುರುವಿನ ಆಕಾರವನ್ನುಳ್ಳವನನ್ನು ಗುರುವೆಂದು ಯಾರುತಾನೇ ಹೇಳುವುದಿಲ್ಲ?

**ತದ್ರಹಸ್ಯ ಮನೋರರ್ಥಭೂತೋ ನೀಲೋತ್ಪಲಪ್ರಭಃ ।**
**ರಾಮೋ ರಾಜೀವನೇತ್ರೋ ಯಃ ಸ ದೇವೋ ನೇತಿ ಕೋ ವದೇತ್ ॥೩೫೫॥**

ಆ ರೀತಿ ಗುರುವೇಷಧಾರಿಯಾದ ರುದ್ರದೇವನು ನಿರಂತರದಲ್ಲಿ ಜಪಿಸುತ್ತಿರುವ ತಾರಕ ಬ್ರಹ್ಮಮಂತ್ರವಾದ ಷಡಕ್ಷರ ರಾಮಮಂತ್ರದ ರಹಸ್ಯಾರ್ಥಭೂತನಾದ ಕನ್ನೈದಲೆಯ ಮನೋಹರ ಕಾಂತಿಯುಕ್ತನಾದ, ಕಮಲದಂತೆ ಕಣ್ಣನ್ನುಳ್ಳ ಶ್ರೀರಾಮಚಂದ್ರಮೂರ್ತಿಯನ್ನು ದೇವತೆಯೆಂದು ಯಾರು ತಾನೇ ಹೇಳುವುದಿಲ್ಲ?

ಈಗ ಶ್ರೀವಾದಿರಾಜರು ಈ ಸಂದರ್ಭದಲ್ಲಿ ಕಾಶೀಕಾಂಡದಲ್ಲಿ ಕಂಡು ಬಂದಿರುವ ಶ್ಲೋಕವನ್ನೇ ಯಥಾವತ್ತಾಗಿ ಉದಾಹರಿಸುತ್ತಾರೆ.

**ಪಾಯಂ ಪಾಯಂ ಶ್ರುತಿಚುಲಕಿತಂ ರಾಮನಾಮಾಮೃತಂ ಯತ್**
**ಧ್ಯಾಯಂ ಧ್ಯಾಯಂ ಮನಸಿ ಸತತಂ ಬ್ರಹ್ಮತತ್ತಾರಕಾಖ್ಯಮ್ ।**
**ಜಾಪಂ ಜಾಪಂ ಪ್ರಕೃತಿವಿಕೃತೌ ಪ್ರಾಣಿನಾಂ ಕರ್ಣಮೂಲೇ**
**ವೀಥ್ಯಾಂ ವೀಥ್ಯಾಮಟತಿ ಜಟಿಲಃ ಕೋಽಪಿ ಕಾಶೀನಿವಾಸೀ ॥ ೩೫೬ ॥**

**ಇತಿ ಶ್ಲೋಕಮಿಮಂ ಸರ್ವಜನಾನಾಮಪಿ ಸಂಮತಮ್ ।**
**ಶೈವಾನಾಂ ಚ ಮತಂ ಲೋಕೇ ಪ್ರಖ್ಯಾತಂ ನೇತಿ ಕೋ ವದೇತ್ ॥ ೩೫೭ ॥**

ಸಾಮವೇದದಲ್ಲಿ ಸೂಚಿತವಾಗಿರುವ ಯಾವ ರಾಮನಾಮದ ಅಮೃತವನ್ನು ನಿರಂತರದಲ್ಲಿ ಉಚ್ಚರಿಸುವ ಮೂಲಕ ಪಾನಮಾಡತಕ್ಕವನಾಗಿಯೂ, ತಾರಕ ಬ್ರಹ್ಮಮಂತ್ರವನ್ನು ಮನಸ್ಸಿನಲ್ಲಿ ಯಾವಾಗಲೂ ಧ್ಯಾನಮಾಡುವವನಾಗಿಯೂ, ತನ್ನ ಭಕ್ತರಾದ ಪ್ರಾಣಿಗಳ ಪ್ರಾಕೃತ ದೇಹದ ಕಿವಿಯಲ್ಲಿ ತಾರಕರಾಮಮಂತ್ರ ವನ್ನು ಜಪಿಸುವವನಾಗಿಯೂ ಯಾವನೋ ಒಬ್ಬ ಜಟಾಧಾರಿಯಾದ ಕಾಶೀ ನಿವಾಸಿಯು (ರುದ್ರದೇವನು) (ಕಾಶಿಯಲ್ಲಿ ವಾಸಮಾಡುವ ವ್ಯಕ್ತಿಯು) ಬೀದಿ ಬೀದಿಯಲ್ಲೂ ಅಲೆಯುತ್ತಿರುತ್ತಾನೆ ಎಂಬ ಅರ್ಥದಿಂದ ಕೂಡಿದ ಶ್ಲೋಕವು ಎಲ್ಲರಿಗೂ ಸಮ್ಮತವಾಗಿದೆ. ಮತ್ತು ಶೈವರ ಮತವು ವಿಶ್ವವಿಖ್ಯಾತವಾಗಿದೆಯೆಂಬು ದನ್ನು ಯಾರು ತಾನೇ ಹೇಳುವುದಿಲ್ಲ ?

**ಸರ್ವೇಷಾಮುಪದೇಷ್ಟಾರಂ ಗುರುಮಾಹುರ್ಯತೋಽಖಿಲಾಃ ।**
**ಉಪದೇಷ್ಟಮನೋರರ್ಥಂ ದೈವಮಾಹುಶ್ಚ ಯಜ್ಜನಾಃ ॥ ೩೫೮ ॥**

**ತತ್ಸರ್ವಸಮ್ಮತೇಽರ್ಥೇಽಸ್ಮಿನ್ ಸಂಶಯೋಽಸ್ತೀತಿ ಕೋ ವದೇತ್ ।**
**ಕಥಾಂ ಸ್ವಸ್ಯಾಪ್ಯಭಿಮತಾಂ ವದಂತಂ ಪ್ರತಿ ಕೋ ವದೇತ್ ॥ ೩೫೯ ॥**

ಎಲ್ಲರಿಗೂ ಉಪದೇಶಮಾಡತಕ್ಕವರನ್ನು ಸಾಮಾನ್ಯವಾಗಿ ಜನರು ಗುರು ವೆಂದು ಕರೆಯುವರು. ಉಪದೇಶ ಮಾಡುವ ಮಂತ್ರದಿಂದ ಪ್ರತಿಪಾದ್ಯವಾದ ವ್ಯಕ್ತಿಯನ್ನು ದೈವವೆಂದು ಯಾವ ಕಾರಣದಿಂದ ಜನರು ಕರೆಯುತ್ತಾರೋ ಇದೆಲ್ಲಾ ಸರ್ವಸಮ್ಮತವಾಗಿರುವಾಗ, ಈ ವಿಷಯದಲ್ಲಿ ಸಂದೇಹವು ಉಂಟೆಂದು ಯಾರು ಹೇಳುತ್ತಾರೆ?

ತನಗೂ ಸಮ್ಮತವಾದ ಕಥೆಯನ್ನು ಹೇಳತಕ್ಕವನನ್ನು ಕುರಿತು ಯಾರು ತಾನೇ ಆಕ್ಷೇಪಿಸುತ್ತಾರೆ ?

ಅವತಾರಿಕಾ :—

ವಾದಿರಾಜರು ಇದುವರೆವಿಗೆ ಶ್ರೀಹರಿಯ ಸರ್ವೋತ್ತಮತ್ವ ವಿಷಯದಲ್ಲಿ ಅನೇಕ ವೇದವಾಕ್ಯಗಳನ್ನೂ, ಸ್ಮೃತಿವಚನಗಳನ್ನೂ, ಜ್ಞಾನಿಗಳ ಪ್ರತ್ಯಕ್ಷಗಳನ್ನೂ ಪೌರಾಣಿಕ ಆಖ್ಯಾನಗಳನ್ನೂ ಶ್ರೀಮನ್ಮಹಾಭಾರತ ಮತ್ತು ಶ್ರೀಮದ್ಭಾಗವತ ಮಹಾಪುರಾಣದಲ್ಲಿನ ಕಥಾ ಭಾಗಗಳನ್ನೂ ಉದಾಹರಿಸಿ ಶ್ರೀಹರಿಯ ಸರ್ವೋತ್ತಮತ್ವವನ್ನು ಸಾಧಿಸಿರುತ್ತಾರೆ.

ಶಿವನು ಗುರುವಾಗಿರುತ್ತಾನೆಂಬ ವಿಷಯದಲ್ಲಿ ಅನೇಕ ನಿದರ್ಶನಗಳನ್ನು ತೋರಿಸಿದ್ದಲ್ಲದೆ, ಈಗ ಆಗಮಾನುಸಾರಿಯಾದ ಅನುಮಾನ ಪ್ರಮಾಣವನ್ನು ಉದಾಹರಿಸುತ್ತಾರೆ.

**ವಿಮತೋಽಸೌ ಪುರಹರೋ ಗುರುರ್ಭವಿತುಮರ್ಹತಿ ।**
**ಗುರುಲಕ್ಷಣಪೂರ್ಣತ್ವಾತ್ ಯಥಾಽಯಂ ಸಮ್ಮತೋ ಗುರುಃ ॥ ೩೬೦ ॥**

**ಇತಿ ಲಿಂಗಂ ಚ ಲಿಂಗಸ್ಯ ಗುರುತಾಮನುಮಾಪಯೇತ್ ।**
**ಲಿಂಗೋಕ್ತಾರ್ಥೇ ಪಕ್ಷಪಾತೋ ನ ಲಿಂಗಸ್ಯೇತಿ ಕೋ ವದೇತ್ ॥ ೩೬೧ ॥**

ಅನುಮಾನದ ಆಕಾರವು ಹೀಗಿದೆ.

ವಿಮತಃ ಪುರಹರಃ (ಶಿವನು) (ಇದು ಪಕ್ಷ) ಗುರುರ್ಭವಿತುಮರ್ಹತಿ (ಸಾಧ್ಯ) ಗುರುಲಕ್ಷಣಪೂರ್ಣತ್ವಾತ್ (ಹೇತು) ಯಥಾಯಂ ಸಮ್ಮತೋ ಗುರುಃ (ದೃಷ್ಟಾಂತ) ಈ ಹೇತುವು ಲಿಂಗರೂಪಿಯಾದ ಶಿವನಿಗೆ ಗುರುತ್ವವನ್ನು ಸಾಧಿಸುತ್ತದೆ.

ಲಿಂಗರೂಪಿಯಾದ ಶಿವನ ವಿಷಯದಲ್ಲಿ ಲಿಂಗದಿಂದ (ಹೇತುವಿನಿಂದ) ಸಾಧಿಸಲ್ಪಟ್ಟ ಅರ್ಥವು ಅಂದರೆ ಗುರುತ್ವವೆಂಬ ಸಾಧ್ಯವು ಇಲ್ಲವೆಂದು ಯಾರು ಹೇಳುತ್ತಾರೆ ? ಅಂದರೆ ಆಗಮಾನುಸಾರಿಯಾದ ಗುರುಲಕ್ಷಣಪೂರ್ಣತ್ವಾತ್ ಎಂಬ ಹೇತುವಿನಿಂದ ರುದ್ರನಲ್ಲಿ ಗುರುತ್ವವನ್ನು ಸಾಧಿಸಬಹುದು. ಇದು ಸದನುಮಾನವೆಂದು ಅಭಿಪ್ರಾಯ.

**ಗುರುಲಕ್ಷಣಯುಕ್ತೋಽಪಿ ಯದಿ ನ ಸ್ಯಾತ್ ಗುರುರ್ಹರಃ ।**
**ತರ್ಹಿ ಸಂಪ್ರತಿಪನ್ನೋಽಪಿ ಗುರುರ್ನ ಸ್ಯಾದ್ಗುರುಸ್ತವ ॥ ೩೬೨ ॥**

ರುದ್ರನಲ್ಲಿ ಗುರುವಿಗೆ ಇರಬೇಕಾದ ಲಕ್ಷಣಗಳೆಲ್ಲವೂ ಇದ್ದಾಗ್ಯೂ ಅವನು (ಶಿವನು) ಗುರುವಲ್ಲದಿದ್ದ ಪಕ್ಷದಲ್ಲಿ ಲೋಕದಲ್ಲಿ ನೀನು ಗುರುವೆಂದು ಒಪ್ಪಿರುವ ಎಲ್ಲರಿಗೂ ಗುರುವೆಂದು ಸಮ್ಮತನಾದವನೂ ಸಹ ಗುರುವು ಆಗದೇ ಹೋಗಲಿ. ಇದೊಂದು ಅನುಕೂಲ ತರ್ಕವು.

**ಅನುಕೂಲಮಿಮಂ ತರ್ಕಂ ಗರ್ಜಂತಂ ಪ್ರತಿ ಕೋ ವದೇತ್ ।**

ಹಿಂದೆ ಹೇಳಿದ ಗುರುಲಕ್ಷಣಯುಕ್ತತ್ವಾತ್ ಎಂಬ ಹೇತುವು ಇರಲಿ, ಸಾಧ್ಯವು ಬೇಡ ಎಂದು ಆ ಹೇತುವಿಗೆ ಅಪ್ರಯೋಜಕತ್ವವನ್ನು ಶಂಕಿಸಿದಾಗ ಆ ಶಂಕಾ ಪರಿಹಾರಕ್ಕಾಗಿ ಪ್ರಯೋಗಿಸುವ ತರ್ಕಕ್ಕೆ ಅನುಕೂಲ ತರ್ಕವೆಂದು ಹೆಸರು. ಗುರುಲಕ್ಷಣಯುಕ್ತತ್ವವೆಂಬ ಹೇತುವು ಗುರುತ್ವಕ್ಕೆ ಸಾಧಕವಲ್ಲದ ಪಕ್ಷದಲ್ಲಿ ಅಂತಹ ಹೇತುವಿನಿಂದ ಕೂಡಿದ ಸಂಪ್ರತಿಪನ್ನಗುರುವಿಗೂ ಸಹ ಗುರುತ್ವವು ಇಲ್ಲದೇ ಹೋಗಲಿ ಎಂಬ ತರ್ಕದಿಂದ ಹಿಂದಿನ ಶಂಕೆಯು ಪರಿಹಾರವಾಗಿ ಆ ಹೇತುವಿನಿಂದ ಗುರುತ್ವವನ್ನು ಸಾಧಿಸಬಹುದೆಂದು ಅಭಿಪ್ರಾಯ. (ಯದಿ ಸಾಧ್ಯಂ ನ ಸ್ಯಾತ್ ತರ್ಹಿ ಹೇತುರಪಿ ನ ಸ್ಯಾತ್ । ಅಸ್ತಿ ಚಾಯಂ ಹೇತು ಅತಃ ಸಾಧ್ಯ-ಮಪ್ಯವಶ್ಯಮಂಗೀಕರ್ತವ್ಯಮಿತಿ ಭಾವಃ)

**ಯಮುದ್ದಿಶ್ಯ ಜಗನ್ನಾಥಂ ಮಹೇಶೋಽಪಿ ದಿಗಂಬರಃ ॥ ೩೬೩ ॥**
**ಜಟೀ ಭಸ್ಮಾನುಲಿಪ್ತಾಂಗಃ ತಪಸ್ವೀ ವೀಕ್ಷಿತೋ ಜನೈಃ ।**
**ತತೋಽಧಿಕೋಽಸ್ತಿ ಕೋ ದೇವೋ ಲಕ್ಷ್ಮೀಕಾಂತಾನ್ಮಧುದ್ವಿಷಃ ॥ ೩೬೪॥**

ಯಾವ ಜಗನ್ನಾಥಸ್ವಾಮಿಯಾದ ಶ್ರೀಮಹಾವಿಷ್ಣುವನ್ನು ಉದ್ದೇಶಿಸಿ, ಆ ಸರ್ವೋತ್ತಮದೇವತೆಯ ಅನುಗ್ರಹಾಕಾಂಕ್ಷಿಯಾಗಿ ಅವನ ಅಪ್ಪಣೆಯಂತೆ ರುದ್ರನು ದಿಗಂಬರನಾಗಿ ಜಟಾಸಹಿತನಾಗಿ ಮೈಯಲ್ಲೆಲ್ಲಾ ಬೂದಿಯನ್ನು ಬಳಿದು ಕೊಂಡು ತಪಸ್ವಿಯಾಗಿ ಜನರಿಂದ ನೋಡಲ್ಪಟ್ಟವನಾಗಿರುತ್ತಾನೆಯೋ ಅಂತಹ ಮಧುನಾಮಕದೈತ್ಯನನ್ನು ಸಂಹರಿಸಿದವನಾದ ಜಗನ್ಮಾತೆಯಾದ ಶ್ರೀಮಹಾ-ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನಿಗಿಂತಲೂ ಅಧಿಕನಾದವನು ಯಾರು ಇರುತ್ತಾರೆ? ಹೇಳು?

**ಯತ್ರತ್ವಂ ಚಿಂತ್ಯತೇ ನಿತ್ಯಂ ತ್ವಯಾ ಯೋಗೇಶ್ವರೇಣ ಹಿ ।**
**ಇತಿ ಗೌರೀವಾಕ್ಯಮೂಲಂ ಅನುಮಾನಮಿದಂ ಮಮ ॥ ೩೬೫ ॥**

ಪರ್ವತರಾಜನ ಮಗಳಾದ ಪಾರ್ವತಿಯು ತನ್ನ ಪತಿಯಾದ ರುದ್ರನನ್ನು ಕುರಿತು, ಯಾವ ಸರ್ವೋತ್ತಮವಾದ ಸ್ವತಂತ್ರತತ್ವವೆನಿಸಿದ ಶ್ರೀಹರಿಯನ್ನು ಯೋಗೀಶ್ವರನಾದ ನೀನು ಯಾವಾಗಲೂ ಚಿಂತಿಸುತ್ತೀಯೋ ಎಂದು ಹೇಳಿರುವ ವಾಕ್ಯವೇ ನನ್ನ (ಶ್ರೀವಾದಿರಾಜರು) ಅನುಮಾನಕ್ಕೆ ಮೂಲಭೂತವಾಗಿದೆ. ಅಂದರೆ ಗುರುತ್ವ ಸಾಧಕಾನುಮಾನವು ಪಾರ್ವತೀ ವಾಕ್ಯವೆಂಬ ಆಗಮಮೂಲಕ ವಾಗಿದೆ ಎಂದು ಅಭಿಪ್ರಾಯ.

**ತಸ್ಮಾತ್ ಸ್ಮಾರ್ತಾನುಮಾನಸ್ಯ ಪ್ರತ್ಯರ್ಥೀಭೂಯ ಕೋ ವದೇತ್ ।**
**ಸ್ಮೃತ್ಯರ್ಥಸ್ಯ ಪರಿತ್ಯಾಗೇ ಚ ಸ್ಮಾರ್ತ ಇತಿ ಕೋ ವದೇತ್ ॥ ೩೬೬ ॥**

ಆದಕಾರಣ, ರುದ್ರಃ—ಗುರುಃ (ಗುರುತ್ವವಾನ್)—ಗುರುಲಕ್ಷಣಯುಕ್ತ-ತ್ವಾತ್—ಯಥಾ ಸಂಪ್ರತಿಪನ್ನಃ ಎಂಬ ಅನುಮಾನವು—ಪಾರ್ವತೀವಚನವೆಂಬ ಸ್ಮೃತಿಯ ಮೂಲಕವಾದುದರಿಂದ ಇಂತಹ ಸ್ಮೃತಿಮೂಲಕವಾದ ಅನುಮಾನಕ್ಕೆ ಪ್ರತಿಯಾಗಿ ಯಾರೂ ಏನೂ ಹೇಳುವಂತಿಲ್ಲ. ಅವನ್ನೂ ಒಪ್ಪಿಕೊಳ್ಳಲೇಬೇಕು. ಅದನ್ನು ಒಪ್ಪದೇ ಅದಕ್ಕೆ ವಿರುದ್ಧವಾಗಿ ವಾದಿಸಿದರೆ ಅಂತಹವನನ್ನು ಸ್ಮಾರ್ತನೆಂದು ಯಾರು ಕರೆಯುವರು? ಸ್ಮಾರ್ತ ಎಂಬ ಶಬ್ದವು ಸ್ಮೃತಿಯಲ್ಲಿ ಉಕ್ತವಾದುದನ್ನು ಒಪ್ಪತಕ್ಕವನು ಅಥವಾ ಸ್ಮೃತ್ಯನುಸಾರಿಯಾದವನು ಎಂದು ಅರ್ಥವಾಗುತ್ತದೆ. ಅದಕ್ಕೆ ವಿರುದ್ಧವಾದರೆ ಅವನು ಸ್ಮಾರ್ತನೆಂದು ಎನಿಸಿಕೊಳ್ಳಲಾರ ಎಂದು ಅಭಿಪ್ರಾಯ.

**ಹರಿಃ ಸ್ವನಾಭಿಪದ್ಮಸ್ಥಬ್ರಹ್ಮಣೇ ಮೂಲರೂಪತಃ ।**
**ಸಮಸ್ತವೇದೋಪನಿಷತ್ಪಂಚರಾತ್ರಾದಿಕಾಂ ಸ್ವಕಾಮ್ ॥ ೩೬೭ ॥**

**ವಿದ್ಯಾಮುಪದಿಶನ್ ತಸ್ಮೈ ಪರಾಂತೇ ಚ ಪರಾಂ ಗತಿಮ್ ।**
**ದಿಶನ್ ಬ್ರಹ್ಮಗುರುಃ ಬ್ರಹ್ಮಪಿತಾ ಸರ್ವಸ್ಯ ತಸ್ಯ ಚ ॥ ೩೬೮ ॥**

**ಇಷ್ಟಂ ಮೋಕ್ಷಂ ದಿಶನ್ನಿಷ್ಟಂ ದೈವಂ ನೇತಿ ಚ ಕೋ ವದೇತ್ ।**

ಶ್ರೀಹರಿಯು ತನ್ನ ನಾಭೀಕಮಲದಲ್ಲಿ ಜನಿಸಿದ ಚತುರ್ಮುಖ ಬ್ರಹ್ಮನಿಗೆ ಮೂಲನಾರಾಯಣರೂಪದಿಂದ ಸಮಸ್ತ ವೇದಗಳನ್ನೂ, ಉಪನಿಷತ್ತುಗಳನ್ನೂ,

ಪಂಚರಾತ್ರವೇ ಮೊದಲಾದ ತನ್ನ ವಿದ್ಯೆಗಳನ್ನೆಲ್ಲಾ ಉಪದೇಶ ಮಾಡಿದವನಾಗಿ ಆ ಬ್ರಹ್ಮನ ಇಡೀ ನೂರು ವರ್ಷಗಳ ಕೊನೆಯಲ್ಲಿ ಉತ್ತಮವಾದ ಮೋಕ್ಷಫಲ ವನ್ನು ಕೊಡತಕ್ಕವನಾದುದರಿಂದ ಬ್ರಹ್ಮನಿಗೂ ಎಲ್ಲರಿಗೂ ಗುರುವಾಗಿರುತ್ತಾನೆ. "ಸುಖಮೇವ ಮೇ ಸ್ಯಾತ್ ದುಃಖಂ ಮನಾಗಪಿ ಮಾಭೂತ್" ಎಂಬಂತೆ ಎಲ್ಲರ ಇಚ್ಛೆಗೆ ವಿಷಯವಾದ ದುಃಖಲೇಶರಹಿತವಾದ ನಿತ್ಯವಾದ ಸ್ವರೂಪಾನಂದಾನುಭವ ವೆಂಬ ಮೋಕ್ಷವನ್ನು ಕೊಡತಕ್ಕವನಾದುದರಿಂದ ಇಷ್ಟಕರನಾದ ದೈವವೆಂದೂ ಎಲ್ಲರೂ ಒಪ್ಪಲೇಬೇಕಾಗಿರುವುದರಿಂದ ಅದಲ್ಲವೆಂದು ಯಾರು ಹೇಳುವರು?

**ಅವತಾರೇಽಪಿ ರಾಮೋ ಯಃ ತಾರಕಬ್ರಹ್ಮಸಂಜ್ಞಿತಃ ॥ ೩೬೯ ॥**

**ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷಪ್ರಾಣಿ ಸಾರ್ಥಪಃ ।**
**ಸ್ವರ್ಣೀತಗರ್ದಭಾಶ್ವಾದಿಃ ಸರ್ವಾಭೀಷ್ಟಮಹಾಫಲದಃ ।**
**ಪರಂ ಧಾಮ ನಯನ್ನಿಷ್ಟಂ ದೈವಂ ನೇತಿ ಚ ಕೋ ವದೇತ್ ॥ ೩೭೦ ॥**

ರಾಮಾವತಾರ ಕಾಲದಲ್ಲೂ ಸಹ ಸಕಲಪ್ರಾಣಿಗಳ ಗುಂಪಿಗೂ ನಿಯಾಮಕ ನಾಗಿ ರಕ್ಷಿಸುವವನಾದ ತಾರಕಬ್ರಹ್ಮನೆಂದು ಹೆಸರುಳ್ಳ ಶ್ರೀರಾಮಚಂದ್ರನು "ಸಮಾಯಾತ, ಸಮಾಯಾತ ಯೇ ಯೇ ಮೋಕ್ಷಫಲೇಚ್ಛವಃ" ಎಂದು ಡಂಗೂರ ಹೊಡಿಸಿ, ಸಾಧನಸಂಪತ್ತು ಪೂರ್ತಿಯಾಗಿ ಮೋಕ್ಷಫಲಕ್ಕೆ ಯೋಗ್ಯರಾದ ಕುದುರೆ ಮೊದಲಾದ ಎಲ್ಲಾ ಪ್ರಾಣಿವರ್ಗಕ್ಕೂ ಮಹಾಫಲವೆನಿಸಿದ ಪರಂಧಾಮವೆಂಬ ಮೋಕ್ಷಫಲವನ್ನು ಕೊಟ್ಟಿರತಕ್ಕವನಾಗಿರುವುದರಿಂದ ಅಂತಹ ಶ್ರೀಹರಿಯನ್ನು "ನಮ್ಮ ಇಷ್ಟದೈವವೆಂದು" ಯಾರು ತಾನೇ ಹೇಳುವುದಿಲ್ಲ?

**'ಆರೋಗ್ಯಂ ಭಾಸ್ಕರಾದಿಚ್ಛೇತ್ ಭೂತಿಮಿಚ್ಛೇತ್ ಹುತಾಶನಾತ್ ।**
**ಜ್ಞಾನಂ (ವಿದ್ಯಾಂ) ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇತ್**
**ಜನಾರ್ದನಾತ್' ॥ ೩೭೧ ॥**

**ಇತಿ ಸ್ಮೃತಿಶ್ಚ ಗರ್ಜಂತೀ ಶಿವಂ ಜ್ಞಾನಪ್ರದಂ ಸತಾಂ ।**
**ಯತಃ ಪ್ರಾಹ ತತಶ್ಚಾಸೌ ಗುರುರ್ನೇತಿ ಚ ಕೋ ವದೇತ್ ॥ ೩೭೨ ॥**

ಸೂರ್ಯನಿಂದ ಆರೋಗ್ಯವನ್ನೂ, ಅಗ್ನಿದೇವನಿಂದ ಐಶ್ವರ್ಯವನ್ನೂ, ಈಶ್ವರನಿಂದ ಜ್ಞಾನವನ್ನೂ, ಮೋಕ್ಷಫಲವನ್ನು ಜನಾರ್ದನನಿಂದಲೂ ಇಚ್ಛಿಸ ಬೇಕೆಂಬ ಸ್ಮೃತಿಯು ಘರ್ಜನೆ ಮಾಡುತ್ತಲಿದೆ. ಸಜ್ಜನರಿಗೆಲ್ಲಾ ರುದ್ರನು

ಜ್ಞಾನವನ್ನು ಕೊಡತಕ್ಕವನೆಂದು ಯಾವ ಕಾರಣದಿಂದ ಹೇಳುತ್ತಲಿದೆಯೋ ಅದರಿಂದ ರುದ್ರದೇವನು ಗುರುವೆಂದು ಯಾರುತಾನೇ ಹೇಳುವುದಿಲ್ಲ? ಅಥವಾ ರುದ್ರನು ಗುರುವಲ್ಲವೆಂದು ಯಾರು ಹೇಳುವರು? ಅಜ್ಞಾನವನ್ನು ಪರಿಹರಿಸಿ ಜ್ಞಾನವನ್ನು ಕೊಡತಕ್ಕವನೇ ಗುರುವಾದುದರಿಂದ ಅಂತಹ ಗುರುವಿನ ಲಕ್ಷಣವು ಮಹಾದೇವನಿಗೆ ಇರುವ ಪ್ರಯುಕ್ತ ರುದ್ರನನ್ನು ಗುರುವೆಂದು ಹೇಳುವುದರಲ್ಲಿ ಯಾವ ಸಂಕೋಚಕ್ಕೂ ಅವಕಾಶವಿಲ್ಲ.

**ಮುಕುಂದಃ ಸರ್ವಜಗತಾಂ ಮೋಕ್ಷದಾತೇತಿ ಚ ಸ್ಮೃತಿಃ ।**
**ಯಸ್ಮಾತ್ರಾಹ ತತೋ ವಿಷ್ಣುರ್ದೈವಂ ನೇತಿ ಚ ಕೋ ವದೇತ್ ॥ ೩೭೩ ॥**

ಸಕಲ ಯೋಗ್ಯಚೇತನರಿಗೂ ಮುಕುಂದನೇ ಮೋಕ್ಷವನ್ನು ಕೊಡತಕ್ಕವನು ಎಂಬ ಅರ್ಥಗರ್ಭಿತವಾದ "ಮೋಕ್ಷದಾತಾ ವಾಸುದೇವಃ" ಇತ್ಯಾದಿ ಸ್ಮೃತಿಗಳು ಇರುವುದರಿಂದ ಇತರ ಯಾವ ದೇವತೆಗಳಿಂದಲೂ ಕೊಡಲಾಗದಿರುವ ಮುಕ್ತಿ ಫಲವನ್ನು ಶ್ರೀಹರಿಯು ಕೊಡತಕ್ಕವನಾಗಿರುವ ಪ್ರಯುಕ್ತ ಆ ಶ್ರೀಹರಿಯನ್ನು ದೈವವಲ್ಲವೆಂದು ಯಾರು ಹೇಳಿಯಾರು?

**ಯತೋ ಜ್ಞಾನೋಪದೇಷ್ಟಾಽಭೂತ್ ಶಿವಃ ಸರ್ವಪ್ರಕಾರತಃ ।**
**ಯತಶ್ಚ ಮೋಕ್ಷದಾತಾಽಭೂತ್ ಹರಿಃ ಸರ್ವಪ್ರಕಾರತಃ ।**
**ಅತ ಈದೃಕ್ ಶಿವೋ ದೇವ ಇತಿ ಕಃ ಕೋವಿದೋ ವದೇತ್ ॥ ೩೭೪ ॥**

ಎಲ್ಲ ಬಗೆಯಿಂದ ಪರಿಶೀಲಿಸಿದಾಗ್ಯೂ ಸಹ ಯಾವ ಕಾರಣದಿಂದ ಶಿವನು ಜ್ಞಾನಕ್ಕೆ ಮಾತ್ರ ಉಪದೇಶಕನಾಗಿರುತ್ತಾನೆಯೋ ಅಂತಹ ಈ ಶಿವನನ್ನು "ಪರದೇಶಿಯೆಂದು" ಯಾವ ಪಂಡಿತನು ಹೇಳುತ್ತಾನೆ? ಸರ್ವಪ್ರಕಾರದಿಂದ ಪರಿಶೀಲಿಸಿದಾಗ್ಯೂ ಶ್ರೀಹರಿಯೇ ಮೋಕ್ಷದಾತನಾದುದರಿಂದ ಶ್ರೀಹರಿಯನ್ನು ಪರದೇವತೆಯೆಂದು ಯಾರುತಾನೇ ಹೇಳುವುದಿಲ್ಲ?

**ಶಿವಮಂತ್ರಸ್ಯ ಯೋ ದೇವಃ ಸ ದೇವೋ ನೇತಿ ಕೋ ವದೇತ್ ।**
**ಯತ್ಪುತ್ರಸ್ಯ ವಿಧೇಃ ಫಾಲಾತ್ಪ್ರಾಗಾಸೀದ್ವೈ ತ್ರಿಲೋಚನಃ ॥ ೩೭೫ ॥**
**ಪಿತಾಮಹಸ್ಯ ಸ ಹರೇಃ ಕಥಂ ನಾರಾಧಕೋ ವದ ॥ ೩೭೬ ॥**

ಶಿವನು ಜಪಿಸುವ ಮಂತ್ರಕ್ಕೆ "ತಾರಕರಾಮಬ್ರಹ್ಮ" ಮಂತ್ರಕ್ಕೆ ಯಾರು ದೇವತೆಯೋ ಅಂತಹ ಶ್ರೀಹರಿಯು ದೇವನಲ್ಲವೆಂದು ಯಾರು ಹೇಳುತ್ತಾರೆ?

ಶ್ರೀಮನ್ನಾರಾಯಣನ ಪುತ್ರನೇ ಬ್ರಹ್ಮನು. ಆ ಬ್ರಹ್ಮನ ನಡುಹುಬ್ಬಿನಿಂದ ಹುಟ್ಟಿದವನೇ ಶಿವನು. ಅಂದರೆ ಶಿವನು ಬ್ರಹ್ಮನ ಮಗನು. ಬ್ರಹ್ಮನು ನಾರಾಯಣನ ಮಗನು. ಅಂದಮೇಲೆ ಶಿವನಿಗೆ ನಾರಾಯಣನು ತಂದೆಯ ತಂದೆಯಾಯಿತು. ತಾತನಾದ ಅಂತಹ ಶ್ರೀಹರಿಯನ್ನು ರುದ್ರ ಆರಾಧಿಸುವುದಿಲ್ಲವೇನು ಹೇಳು. ಖಂಡಿತವಾಗಿಯೂ ರುದ್ರನು ತನ್ನ ತಾತನಾದ ನಾರಾಯಣನನ್ನು ಭಕ್ತಿಯಿಂದ ಪೂಜಿಸುತ್ತಾನೆ.

**ಇಲಾವೃತೇ ಕಿಲ ಶಿವೋ ವಿಷ್ಣುಂ ಸಂಕರ್ಷಣಾಭಿಧಮ್ ।**
**ಅದ್ಯಾಪ್ಯರ್ಚಯತೀದೃಕ್ ಸ ತಸ್ಯ ದಾಸೋ ನ ಕಿಂ ವದ ॥ ೩೭೭ ॥**

ಇಲಾವೃತಖಂಡದಲ್ಲಿ ಶಿವನು ಸಂಕರ್ಷಣರೂಪಿಯಾದ ವಿಷ್ಣುವನ್ನು ಈಗಲೂ ಪೂಜಿಸುತ್ತಿರುತ್ತಾನೆ. ಇಂತಹ ಶಿವನು ವಿಷ್ಣುವಿಗೆ ದಾಸನಲ್ಲವೇನು? ಹೇಳು.

**'ಮಾಂ ವಿಧತ್ತೇಽಭಿಧತ್ತೇ ಮಾಂ ವಿಕಲ್ಪ್ಯಾಽಪೋಹ್ಯ ಇತ್ಯಹಮ್ ।**
**ಇತ್ಯಸ್ಯಾ ಹೃದಯಂ ಸಾಕ್ಷಾತ್ ನಾನ್ಯೋ ಮದ್ವೇದ ಕಶ್ಚನ' ।**
**ಇತಿ ಸ್ಮೃತೇಃ ಶ್ರೌತಸರ್ವನಾಮಾನಿ ಜಗುರಚ್ಯುತಮ್ ।**
**ತನ್ನಾಮಧಾರಕಾಃ ಸರ್ವೇ ಬ್ರಹ್ಮರುದ್ರಾದಯಃ ಸುರಾಃ ॥ ೩೭೮ ॥**
**ದಾಸಾ ಏವಾಭವನ್ನಸ್ಯ ತಸ್ಯ ಕಃ ಸದೃಶೋ ವದ ।**

ಇದು ಶ್ರೀಕೃಷ್ಣಪರಮಾತ್ಮನ ವಾಕ್ಯವಾಗಿದೆ. ಶ್ರೀಮದ್ಭಾಗವತದ ಏಕಾದಶ ಸ್ಕಂಧದಲ್ಲಿ ಉದ್ಧವನನ್ನು ಕುರಿತು ಶ್ರೀಕೃಷ್ಣಪರಮಾತ್ಮನು ಆಡಿದ್ದಾನೆ.

ಇಡೀ ವೇದರಾಶಿಯು ಪರಮಾತ್ಮನನ್ನೇ ಪರಮಮುಖ್ಯ ವೃತ್ತಿಯಿಂದ ಪ್ರತಿಪಾದಿಸುತ್ತಲಿದೆ. ಅಂದರೆ ಕರ್ಮಕಾಂಡದಲ್ಲಿಯಾಗಲೀ, ದೇವತಾಕಾಂಡದಲ್ಲಾಗಲಿ ಇರುವ ಸಕಲಪದಗಳು ಪರಮಾತ್ಮ ಪ್ರತಿಪಾದಗಳೇ ಆಗಿವೆ ಎಂಬ ವಿಷಯದಲ್ಲಿ ಪ್ರಮಾಣ ವಾಕ್ಯಗಳು ಹೇರಳವಾಗಿವೆ.

ವೇದಾಕ್ಷರಾಣಿ ಯಾವಂತಿ ಕಥಿತಾನಿ ದ್ವಿಜಾತಿಭಿಃ ।
ತಾವಂತಿ ಹರಿನಾಮಾನಿ ಕೀರ್ತಿತಾನಿ ನ ಸಂಶಯಃ ॥ ಇತಿ ನಾರದೀಯೇ ॥
ವೇದೈಶ್ಚ ಸರ್ವೈರಹಮೇವ ವೇದ್ಯಃ ॥ ಇತಿ ಗೀತಾ ॥

"ತಾ ವಾ ಏತಾ ಸರ್ವಾಃ ಋಚ ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ ಪ್ರಾಣ ಏವ ಪ್ರಾಣ ಋಚ ಇತ್ಯೇವ ವಿದ್ಯಾತ್"
(ಐತರೇಯ ಆರಣ್ಯಕ-೩-೩-೩).

ಈ ಶ್ರುತಿಯು ಸರ್ವಶಬ್ದವಾಚ್ಯತ್ವೇನ ಬ್ರಹ್ಮನೇ ಹೇಳಲ್ಪಡುತ್ತಾನೆಂದು ತಿಳಿಸುತ್ತಲಿದೆ. "ವಸನ್ತೇ ವಸನ್ತೇ ಜ್ಯೋತಿಷಾ ಯಜೇತ" ಇತ್ಯಾದಿ ಕರ್ಮ ವನ್ನು ವಿಧಾನಮಾಡುವ ಶ್ರುತಿಯು ನನ್ನನ್ನು ಉದ್ದೇಶಿಸಿಯೇ ನನ್ನ ಪೂಜಾ ರೂಪವಾಗಿ ಕರ್ಮವನ್ನು ವಿಧಿಸುತ್ತಲಿದೆ. ವೇದದಲ್ಲಿ ಕಂಡುಬರುವ ಇಂದ್ರ ಚಂದ್ರಾದಿ ಇತರ ದೇವತಾವಾಚಕ ಶಬ್ದಗಳೂ ನನ್ನ ಗುಣಗಳಾದ ಐಶ್ವರ್ಯಾದಿ ಗಳನ್ನೇ ಹೇಳುತ್ತಲಿವೆ. "ನ ಸುರಾಂ ಪಿಬೇತ್" ಎಂಬ ನಿಷೇಧ ವಾಕ್ಯಗಳೂ ಸಹ ಸುರಾಪಾನಾದಿಗಳು ನನಗೆ ಅಪ್ರಿಯವಾದುದರಿಂದ ಸುರಾಪಾನ ಶಬ್ದದಿಂದ ಹೇಳಲ್ಪಡತಕ್ಕ "ಸುರಾ ಹರೇರ್ಗುಣಾಃ ಪ್ರೋಕ್ತಾಃ ಕೇ ಮೇ ಸ್ಮರಿತಿ ಚಿಂತನಂ" ಸುರಾಪಾನಮಿತಿ ಪ್ರೋಕ್ತಾಂ ತನ್ನ ಕುರ್ಯಾತ್ ಕಥಂಚನ" ಎಂದು ಅಂತಹ ಪರಮಾತ್ಮನಿಗೆ ಅಪ್ರಿಯವಾದುದರಿಂದ ನಿಷೇಧ್ಯ ಎಂಬ ಅಭಿಪ್ರಾಯದಿಂದ ನಿಷೇಧ ವಾಕ್ಯಗಳು ಹೊರಟಿವೆ. ವೇದದಲ್ಲಿ ವಾಸುದೇವಾದಿ ನಾನಾರೂಪದಿಂದ ತಿಳಿಯ ಲ್ಪಡತಕ್ಕವನೂ ಸಹ ನಾನೇ ಎಂದೂ ಈ ವಿಧವಾದ ವಿಧಿನಿಷೇಧರೂಪವಾದ ವೇದದ ಗುಹ್ಯಾರ್ಥವನ್ನು ನಾನೊಬ್ಬನೇ ಅರಿತಿರುತ್ತೇನೆ. ನನ್ನ ಅನುಗ್ರಹದಿಂದ ಚತುರ್ಮುಖನೂ ಸಹ ತಿಳಿದಿರುತ್ತಾನೆಂದು ಶ್ರೀಕೃಷ್ಣಪರಮಾತ್ಮನು ಉದ್ಧವನಿಗೆ ಉಪದೇಶವಿತ್ತಿದ್ದಾನೆ.

"ಯೋ ದೇವಾನಾಂ ನಾಮಧಾ ಏಕ ಏವ" ಎಂದು ಎಲ್ಲ ದೇವತಾ ವಾಚಕ ನಾಮಗಳೂ ಪರಮಾತ್ಮನನ್ನು ತಿಳಿಸುತ್ತಿರುವುದರಿಂದ ಮಿಕ್ಕ ದೇವತೆ ಗಳೆಲ್ಲರೂ ಪರಮಾತ್ಮನಾಮಧಾರಕರೇ ಆಗಿರುತ್ತಾರೆ. ಆದಕಾರಣ ಸಕಲ ದೇವತೆಗಳೂ ಪರಮಾತ್ಮನ ದಾಸರೇ ಆಗಿರುವ ಕಾರಣ ಇಂತಹ ಪರಮಾತ್ಮನಿಗೆ ಸಮರಾರು, ಹೇಳು.

**ವ್ಯೋಮಕೇಶಸ್ಯ ಶಿರಸಿ ಸದಾ ವಿಷ್ಣುಪದಂ ನ ಕಿಮ್ ॥ ೩೭ ॥**
**ಅತಃ ಕೋಶಜ್ಞಸಮ್ಮತ್ಯಾ ಶಿವೋ ದಾಸೋ ನ ಕಿಂ ವದ ।**

ಶಿವನಿಗೆ ಕೋಶಗಳಲ್ಲಿ ವ್ಯೋಮಕೇಶ ಎಂಬ ಹೆಸರುಂಟು. ವ್ಯೋಮವೆಂದರೆ ಆಕಾಶವು. ಆಕಾಶವನ್ನು ವಿಷ್ಣುಪದವೆಂದು ಕೋಶದಲ್ಲಿ ಹೇಳಲಾಗಿದೆ. ಆದ

ಕಾರಣ ಸರ್ವದಾ ಶಿವನ ತಲೆಯಲ್ಲಿ ವಿಷ್ಣುವಿನ ಪಾದವಿರುವುದರಿಂದ ಶಿವನು ಶ್ರೀಹರಿಯ ದಾಸನಲ್ಲವೇನು ಹೇಳು.

ವ್ಯೋಮಕೇಶೋ ಭವೋ ಭೀಮ ಸ್ಥಾಣೂ ರುದ್ರ ಉಮಾಪತಿಃ

(ಅಮರಕೋಶ)

**ಗಂಗಾಧರಃ ಕಿಲ ಶಿವೋ ಗಂಗಾ ವಿಷ್ಣುಪದೀ ಕಿಲ ॥ ೩೮೦ ॥**

**ಅತೋಽಪೀಶಃ ಕೋಶಮತೇ ವಿಷ್ಣೋರ್ದಾಸೋ ನ ಕಿಂ ವದ ।**

(ಗಂಗಾ ವಿಷ್ಣುಪದೀ ಜಹ್ನುತನಯಾ ಸುರನಿಮ್ನಗಾ—ಅಮರಕೋಶ)

ರುದ್ರದೇವನು ತನ್ನ ತಲೆಯಮೇಲೆ ಗಂಗೆಯನ್ನು ಧರಿಸಿರುವುದರಿಂದ ಗಂಗಾಧರನೆಂದು ಕೋಶಕಾರರು ಶಿವನ ಪರ್ಯಾಯ ಪದಗಳಲ್ಲಿ ಗಂಗಾಧರ ಪದವನ್ನು ಸೇರಿಸಿರುತ್ತಾರೆ. "ಗಂಗಾ ವಿಷ್ಣುಪದೀ ಜಹ್ನುತನಯಾ" ಇತ್ಯಾದಿಯಾಗಿ ಗಂಗಾನದಿಯ ವಾಚಕವಾದ ಪದಗಳಲ್ಲಿ ವಿಷ್ಣುಪದೀ ಎಂಬ ಪದವು ಭಾಗೀರಥೀವಾಚಕವಾಗಿ ಉಕ್ತವಾಗಿದೆ. ಆದಕಾರಣ ಕೋಶಕಾರರ ಪ್ರಕಾರವಾಗಿ ಪರಿಶೀಲಿಸಿದರೂ ಸಹ ಶಿವನು ಶ್ರೀಹರಿಯ ಪಾದೋದಕವನ್ನು ತಲೆಯಲ್ಲಿ ಧರಿಸಿರುವುದರಿಂದ ಗಂಗಾಧರನೆಂದು ಹೆಸರುಳ್ಳವನಾದುದರಿಂದ ಶ್ರೀಹರಿಯ ದಾಸನಲ್ಲವೇನು? ಚೆನ್ನಾಗಿ ಪರಿಶೀಲಿಸಿ ನೀನೇ ಹೇಳು.

**ಅತಃ ಶ್ರುತಿವಿದಾಂ ಯುಕ್ತಿಸ್ಮೃತಿಕೋಶವಿದಾಂ ಸತಾಮ್ ॥ ೩೮೧ ॥**

**ಸಭಾಂಗಣೇ ಶುಭಾ ನೃತ್ಯೇದಿಯಂ ಸತ್ಯಶ್ರುತಿರ್ನರ್ತಕೀ ।**

**ಸತ್ಯಂ ವದೇತಿ ಯದ್ವಾಣೀ ಶಾಸ್ತಿ ಶಿಷ್ಯಾನ್ ಪುರಾತನೀ ॥ ೩೮೨ ॥**

ಆದಕಾರಣ ವೇದದ ನಿಜವಾದ ಅರ್ಥವನ್ನರಿತವರೂ, ಪ್ರತ್ಯಕ್ಷಕ್ಕೆ ವಿಷಯವಾಗತಕ್ಕ ವಸ್ತುಗಳ ವಿಷಯದಲ್ಲಿ ಪ್ರತ್ಯಕ್ಷಾನುಕೂಲಗಳಾದ ಯುಕ್ತಿಗಳನ್ನು ಚೆನ್ನಾಗಿ ಬಲ್ಲವರೂ, ಕಣ್ಣಿಗೆ ಕಾಣಿಸದ ಅತೀಂದ್ರಿಯಗಳಾದ ಪದಾರ್ಥಗಳ ವಿಷಯದಲ್ಲಿ ಆಗಮಾನುಸಾರಿಗಳಾದ ಯುಕ್ತಿಗಳನ್ನು ಬಲ್ಲವರೂ, ವೇದಾರ್ಥಗಳನ್ನು ಕಥಾರೂಪವಾಗಿ ದೃಷ್ಟಾಂತಗಳ ಮೂಲಕವಾಗಿ ವಿವರಿಸುವ ಇತಿಹಾಸ ಪುರಾಣ ಮೊದಲಾದ ಸ್ಮೃತಿಗಳಲ್ಲಿ ಪಾರಂಗತರೂ, ಕೋಶಗಳ ಸರಿಯಾದ ಪರಿಚಯವುಳ್ಳವರೂ ಆದ ಸಜ್ಜನರ ಸಭಾಂಗಣದಲ್ಲಿ "ಸತ್ಯಂ ವದ" ಎಂಬ ಮಂಗಳಕರವಾದ ಅಪೌರುಷೇಯವಾದ ನಿತ್ಯವಾದ ವೇದವಾಣಿಯು ನರ್ತನಮಾಡುತ್ತಾ ಶಿಷ್ಯರನ್ನೆಲ್ಲಾ ನಿಜವಾದುದನ್ನು ಹೇಳಿರಿ ಎಂದು ಆಜ್ಞೆ ಮಾಡುತ್ತಲಿದೆ.

**ತತ್ಸತ್ಯಂ ವದ ನಾಸತ್ಯಂ ವದ ಮಾನೋದಿತಂ ವದ ।**
**ಸತೋ ಮಾನಸ್ಯ ಯದ್ಯೋಗ್ಯಂ ತದ್ಧಿ ಸತ್ಯಂ ವಿದುರ್ಬುಧಾಃ ॥ ೩೮೩ ॥**

ಆದಕಾರಣ ಪರಮಮಂಗಳಕರವಾದ ಅನಾದಿಯಾದ ಅಪೌರುಷೇಯವಾದ ವೇದವಾಣಿಯು ಈ ಕೆಳಗೆ ಕಂಡಂತೆ ಸಜ್ಜನರಿಗೆ ಅಪ್ಪಣೆ ಮಾಡುತ್ತಲಿದೆ.

"ಸತ್ಯಂ ವದ" ಸತ್ಯವನ್ನೇ ಹೇಳು (ನಿಜವಾದುದನ್ನು ಹೇಳು) ನಾಸತ್ಯಂ ವದ=ಅಸತ್ಯವಾದುದನ್ನು ಹೇಳಬೇಡ. ಸುಳ್ಳನ್ನಾಡಬೇಡ (ಇಲ್ಲದೇ ಇರುವುದನ್ನು ಹೇಳಬೇಡ.) ಮಾನೋದಿತಂ ವದ=ಪ್ರಮಾಣಗಳಿಂದ ತಿಳಿಯಲ್ಪಟ್ಟಿರುವುದನ್ನು ಹೇಳು. ಅಂದರೆ ಅಪ್ರಾಮಾಣಿಕವಾದುದನ್ನು ಹೇಳಬೇಡ

ಯಾವುದು ದೋಷರಹಿತಗಳಾದ ಪ್ರತ್ಯಕ್ಷದಿಂದ ತಿಳಿಯಲ್ಪಡುವುದನ್ನೂ ದೋಷರಹಿತವಾದ ಸ್ವತಃ ಪ್ರಮಾಣವಾದ ಅಪೌರುಷೇಯವಾದ ಆರು ಬಗೆಯಾದ ತಾತ್ಪರ್ಯ ಲಿಂಗಗಳಿಂದ ಕೂಡಿದ ವೇದದಮೂಲಕವಾಗಿ ತಿಳಿಯಲ್ಪಡತಕ್ಕದ್ದೋ ಅದನ್ನು ಮಾತ್ರ ಹೇಳು. ಯಥಾಶ್ರುತವಾದ ವೇದವಾಕ್ಯದಿಂದ ಆಪಾತತಃ ತೋರತಕ್ಕ ಅರ್ಥವನ್ನು ಹೇಳಬೇಡ. ಯಾವುದು ಅಂತಹ ಸರಿಯಾದ ಪ್ರಮಾಣದಿಂದ ಸತ್ಯವಾಗಿ ಪ್ರಾಮಾಣಿಕವಾಗಿ ತಿಳಿಯಲ್ಪಡತಕ್ಕದ್ದೋ ಅದನ್ನೇ ಪಂಡಿತರು ಸತ್ಯವೆಂದು ತಿಳಿಯುತ್ತಾರೆ.

**ತದ್ವಿರುದ್ಧಮಸತ್ಯಂ ಯತ್ತದ್ವಿಷ್ಣೋರ್ನ ಸಮಂ ವದ ।**
**ಕಿಂತೂಕ್ತಮಾನಸಿದ್ಧತ್ವಾತ್ ವಿಷ್ಣುಂ ಸರ್ವೇಶ್ವರಂ ವದ ॥ ೩೮೪ ॥**

ಯಾವುದು ಹಿಂದೆ ತಿಳಿಸಿದ ಪ್ರಮಾಣಗಳಿಂದ ತಿಳಿಯಲ್ಪಡದಿರುವುದೋ ಅದು ಅಸತ್ಯವೆನಿಸುತ್ತದೆ. ಆದಕಾರಣ ವಿಷ್ಣುವಿಗೆ ಸಮರಿಲ್ಲವೆಂದು ಹೇಳು. ಇದು ಸರ್ವೋತ್ತಮನೇ ವಿಷ್ಣು ಅವನಿಗೆ ಸಮರೂ ಇಲ್ಲ ಅಧಿಕರಂತೂ ಇಲ್ಲವೇ ಇಲ್ಲ ಎಂಬುದು ಸಕಲಪ್ರಮಾಣ ಪ್ರಸಿದ್ಧವಾದ ವಿಷಯವಾಗಿರುವ ಪ್ರಯುಕ್ತ ಶ್ರೀವಿಷ್ಣುವನ್ನೇ ಸರ್ವೇಶ್ವರನೆಂದು ಹೇಳು

**ಪ್ರಮಾಣಶತಸಿದ್ಧತ್ವಾತ್ ಪುನಃ ಪುನರಿದಂ ವದ ।**
**ವಿಷ್ಣೋಃ ಸರ್ವೋತ್ತಮತ್ವಂ ಯತ್ತದೇವಾನುದಿನಂ ವದ ॥ ೩೮೫ ॥**

ಇಲ್ಲಿ ಶತ ಎಂಬ ಶಬ್ದವು "ದಶಶತಾದಿಶಬ್ದಾ ಅನಂತಾರ್ಥಕಾಃ" ಎಂಬಂತೆ ಅನಂತಾರ್ಥಕವಾಗಿ ಬಳಸಲಾಗಿದೆ. ಶ್ರೀಹರಿಯ ಸರ್ವೋತ್ತಮತ್ವವು ನೂರಾರು, ಸಹಸ್ರಾರು, ಅನಂತಪ್ರಮಾಣಗಳಿಂದ ಸಿದ್ಧವಾದ ಪರಮಮುಖ್ಯವಾದ ಪ್ರಮೇಯ

ವಾಗಿರುವ ಪ್ರಯುಕ್ತ ಪ್ರತಿದಿನವೂ "ಶ್ರೀವಿಷ್ಣುವೇ ಸರ್ವೋತ್ತಮನು" ಎಂದು ಯಾವಾಗಲೂ ಹೇಳು.

**ಶಿವಾಜ್ಞಯಾ ವಾದಿರಾಜಃ ಶಿವಾದೀನಾಮನುಗ್ರಹಾತ್ ।**
**ಹರಿಭಕ್ತಿಲತಾಪುಷ್ಟ್ಯೈ ಚಕಾರ ಕವಿತಾಮೃತಮ್ ॥ ೩೮೭ ॥**

ವಾದಿರಾಜರು ಶಿವನ ಅಪ್ಪಣೆಯಂತೆ ಶಿವಾದಿಗಳ ಅನುಗ್ರಹದಿಂದ ಶ್ರೀಹರಿಯ ಭಕ್ತಿಲತೆಯ ಪೋಷಣೆಗಾಗಿ—ಲತಾಸದೃಶವಾದ ಭಕ್ತಿಯನ್ನು ದೃಢಪಡಿಸುವುದಕ್ಕಾಗಿ (ಭಕ್ತಿಯೆಂಬ ಬಳ್ಳಿಯ ಪೋಷಣೆಗಾಗಿ) ಅಮೃತ ಸದೃಶವಾದ ಕವಿತೆಯನ್ನು ರಚಿಸಿರುತ್ತಾರೆ

**ವಾದಿರಾಜಾದ್ರಹೃದ್ವಾಪೀತಟಾಕಾಂಕುರಿತಾ ತ್ವಿಯಮ್ ।**
**ಹರಿಭಕ್ತಿಲತಾ ಕೃಷ್ಣತರೋಃ ಪಾದೇsರ್ಪಿತೈಧತಾಮ್ ॥ ೩೮೭ ॥**

ವಾದಿರಾಜರ ಹೃದಯವೆಂಬ ಬಾವಿಯ ದಡದಲ್ಲಿ ಮೊಳಕೆಯೊಡೆದು ಬೆಳೆದ ಈ ಹರಿಭಕ್ತಿಯೆಂಬ ಬಳ್ಳಿಯು ಶ್ರೀಕೃಷ್ಣನ ಪಾದವೆಂಬ ಮರದ ಬುಡವನ್ನಾಶ್ರಯಿಸಿಕೊಂಡು ಪ್ರವರ್ಧಮಾನವಾಗಲಿ. ಕೋಮಲವಾದ ಬಳ್ಳಿಗೆ ದೃಢವಾದ ಒಂದು ಆಶ್ರಯವಿಲ್ಲದಿದ್ದರೆ ಅದು ನಿಲ್ಲುವುದಿಲ್ಲ, ಬೆಳೆಯಲಾರದು. ಅದರಂತೆ ಶ್ರೀಹರಿಭಕ್ತಿಯೆಂಬ ಬಳ್ಳಿಯು ಶ್ರೀಕೃಷ್ಣನೆಂಬ ವೃಕ್ಷದ, ಶ್ರೀಕೃಷ್ಣನ ಪಾದವೆಂಬ ಬುಡದ ಆಶ್ರಯವನ್ನು ಪಡೆದುದಾಗಿ ಅಭಿವೃದ್ಧಿಯನ್ನು ಹೊಂದಲಿ ಎಂದು ಅಭಿಪ್ರಾಯ.

**ನವರತ್ನಪ್ರಭಾಭಾಸಂ ನಮತಾಮಖಿಲೇಷ್ಟದಮ್ ।**
**ಇಂದಿರಾನಂದಕಂ ಕೃಷ್ಣವೃಂದಾರಕತರುಂ ಶ್ರಯೇ ॥ ೩೮೮ ॥**

ನವರತ್ನಗಳ ಕಾಂತಿಪುಂಜದಂತೆ ಪ್ರಜ್ವಲಿಸುತ್ತಲಿರುವ, ಭಕ್ತಿಶ್ರದ್ಧಾಪೂರ್ವಕವಾಗಿ ನಮಸ್ಕಾರಮಾಡಿದ ಭಕ್ತವೃಂದಕ್ಕೆ ಸಕಲ ಇಷ್ಟಾರ್ಥಗಳನ್ನೂ ಕರುಣಿಸುವ, ಶ್ರೀಮಹಾಲಕ್ಷ್ಮೀದೇವಿಗೆ ಆನಂದದಾಯಕನಾದ ಶ್ರೀಕೃಷ್ಣನೆಂಬ ಕಲ್ಪವೃಕ್ಷವನ್ನು (ದೇವತೆಗಳ ವೃಕ್ಷವನ್ನು) ಆಶ್ರಯಿಸುತ್ತೇನೆ.

**ತದ್ವಾದಿರಾಜಹೃದ್ವಾಪೀಮಾರಭ್ಯಾಚ್ಯುತಮೂರ್ಧನಿ ।**
**ಸ್ಥಿತಾ ಮುಕ್ತಿಪುರೀಪರ್ಯಂತಂ ಚ ಯೇಯಂ ಲತೋದ್ಗತಾ ॥ ೩೮೯ ॥**

ಆ ವಾದಿರಾಜರ ಹೃದಯವೆಂಬ (ಬಾವಿಯನ್ನು ಪ್ರಾರಂಭಿಸಿ) ಕೂಪದ ಮೊದಲಾಗಿ ಶ್ರೀಹರಿಯ ಶಿರೋಪರ್ಯಂತವಾಗಿಯೂ, ಪರಮಾತ್ಮನ ಭವ್ಯವಾದ

ತಲೆಯವರೆವಿಗೂ ಮತ್ತು ಮೋಕ್ಷದ ಪರ್ಯಂತವಾಗಿಯೂ, ಯಾವ (ಭಕ್ತಿ) ಬಳ್ಳಿಯು ಬೆಳೆದಿರುವುದೋ.

**ಸಂತೋऽತ್ಸ್ಯಂತು ಫಲಾನ್ಯಸ್ಯಾಃ ಸಂತತಾನ್ಯಂತರಾಂತರಾ ।**
**ಆರೋಹಂತು ಲತಾಮೇತಾಮಾಲಂಬ್ಯಾಂತೇ ಹರೇಃ ಪುರೀಮ್ ॥ ೩೯೦ ॥**

ಸಜ್ಜನರು ಈ ಬಳ್ಳಿಯಲ್ಲಿ ಬಿಟ್ಟಿರುವ ಹಣ್ಣುಗಳನ್ನು ಸವಿಯುತಕ್ಕವರಾಗಿ, ಕವಲುಕವಲಾಗಿ ಒಡೆದಿರುವ ಈ ಬಳ್ಳಿಯನ್ನು ಆಶ್ರಯಿಸಿ ಮೇಲಕ್ಕೆ ಮೇಲಕ್ಕೆ ಹತ್ತಿದವರಾಗಿ ಕಡೆಗೆ ಈ ಭಕ್ತಿಯೆಂಬ ಬಳ್ಳಿಯ ಮೂಲಕವಾಗಿ ಶ್ರೀಹರಿಯ ಪುರಿಯಾದ ವೈಕುಂಠಸ್ಥಾನವನ್ನು ಪಡೆಯಲಿ.

**ಅನೇನ ಪ್ರೀಯತಾಂ ಶ್ರೀಶಃ ಪ್ರೀಯೇತಾಂ ವಾಣ್ಯುಮಾಪತೀ ।**
**ಸುರಾಃ ಸದಾರಾಃ ಪ್ರೀಯಂತಾಂ ಅನುಗೃಹ್ಣಂತು ನಃ ಸದಾ ॥ ೩೯೧ ॥**

ಈ ಹರಿಭಕ್ತಿಲತಾ ಎಂಬ ಕೃತಿಯ ರಚನೆಯಿಂದ ಶ್ರೀಶನು ಅಂದರೆ ಸರ್ವೋತ್ತಮನಾದ ಶ್ರೀಲಕ್ಷ್ಮೀನಾರಾಯಣನು ಸುಪ್ರೀತನಾಗಲಿ. ಬ್ರಹ್ಮ ಮತ್ತು ಪ್ರಧಾನವಾಯುದೇವರುಗಳು ತೃಪ್ತರಾಗಲಿ. ಸರಸ್ವತೀ ಮತ್ತು ಭಾರತೀದೇವಿಯವರು ಸಂತುಷ್ಟರಾಗಲಿ. ಗರುಡಶೇಷರುದ್ರರೂ, ಅವರ ಪತ್ನಿಯರಾದ ಸೌಪರ್ಣೀ ವಾರುಣೀ ಪಾರ್ವತೀದೇವಿಯವರೂ ಪ್ರೀತರಾಗಲಿ. ಪತ್ನೀಸಹಿತರಾದ ಎಲ್ಲ ದೇವತೆಗಳೂ ಸುಪ್ರೀತರಾಗಿ ಎಲ್ಲರೂ ನಮಗೆ ಸರ್ವದಾ (ಅನುಗ್ರಹಿಸಲಿ) ಅನುಗ್ರಹವನ್ನುಂಟುಮಾಡಲಿ.

**ವಾದಿರಾಜಮುನೀಂದ್ರೇಣ ಕೃತಾ ಸುಜನಸಮ್ಮತಾ ।**
**ಹರಿಭಕ್ತಿಲತಾऽಸೂತ ತೃತೀಯಾಂ ಮಂಜರೀಮಿಮಾಮ್ ॥ ೩೯೨ ॥**

ಶ್ರೀವಾದಿರಾಜರೆಂಬ ಮುನಿವರೇಣ್ಯರಿಂದ ರಚಿಸಲ್ಪಟ್ಟ ( ಮಾಡಲ್ಪಟ್ಟ ) ಸಜ್ಜನರಿಗೆ ಅತ್ಯಂತ ಸಮ್ಮತವಾದ ಶ್ರೀಹರಿಭಕ್ತಿಲತೆಯು (ಶ್ರೀಹರಿಭಕ್ತಿಯೆಂಬ ಬಳ್ಳಿಯು) ಈ ಮೂರನೇ ಹೂವಿನ ಗೊಂಚಲನ್ನು ಬಿಟ್ಟಿದೆ.

**ಇತಿ ಶ್ರೀಮತ್ಕವಿಕುಲತಿಲಕ ಶ್ರೀಮದ್ಭಾವಿಸಮೀರ ಶ್ರೀಮದ್ವಾದಿರಾಜಪೂಜ್ಯಚರಣ ವಿರಚಿತಾ ಹರಿಭಕ್ತಿಲತಾ ಸಮಾಪ್ತಾ ॥**

**॥ ಶ್ರೀಕೃಷ್ಣಾರ್ಪಣಮಸ್ತು ॥**